ಸದ್ಧರ್ಮಪ್ರಚಾರಕ ಗ್ರಂಥಮಾಲೆ-ಪುಷ್ಪ ೧೨.

# ವಿಧವಾ ವಿವಾಹ

## ಶಾಸ್ತ್ರವಿರುದ್ಧವೇ?





ಸಂಪಾದಕ ಮತ್ತು ಪ್ರಕಾಶಕ:—

ಬಿ. ಲಕ್ಷ್ಮಣದೇವ ವಿದ್ಯಾರ್ಥಿ, ಮಂಗಳೂರು.

ಪ್ರಥಮ ಮುದ್ರಣ ೧೦೦೦ ಪ್ರತಿಗಳು.



೧೯೩೪

ಮಂಗಳೂರು ಛಾಪಖಾನೆ, ರಥಬೀದಿ, ಮಂಗಳೂರು.

ಬೆಲೆ: ರೂ. ೧—೦—೦.

# ವಿಷಯಾನುಕ್ರಮಣಿಕೆ.





# ಪ್ರಸ್ತಾವನೆ.

ಮಹತ್ವಪೂರ್ಣವಾದ ಈ ಪುಸ್ತಕದ ಪ್ರಸ್ತಾವನೆಯನ್ನು ಬರಿಯಲು ಈ ವಿಷಯದಲ್ಲಿ ನಾನು ವಿಶೇಷಜ್ಞನಲ್ಲವಾದರೂ ಕಾರಣಾಂತರದಿಂದ ಬರಿಯಬೇಕಾಯಿತು.

ಪ್ರಾಚೀನಕಾಲದಲ್ಲಿ ನಮ್ಮ ಈ ಭಾರತದೇಶವು ರಾಜಕೀಯ, ಸಾಮಾಜಿಕ, ಧಾರ್ಮಿಕ ಇತ್ಯಾದಿ ಎಲ್ಲಾ ತರದ ಸ್ವತಂತ್ರದಿಂದಿದ್ದು ಇತರ ದೇಶಗಳಿಗೆ ಆದರ್ಶಮಯವಾಗಿತ್ತೆಂಬುದು ಇತಿಹಾಸವನ್ನವಲೋಕಿಸಿದಲ್ಲಿ ವಿದಿತವಾಗುವುದು. ಆಗಿನ ಕಾಲದಲ್ಲಿ ಇಲ್ಲಿಯ ಸಮಾಜ ವ್ಯವಸ್ಥೆಗಳು ಸರ್ವರ ಉನ್ನತಿಗೆ ಏಕಪ್ರಕಾರವಾಗಿ ಉತ್ತಮರೀತಿಯಲ್ಲಿದ್ದವು. ಪರಂತು ಹಲಕೆಲವು ಕಾರಣಾಂತರಗಳಿಂದ ಒಬ್ಬರ ಹಿಂದೆ ಮತ್ತೊಬ್ಬರಂತೆ ಹಲಕೆಲವು ಮಂದಿ ಪರಕೀಯರು ಈ ದೇಶದಲ್ಲಿ ತಮ್ಮ ಶಾಸನವನ್ನು ನಡಿಸತೊಡಗಿದರು. ಪರಕೀಯರ ಆಕ್ರಮಣದ ಕಾಲವು ಹಿಂದುಸ್ಥಾನದ ಜನರಿಗೆ ಬಹಳ ಭಯಂಕರತರದ್ದಾಗಿತ್ತು. ಅನೇಕರು ಈ ವಿಪತ್ತಿನಿಂದ ತಪ್ಪಲಿಕ್ಕಾಗಿ ಮತ್ತು ಸಮಾಜದ ಗೌರವವನ್ನು ರಕ್ಷಿಸಬೇಕೆಂಬ ಉದ್ದೇಶದಿಂದ ಇಲ್ಲಿಯ ಸಾಮಾಜಿಕ ಹಾಗೂ ಧಾರ್ಮಿಕ ವ್ಯವಸ್ಥೆಗಳಲ್ಲಿ ಹಲಕೆಲವು ಪರಿವರ್ತನೆಗಳನ್ನು ಮಾಡಬೇಕಾಯಿತು. ಅಂತಹ ವ್ಯವಸ್ಥೆಗಳ ಪೈಕಿ ಭಾರತಪುತ್ರರನ್ನು ಶಾಶ್ವತವಾಗಿ ನಿರ್ವೀರ್ಯರನ್ನಾಗಿ ಮಾಡುವಂತಹ ಬಾಲ್ಯವಿವಾಹವೆಂಬ ದುಷ್ಟಪದ್ಧತಿಯೂ ಒಂದಾಗಿರುತ್ತದೆ. ಆಗಿನ ಕಾಲದ ಜನರು ಇದರ ಭದ್ರತೆಗಾಗಿ ಹಲಕೆಲವು ಶಾಸ್ತ್ರಗಳ ಹವಾಲೆಯನ್ನು ಕೊಡುತ್ತಾ ಇದನ್ನು ರೂಢಿಗೆ ತಂದರು. ಪರಿಣಾಮವಾಗಿ ಹಿಂದುಸ್ಥಾನದಲ್ಲೆಲ್ಲಿಯೂ ವಿಧವೆಯರ ಸಂಖ್ಯೆಯು ಬೆಳೆಯುವಂತಾಯಿತು! ಪ್ರಕೃತ ನಮ್ಮ ದೇಶದಲ್ಲಿ ತುಂಬಿರುವ ವಿಧವೆಯರ ಸಂಕಷ್ಟವು ಎಷ್ಟೆಂಬ ವಿಷಯವು ಪ್ರತಿಯೊಬ್ಬ ಗ್ರಹಸ್ಥನಿಗೆ ವಿದಿತವಾಗಿರಲೇಬೇಕು. ವಿದೇಶೀಯರ ಪಾದಾಕ್ರಾಂತದಿಂದ ನಮ್ಮ ದೇಶವು ಹೇಗೆ ನರಳುತ್ತಿದೆಯೋ ಹಾಗೆಯೇ ನಮ್ಮ ಸಮಾಜದಲ್ಲಿರುವ ಅಮಾನುಷ

ಪದ್ಧತಿಗಳಿಂದ ಪಾದಾಕ್ರಾಂತವಾಗಿ ನರಳುತ್ತಿರುವ ನಮ್ಮ ಭಗಿನಿಯರಾದ ವಿಧವೆಯರನ್ನು ನೋಡಿದರೆ ದೇಹದಲ್ಲಿ ಆತ್ಮವಿದ್ದ ಯಾವ ವ್ಯಕ್ತಿಗಾದರೂ ಕನಿಕರ ಉಂಟಾಗದಿರದು. ಹರಿಜನೋದ್ಧಾರದ ಕಾರ್ಯವು ರಾಷ್ಟ್ರಸಂಘಟನೆಗೆ ಎಷ್ಟು ಪ್ರಾಮುಖ್ಯವಾದುದೋ, ಅಷ್ಟೇ ವಿಧವೆಯರನ್ನು ಉದ್ಧರಿಸುವುದೂ ರಾಷ್ಟ್ರೋನ್ನತಿಯ ಮುಖ್ಯ ಕಾರ್ಯವಾಗಿರುತ್ತದೆ.

ಧಾರ್ಮಿಕ, ಸಾಮಾಜಿಕ, ರಾಜನೈತಿಕವೇ ಮುಂತಾದ ಪ್ರತಿಯೊಂದು ತರದ ಉನ್ನತಿಯನ್ನು ಬಯಸುವವರಲ್ಲಿ ಆತ್ಮವಿಶ್ವಾಸ, ದೃಢತೆ, ನಿರ್ಭಯತೆ ಮುಂತಾದ ಗುಣಗಳು ಇರಬೇಕಾದದ್ದು ಆವಶ್ಯಕ. ಇವುಗಳಿಲ್ಲದವರಿಗೆ ಸಫಲತೆಯು ಎಂದೆಂದಿಗೂ ದೊರೆಯಲಿಕ್ಕಿಲ್ಲ. ಆದುದರಿಂದ ಸುಧಾರಣೆಯನ್ನು ಇಚ್ಛಿಸುವ ಪ್ರತಿಯೊಬ್ಬ ಭಾರತೀಯನೂ ಮೇಲಿನ ಗುಣಗಳನ್ನು ಧಾರಣೆಮಾಡಿ ತನ್ನ ಕಾರ್ಯವು ಸಫಲವಾಗುವಂತೆ ಅತುಲವಾದ ಸ್ಫೂರ್ತಿಯಿಂದ ಮುಂದೆ ಬರಬೇಕು.

ವಿಧವೆಯರನ್ನು ಉದ್ಧರಿಸುವುದೆಂದರೆ ಹೇಗೆ? ಎಂಬ ಪ್ರಶ್ನೆಯು ಹುಟ್ಟುವುದು ಸಹಜವೇ. ಈ ವಿಷಯದಲ್ಲಿ ಸಂಕ್ಷೇಪವಾಗಿ ಕೆಲವು ಸೂಚನೆಗಳನ್ನು ಮಾಡಲಿಚ್ಛಿಸುವೆನು. ವಿಧವೆಯರು ಪರಾವಲಂಬನೆಯಲ್ಲಿ ಬಿದ್ದು ಕಷ್ಟಪಡದಂತೆ ಅವರು ಸ್ವತಂತ್ರೋಪಾಯಗಳಿಂದ ಜೀವನವನ್ನು ನಡಿಸುವ ಬಗ್ಗೆ ಅವರ ಬಂಧುವರ್ಗದವರು ತಕ್ಕ ವ್ಯವಸ್ಥೆಯನ್ನು ಮಾಡುವುದು. ಇದು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿ ಅಲ್ಲಲ್ಲಿ ವಿಧವಾಶ್ರಮಗಳನ್ನು ನಿರ್ಮಿಸಿ, ಅವುಗಳ ಮೂಲಕ ಉತ್ತಮೋತ್ತಮವಾದ ವಿದ್ಯಾಭ್ಯಾಸ, ಕೈಗಾರಿಕೆ, ಹೊಲಿಗೆ ಇತ್ಯಾದಿಗಳ ಮೂಲಕ ಆರ್ಥಿಕ ಉನ್ನತಿಯನ್ನು ಕಲ್ಪಿಸಿಕೊಡುವುದು. ಮುಖ್ಯವಾಗಿ ಅಕ್ಷತಯೋನಿ ವಿಧವೆಯರ ಪುನರ್ವಿವಾಹದ ವ್ಯವಸ್ಥೆಗಾಗಿ ಅಲ್ಲಲ್ಲಿ ಸಂಘಗಳನ್ನು ಏರ್ಪಡಿಸುವುದು. ಬಾಲ್ಯವಿವಾಹದ ದುಷ್ಟಪದ್ಧತಿಯನ್ನು ನಾಶಪಡಿಸುವುದು. ಪುರುಷರಿಗೆ ಬಹುವಿವಾಹವನ್ನು ಮಾಡಿಕೊಳ್ಳುವರೆ. ಈಗಿನ ಹಿಂದೂಸಮಾಜವು ಹೇಗೆ ಅಧಿಕಾರವನ್ನೀಯು

ತ್ತದೋ ಹಾಗೆಯೇ ಕ್ಷತಯೋನಿ ವಿಧವೆಯರಲ್ಲಿ ಇಚ್ಛೆಪಟ್ಟವರಿಗೆ ಪುನರ್ವಿವಾಹವನ್ನು ಮಾಡುವರೆ ಅಧಿಕಾರವನ್ನು ಕಲ್ಪಿಸಿಕೊಡುವುದು ಇತ್ಯಾದಿ.

ವಿಧವಾ ಪುನರ್ವಿವಾಹ ಶಬ್ದವನ್ನು ಕೇಳಿ ನಮ್ಮ ಸಾಂಪ್ರದಾಯವಾದಿಗಳು ಇದು ಶಾಸ್ತ್ರವಿರುದ್ಧ, ಪತಿವ್ರತಾಧರ್ಮ ವಿರುದ್ಧ ಇತ್ಯಾದಿ ದೊಡ್ಡದೊಡ್ಡ ಆಕ್ಷೇಪಗಳನ್ನೆತ್ತುವರು. ಅವರಲ್ಲಿ ನನ್ನ ಅರಿಕೆಯೇನಂದರೆ:— ಪತಿಯೆಂದರೇನು? ವಿವಾಹವೆಂದರೇನು? ಎಂಬ ತಿಳುವಳಿಕೆಯು ತಿಲಾಂಶವಾದರೂ ಇಲ್ಲದ ಚಿಕ್ಕಮಕ್ಕಳಿಗೆ ಮದುವೆಯನ್ನು ಮಾಡಿಸಿ ಪತಿ ಸತ್ತ ಕೂಡಲೆ ಬಲಾತ್ಕಾರದಿಂದ ಸನ್ಯಾಸ ಧರ್ಮವನ್ನು ಕೊಟ್ಟು ನಿರ್ಬಂಧದ ಆ ಸನ್ಯಾಸಧರ್ಮವನ್ನು ಆಚರಿಸುವ ಸಾಮರ್ಥ್ಯ ಇಲ್ಲದೆ ತಮ್ಮ ಜೀವನವನ್ನು ನರಕಪ್ರಾಯವಾಗಿ ಮಾಡುವ ಬದಲು, ಆಪದ್ಧರ್ಮವಾಗಿ ಪುನರ್ವಿವಾಹವನ್ನು ಮಾಡಿಸುವುದು ಹಿತವಲ್ಲವೆ? ವಿಧವಾ ಪುನರ್ವಿವಾಹದ ಲಕ್ಷಣವಾದರೂ ಉತ್ತಮದ್ದೇ ಆಗಿರುತ್ತದೆ.

ಬಾಲ್ಯವಿವಾಹವು ಯಾವ ಕಾಲದ ವರೆಗೆ ಇರುವುದೋ, ಆ ತನಕ ಸಮಾಜಕ್ಕುಂಟಾಗುವ ಬಹುವಿಧದ ಹಾನಿಗಳನ್ನು ನಿಲ್ಲಿಸುವುದಕ್ಕಾಗಿ, ರಾಷ್ಟ್ರದ ಅವನತಿಯನ್ನು ತಡೆಗಟ್ಟುವುದಕ್ಕಾಗಿ ವಿಧವಾ ವಿವಾಹವನ್ನು ಆಪದ್ಧರ್ಮವಾಗಿ ಆಚರಿಸುವುದು ಅತ್ಯಗತ್ಯ. ಸಾಂಪ್ರದಾಯವಾದಿಗಳು ವಿಧವೆಯರಿಗೆ ಬಲಾತ್ಕಾರದಿಂದ ಸನ್ಯಾಸವನ್ನು ಕೊಡುವಂತೆ ಪ್ರತಿಯೊಬ್ಬ ವಿಧವೆಯು ಪುನರ್ವಿವಾಹವನ್ನು ಮಾಡಿಕೊಳ್ಳಲೇ ಬೇಕೆಂಬುದು ನನ್ನಭಿಪ್ರಾಯವಲ್ಲ. ಪರಂತು ಜೀವನ ನಿರ್ವಾಹಕ್ಕೆ ಸಾಧ್ಯವಿಲ್ಲದ ಮತ್ತು ಮುಖ್ಯವಾಗಿ ವಿವಾಹವನ್ನು ಇಚ್ಛಿಸುವ ವಿಧವೆಯರಿಗೆ ನಿರ್ಬಂಧದ ಸನ್ಯಾಸಕ್ಕಿಂತ ಪುನರ್ವಿವಾಹವೇ ಪರಮ ಲೇಸು.

ಈ ವರೆಗೆ ವ್ಯಕ್ತಿಗತ ಪ್ರಶ್ನೆಗಳನ್ನು ಬಿಟ್ಟು ಸಾರ್ವಜನಿಕ ಮತ್ತು ಸಾಮಾಜಿಕ ಪ್ರಶ್ನೆಗಳಲ್ಲಿ ಪ್ರವೇಶಿಸದ ನನ್ನ ಹಿಂದೂಸಮಾಜದ ಪ್ರತಿಯೊಬ್ಬ ವ್ಯಕ್ತಿಯೊಡನೆ ನಾನು ಪ್ರಾರ್ಥಿಸುವುದೇನೆಂದರೆ:—

ಇನ್ನಾದರೂ ಸಮಾಜದ ಪ್ರತಿಯಾಗಿ, ನಮ್ಮ ರಾಷ್ಟ್ರದ ಪ್ರತಿಯಾಗಿ, ತನ್ನ ಜವಾಬ್ದಾರಿಯನ್ನು ತಿಳಕೊಂಡು ಸಮಾಜ ಸುಧಾರಣೆಯ ವಿಶೇಷವಾಗಿ ಅಸಹಾಯ ವಿಧವೆಯರ ಜೀವನವನ್ನು ಸುಖಮಯ ವಾಗಿ ಮಾಡುವ ಮತ್ತು ಅವರ ಸಂಕಷ್ಟಗಳನ್ನು ಪರಿಹರಿಸುವ ಪವಿತ್ರವೂ ಪುಣ್ಯದಾಯಕವೂ ಆದ ಕಾರ್ಯದಲ್ಲಿ ಶ್ರದ್ಧೆ ಮತ್ತು ಉತ್ಸಾಹದಿಂದ ಭಾಗವಹಿಸಿ ತಮ್ಮ ಜೀವನವನ್ನು ಸಫಲಗೊಳಿಸ ಬೇಕು. ಸದ್ಧರ್ಮ ಪ್ರಚಾರಕ ಗ್ರಂಥಮಾಲೆಯ ಸಂಪಾದಕರಾದ ಶ್ರೀ। ಬಿ. ಲಕ್ಷ್ಮಣದೇವ ವಿದ್ಯಾರ್ಥಿಯವರು ಈ ಪುಸ್ತಕದಲ್ಲಿ ವಿಧವಾ ವಿವಾಹವನ್ನು ವಿರೋಧಿಸುವವರ ಸಂಶಯಗಳನ್ನು ಒಳ್ಳೇ ಮಾರ್ಮಿಕ ಆಧಾರದಿಂದ ಸಮಾಧಾನ ಪಡಿಸಿರುತ್ತಾರೆ. ಮತ್ತು ವಿಧವಾ ವಿವಾಹಕ್ಕೆ ಪ್ರಮಾಣವಾಗಿ ಕೊಟ್ಟ ಧಾರ್ಮಿಕ ಮತ್ತು ಐತಿಹಾಸಿಕ ಆಧಾರಗಳನ್ನು ನೋಡಿದರೆ ಅವುಗಳನ್ನು ಖಂಡಿಸುವದು ಅಸಂಭವ ವೆಂದೇ ಹೇಳಬೇಕಾಗುತ್ತದೆ. ವಿಧವಾವಿವಾಹಕ್ಕೆ ಯಾರು ಜನ್ಮಬದ್ಧ ವಿರೋಧಿಗಳೋ ಅವರಲ್ಲಿ ನನ್ನದೊಂದು ವಿನಂತಿ ಏನೆಂದರೆ—ತಾವು ಕೂಡ ಈ ಮಹತ್ವಪೂರ್ಣವಾದ ಗ್ರಂಥವನ್ನು ಸಾವಧಾನದಿಂದ ಆದ್ಯೋಪಾಂತ ಓದಬೇಕು; ಮತ್ತು ಇದರಲ್ಲಿ ಕೊಟ್ಟ ಅಕಾಟ್ಯ ಪ್ರಮಾಣಗಳನ್ನು ಶಾಂತಚಿತ್ತದಿಂದ ತಿಳಕೊಳ್ಳಬೇಕು. ಈ ಪುಸ್ತಕ ವನ್ನು ಜನತೆಯು ಬಹಳ ಆದರ ದೃಷ್ಟಿಯಿಂದ ನೋಡುವುದು, ಮತ್ತು ಇದರಿಂದ ಪೂರ್ಣ ಲಾಭವನ್ನು ಹೊಂದುವದೆಂದು ನನಗೆ ಪೂರ್ಣ ವಿಶ್ವಾಸವಿದೆ. ಈ ರೀತಿಯಲ್ಲಿ ಎಲ್ಲಾ ದೃಷ್ಟಿಯಿಂದ ವಿಮರ್ಶಿಸಿ ವಿವರಿಸಿರುವ ಪುಸ್ತಕವು ನಮ್ಮ ಕನ್ನಡ ಭಾಷೆಯಲ್ಲಿ ಈ ವರೆಗೆ ಪ್ರಕಾ ಶಿತವಾಗಿಲ್ಲವೆಂದು ಹೇಳಿದರೆ ತಪ್ಪಾಗಲಾರದು. ಸಮಾಜ ಸೇವೆ ಗಾಗಿಯೂ, ಸಾಹಿತ್ಯಸೇವೆಗಾಗಿಯೂ ಸಮಾಜದ ಪರವಾಗಿ ನಾನು ಇದರ ಸಂಪಾದಕರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಮಂಗಳೂರು,
1—12—1934.

ಸಮಾಜ ಸೇವಕ
ಕಾರ್ನಾಡ ಸದಾಶಿವರಾವ್.

# ಸಂಪಾದಕನ ಎರಡು ಮಾತು.

"ಈ ಪೃಥ್ವಿಯಲ್ಲಿ ಸ್ತ್ರೀ ಎಂಬವಳು ಒಂದು ರಮಣೀಯವಾದ ಉದ್ಯಾನದಂತಿರುವಳು. ಈ ಉದ್ಯಾನದಲ್ಲಿ ವಿಶ್ವಾಸವೆಂಬ ತರುಲತೆಗಳು ಕಂಗೊಳಿಸುತ್ತಿರುವವು. ಪ್ರೇಮವೆಂಬ ಪುಷ್ಪಗಳು ವಿಹರಿಸುತ್ತಿರುವವು. ಇವುಗಳ ಮಧ್ಯೆ ದಯೆ ಮತ್ತು ಭಕ್ತಿಗಳೆಂಬ ಪಕ್ಷಿಗಳು ಸದಾ ವಾಸಿಸುತ್ತಿರುವವು. ಶಾಂತಿ ಮತ್ತು ಕ್ಷಮೆ ಎಂಬ ಒಸರುಗಳು ಇದರಲ್ಲಿಯೇ ನಿರಂತರ ಹರಿಯುತ್ತಿರುವವು. ಈ ಒಸರುಗಳೇ ಕಠೋರತೆಯಿಂದ ಒಣಗಿಹೋಗಿರುವ ಪುರುಷಹೃದಯವೆಂಬ ವೃಕ್ಷವನ್ನು ನವೀನ ಉತ್ಸಾಹಗಳೆಂಬ ಎಳೆ ಚಿಗುರುಗಳಿಂದ ಪುನರುಜ್ಜೀವನಗೊಳಿಸುವವು. ಇಂತಹ ಸ್ತ್ರೀಯರಿಂದಲೇ ಮಾನವ ಸಮಾಜವು ನಿರಂತರ ಸ್ವರ್ಗಸುಖದಲ್ಲಿರುವುದು."

—*Lord Byron.*

ಪ್ರಕೃತಿಯು ಸ್ತ್ರೀಯರ ಒಂದು ದೊಡ್ಡ ಸಮುದಾಯವನ್ನು ಅವಿವಾಹಿತೆಯರನ್ನಾಗಿರಿಸುವ ಉದ್ದೇಶದಿಂದ ಸೃಷ್ಟಿಸಲಿಲ್ಲ. ಸ್ತ್ರೀಯರೆಲ್ಲರೂ ಮಾನವಸಮುದಾಯದ ಮಧ್ಯದಲ್ಲಿ ಗೃಹಲಕ್ಷ್ಮಿ, ಅನ್ನಪೂರ್ಣೆಯರು, ಗೃಹದೇವಿಯರಾಗಿರಬೇಕೆಂಬುದೇ ಪ್ರಕೃತಿಮಾತೆಯ ಉದ್ದೇಶವಾಗಿರುತ್ತದೆ. ಮಹಿಳಾಸಮಾಜದ ಹೃದಯದ ಅಂತರಾಳದಲ್ಲಿ ಈ ಇಚ್ಛೆಯೇ ಸದಾ ವಾಸಿಸಿಕೊಂಡಿರುತ್ತದೆ. ಮಹಿಳೆಯರ ಸಹಕಾರದಿಂದಲೇ ಪುರುಷರ ಜೀವನದಲ್ಲಿ ಪ್ರಸನ್ನತೆ ಮತ್ತು ಶಕ್ತಿಯ ಸಂಚಾರ ಉಂಟಾಗುತ್ತದೆ. ಇದರಿಂದಲೇ ಅವರು ಜೀವನನಿರ್ವಾಹದ ಉದ್ದೇಶವನ್ನು ಸಫಲತಾಪೂರ್ವಕ ನೆರವೇರಿಸಬಲ್ಲರು."

**ಆಚಾರ್ಯ ಭಗವಾನ್‌ದಾಸ್.**

ಇಂತಹ ಉತ್ತಮ ಭಾವನೆಗಳು ಹಿಂದಿನ ಕಾಲದಂತೆ ಇಂದಿಗೂ ಮಹಿಳೆಯರ ಕುರಿತು ನಮ್ಮಲ್ಲಿ ಅನೇಕರಲ್ಲಿ ನೆಲೆನಿಂತಿವೆ. ಪರಂತು ಹಿಂದೂಸಮಾಜವಾದರೋ ತನ್ನ ಸಾಮಾಜಿಕ ವ್ಯವಸ್ಥೆಯನ್ನು ಬಹು ವಿಧದ ಸ್ವಾರ್ಥಗಳನ್ನು ಮುಂದಿಟ್ಟುಕೊಂಡು ಬಹಳ ಸಂಕುಚಿತಗೊಳಿಸಿ ಬಿಟ್ಟಿದೆ. ಸೃಷ್ಟಿನಿಯಮದ ಕಡೆಗೆ ನಾವು ನಮ್ಮ ವಿಚಾರಸರಣಿಯನ್ನು ಪಸರಿಸುವುದಿಲ್ಲ. ಭಗವಂತನ ಸೃಷ್ಟಿಯ ವಿಧಿವಿಧಾನದಲ್ಲಿ ಯಾವ ತರಹದ ಪಕ್ಷಪಾತವೂ ಕಂಡುಬರುವುದಿಲ್ಲ. ಆತನು ಸಮಸ್ತ ಪ್ರಾಣಿಗಳೊಂದಿಗೆ ಸ್ವತಂತ್ರ ಬುದ್ಧಿಶಾಲಿಯಾದ ಮಾನವಸಮಾಜವನ್ನು ಏನೊಂದೂ ಪಕ್ಷಪಾತವಿಲ್ಲದೆ ನಿರ್ಮಿಸಿದ್ದಾನೆ. ಪರಂತು ಸಮಾಜವು ಮಾತ್ರ ತನ್ನ ಅಭಿಲಾಷೆಯ ಪೂರ್ತಿಗಾಗಿ ಕೆಲವು ಭೇದಗಳನ್ನು ಕಲ್ಪಿಸಿಕೊಂಡಿತು. ಇದರಲ್ಲಿ ಕೆಲವು ಸಮಾಜಕ್ಕೆ ಬಹಳ ಹಾನಿಕಾರಕವಾಗಿ ಪರಿಣಮಿಸಬಹುದೆಂಬುದನ್ನು ಸಮಾಜವು ತಿಳಿದುಕೊಳ್ಳಲು ಯತ್ನಿಸಲಿಲ್ಲ. ಇದರಿಂದಾಗಿಯೇ ಹಿಂದೂಸಮಾಜವು ವರ್ತಮಾನಕಾಲದಲ್ಲಿ ಬಹಳ ಹೀನಾವಸ್ಥೆಗೆ ಬಂದು ಮುಟ್ಟಿತು. ಆದೊಂದು ಕಾಲದಲ್ಲಿ ಈ ಸಮಾಜದ ಸಮಸ್ತ ಆಚಾರವಿಚಾರಗಳು ಜಗತ್ತಿನಲ್ಲಿರುವ ಸರ್ವ ಜನಾಂಗಕ್ಕೆ ಮಾನ್ಯವಾಗಿದ್ದವು. ಆದರೆ ಸಮಾಜವು ವಿಚಾರ ಸಂಕೀರ್ಣತೆ ಎಂಬ ಕಂಟಕಮಯವಾದ ಮಾರ್ಗವನ್ನವಲಂಬಿಸಿದಂದಿನಿಂದ ಇತರ ಜನಾಂಗದ ಮುಂದೆ ಅವಹೇಳನಕ್ಕೆ ಬಲಿಯಾಗಿಬಿತ್ತು. ಭಾರತೀಯ ಜನಾಂಗದ ಒಂದಂಗವಾದ ಪುರುಷಸಮಾಜವು ತನ್ನ ಇನ್ನೊಂದಂಗವಾದ ಸ್ತ್ರೀಸಮಾಜವನ್ನು ಸಂಪೂರ್ಣವಾಗಿ ತನ್ನಧೀನದಲ್ಲಿರಿಸಿ ಅದರೊಂದಿಗೆ ಸರ್ವ ವಿಧದ ಪಕ್ಷಪಾತಪೂರಿತ ವ್ಯವಹಾರವನ್ನು ನಡಿಸತೊಡಗಿತು. ತನ್ನ ಸ್ವಾರ್ಥಸಿದ್ಧಿಯ ಸುಗಮತೆಗಾಗಿ ಮೊತ್ತಮೊದಲು ಇದು ವಿವಾಹದ ಪ್ರಾಚೀನ ಮರ್ಯಾದೆಯ ಮೇರೆಯನ್ನು ಪರಿವರ್ತಿಸಿ ಏಕಪಕ್ಷವಾದ ನಿಯಮಗಳನ್ನು ಸ್ತ್ರೀಯರ ಮೇಲೆ ನಿರ್ಬಂಧವಾಗಿ ಹೊರಿಸಿತು. ವಿವಾಹದ ನಿಜವಾದ ಮಹತ್ವವನ್ನು ಮಹಿಳೆಯರು ತಿಳಿದುಕೊಳ್ಳದಂತೆ ಎಲ್ಲರನ್ನೂ ನಿರಕ್ಷರ

ರನ್ನಾಗಿರಿಸಲು ಶಾಸ್ತ್ರಗ್ರಂಥಗಳ ಮಧ್ಯೆ ಕೆಲವು ನಿರ್ಬಂಧನೆಗಳನ್ನು ಅನೇಕರು ಸೇರಿಸಿಬಿಟ್ಟರು. ಆದರೆ ಇಂತಹ ಕುತ್ಸಿಕ ವ್ಯವಹಾರದ ಪರಮಾವಧಿಯ ಪರಿಣಾಮವನ್ನು ಇಂದಿಗೆ ಹಿಂದೂ ಜನಾಂಗದಲ್ಲಿ ಪುರುಷಸಮಾಜವೇ ಭೋಗಿಸುತ್ತಿದೆ.

## ವಿವಾಹ.

ಸ್ತ್ರೀಯರ ಜೀವನಸರ್ವವೂ ಬ್ರಹ್ಮಚರ್ಯೆ, ಆಧ್ಯಾತ್ಮಿಕ ಉನ್ನತಿಗಾಗಿ ಮಾತ್ರವಲ್ಲದೆ ಐಹಿಕ ಆನಂದವನ್ನನುಭವಿಸಲಿಕ್ಕೂ ಹಕ್ಕುಳ್ಳದ್ದಾಗಿರುತ್ತದೆ ಎಂಬ ವಿಶಾಲವಿಚಾರವು ವರ್ತಮಾನಕಾಲದ ಹಿಂದೂಸಮಾಜದಲ್ಲಿಲ್ಲ. ಇರುತ್ತಿದ್ದರೆ ಅದೆಷ್ಟೋ ಕನ್ಯೆಯರನ್ನು ಅನಿಯಮಿತ ಸಮಯದಲ್ಲಿ ವಿವಾಹ ಬಂಧಿಯಲ್ಲಿ ಬಂಧಿಸಿ ಯುಕ್ತವಾದ ಸಮಯದಲ್ಲಿ ಅವರನ್ನು ನರಕಾಗ್ನಿಯಲ್ಲಿ ದೂಡಿ ಸಮಾಜವನ್ನು ಕೆಡಿಸುತ್ತಿದ್ದಿಲ್ಲ. ವಿದ್ಯಾಭ್ಯಾಸವನ್ನು ಪಡೆಯುವಂತಹ ಬಾಲ್ಯಪ್ರಾಯದಲ್ಲಿ ಕನ್ಯೆಯರನ್ನು ವಿವಾಹಕ್ಕೆ ಬಲಿಕೊಟ್ಟು ಯವ್ವನದಲ್ಲಿ ಪತಿಯನ್ನು ಕಳಕೊಂಡ ಮೇಲೆ "ಜೀವನ ಪರ್ಯಂತ ಬ್ರಹ್ಮಚರ್ಯದಲ್ಲಿರಿ" ಎಂಬ ಕಾನೂನನ್ನು ಪುರುಷಸಮಾಜವು ಅವರ ಮೇಲೇರಿಸುತ್ತದೆ. ಪರಂತು ಎಂಭತ್ತುವರ್ಷ ಪ್ರಾಯದ ಜರಡು ಮುದುಕರ ಪುನರ್ವಿವಾಹಗಳನ್ನು "ಸ್ಮಶಾನಯಾತ್ರೆ" ಎಂದು ಪರಿಗಣಿಸಿ ತಡೆಗಟ್ಟುವ ಸಾಹಸವು ಸಮಾಜದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. "ಪ್ರೊಫೆಸರ್ ಆನಂದು ಶಂಕರ ಬಿ. ಧ್ರುವ" ಎಂಬವರು ಹೇಳುವಂತೆ—"ಆಧುನಿಕ ಭಾರತ ವರ್ಷವು ವಿಜ್ಞಾನಸಾಹಿತ್ಯ, ರಾಜನೀತಿ, ಸಾಮಾಜಿಕ ಮತ್ತು ಧಾರ್ಮಿಕ ಪರಿವರ್ತನೆಯ ಕಾರ್ಯದಲ್ಲಿ ಒಂದು ಮಹತ್ವಾದ ಲಕ್ಷಣವನ್ನು ಪ್ರಕಟಗೊಳಿಸಿತು. ಮಹಿಳೆಯರೂ ಇದರಲ್ಲಿ ಪ್ರಮುಖಭಾಗವನ್ನು ವಹಿಸುತ್ತಿದ್ದಾರೆ....... ಆದರೆ ಇದರೊಂದಿಗೇನೇ ಸ್ತ್ರೀಯರ ಎಲ್ಲಾದಕ್ಕಿಂತಲೂ ಹೆಚ್ಚಿನ ಉತ್ತರದಾಯಿತ್ವದ ಕಾರ್ಯವು ವಿವಾಹ ಮತ್ತು ಅದರಿಂದುಂಟಾಗುವ ಜವಾಬ್ದಾರಿಕೆಯ ರಕ್ಷಣೆ" ಎಂಬ ತತ್ವವನ್ನು ಮೂಕ ಮತ್ತು ಕಿವುಡ ಹೃದಯಿಯಾದ ಹಿಂದೂ

ಸಮಾಜವು ವಿಚಾರಕ್ಕೆ ತಂದುಕೊಳ್ಳದೆ ಅಸಂಖ್ಯಾತ ತರುಣಿಯರನ್ನು ವೈಧವ್ಯದ ಬಲೆಯಲ್ಲಿ ಬಂಧಿಸಿಟ್ಟಿದೆ. ಭಾರತವರ್ಷದಲ್ಲಿ ಹೆಚ್ಚುತ್ತಿರುವ ವಿಧವೆಯರ ಸಂಖ್ಯೆಗೆ ಹಿಂದೂಸಮಾಜದಲ್ಲಾಗುವ ಬಾಲ್ಯವಿವಾಹ ಗಳೇ ಹೆಚ್ಚಿನ ಸಹಕಾರಿಯಾಗಿವೆ. ವರ್ತಮಾನಕಾಲದ ಹಿಂದೂ ಸಮಾಜವು ಬಾಲ್ಯವಿವಾಹದ ವ್ಯವಸಾಯದಲ್ಲಿಯೇ ಬಹಳ ಮುಂದು ವರಿಸಿದೆ. ಇದಕ್ಕೆ ದೃಷ್ಟಾಂತವಾಗಿ ಸರಕಾರದ ವರದಿಯನ್ನೇ ಇಲ್ಲಿ ವಿವರಿಸುತ್ತೇವೆ.

### ೧೯೨೧ರಲ್ಲಿ ಆದ ಬಾಲ್ಯವಿವಾಹ.

೫ ವರ್ಷಕ್ಕಿಂತ ಕಡಿಮೆ ಪ್ರಾಯದ ಬಾಲಕರು ೧,೧೦,೦೦೦ ಮಂದಿ. ಬಾಲಕಿಯರು ೨,೧೮,೦೦ ಮಂದಿ.

### ೧೯೩೧ರಲ್ಲಿ ಆದ ಬಾಲ್ಯವಿವಾಹ.

| ಪ್ರಾಯ (ವರ್ಷ) | ಬಾಲಕರು | ಪ್ರಾಯ (ವರ್ಷ) | ಬಾಲಕಿಯರು |
|---|---|---|---|
| ೫ | ೪,೨೯,೦೦೦ | ೫ | ೮,೨,೦೦೦ |
| ೫—೧೦ | ೧೮,೮೪,೦೦೦ | ೫—೧೦ | ೪,೨೦,೦೦೦ |
| ೧೦—೧೫ | ೩೨,೧೮,೦೦೦ | ೧೦—೧೫ | ೭೨,೬೯,೦೦೦ |
| ೧೫—೨೦ | ೬೯,೫೬,೦೦೦ | | |

೧೯೨೧ಕ್ಕಿಂತ ೧೯೩೧ರಲ್ಲಿ ಬಾಲ್ಯವಿವಾಹವು ಎಷ್ಟು ಹೆಚ್ಚಿದೆ ಎಂಬುದು ಮೇಲಿನ ಸಂಖ್ಯೆಗಳಿಂದ ಗೊತ್ತಾಗುತ್ತದೆ.

### ೧ ವರ್ಷದಿಂದ ೫ ವರ್ಷ ವರೆಗಿನ ಪ್ರಾಯದ ಮಕ್ಕಳ ವಿವಾಹ ಸಂಖ್ಯೆ.

| ಪ್ರಾಯ (ವರ್ಷ) | ಬಾಲಕರು | ಬಾಲಕಿಯರು |
|---|---|---|
| ೧ | ೩೬,೮೮೨ | ೪೪,೦೮೨ |
| ೧—೨ | ೪೧,೨೨೮ | ೬೩,೯೫೪ |
| ೨—೩ | ೬೩,೩೭೫ | ೧,೧೪,೦೯೯ |
| ೩—೪ | ೧,೧೮,೮೪೪ | ೨,೩೨,೮೧೩ |
| ೪—೫ | ೧,೬೮,೮೯೭ | ೩,೪೬,೯೦೪ |

೧೯೩೧ನೇ ಫೆಬ್ರುವರಿ ತಿಂಗಳಲ್ಲಿ ಒಂದು ವರ್ಷಕ್ಕಿಂತಲೂ ಕಡಿಮೆ ಪ್ರಾಯದ ೩೬೮೮೨ ಮಂದಿ ಬಾಲಕರಿಗೂ ೪೪೦೮೨ ಮಂದಿ ಬಾಲಕಿಯರಿಗೂ ವಿವಾಹಗಳಾಗಿರುತ್ತವೆ.

## ೧೯೩೧ರಲ್ಲಿ ಹಿಂದುಸ್ಥಾನದ ಬೇರೆಬೇರೆ ಪ್ರಾಂತ್ಯಗಳಲ್ಲಿ ಆದ ಬಾಲ್ಯವಿವಾಹದ ಸಂಖ್ಯೆ:—

| ಪ್ರಾಂತ್ಯ ಅಥವಾ ದೇಶೀಯ ಸಂಸ್ಥಾನಗಳು. | ಪ್ರತಿ ೧೦೦ರಲ್ಲಿ ವಿವಾಹಿತ ಬಾಲಕರು ೫–೧೦ ವರ್ಷಗಳ ವರೆಗಿನವರು | ಪ್ರತಿ ೧೦೦ರಲ್ಲಿ ವಿವಾಹಿತ ಬಾಲಕರು ೧೦–೧೫ ವರ್ಷಗಳ ವರೆಗಿನವರು | ಪ್ರತಿ ೧೦೦ರಲ್ಲಿ ವಿವಾಹಿತ ಬಾಲಿಕೆಯರು ೫–೧೦ ವರ್ಷಗಳ ವರೆಗಿನವರು | ಪ್ರತಿ ೧೦೦ರಲ್ಲಿ ವಿವಾಹಿತ ಬಾಲಿಕೆಯರು ೧೦–೧೫ ವರ್ಷಗಳ ವರೆಗಿನವರು |
|---|---|---|---|---|
| ಬಿಹಾರ್ ಒರಿಸ್ಸಾ | ೧೭·೦ | ೨೮·೫ | ೨೮·೧ | ೪೮·೫ |
| ಮಧ್ಯ ಪ್ರಾಂತ್ಯ | ೧೬·೨ | ೨೯·೫ | ೩೩·೯ | ೫೬·೬ |
| ಹೈದರಾಬಾದು | ೧೪·೭ | ೨೬·೭ | ೩೭·೦ | ೬೦·೬ |
| ಸಂಯುಕ್ತ ಪ್ರಾಂತ್ಯ | ೧೪·೦ | ೨೫ ೫ | ೨೪·೪ | ೪೮·೭ |
| ಮಧ್ಯ ಹಿಂದುಸ್ಥಾನ | ೧೦ ೮ | ೨೨·೭ | ೨೪·೦ | ·೧ |
| ಬರೋಡ ರಾಜ್ಯ | ೮·೬ | ೧೯·೭ | ೨೯·೫ | ೪೪·೧ |
| ಮುಂಬೈ ಪ್ರಾಂತ್ಯ | ೭·೩ | ೧೪·೭ | ೨೫·೦ | ೪೬·೧ |
| ಗ್ವಾಲಿಯರ್ ರಾಜ್ಯ | ೬·೮ | ೧೭·೩ | ೨೧·೨ | ೪೬·೧ |
| ರಜಪುತಾನ | ೬·೨ | ೧೫·೦ | ೧೮·೪ | ೪೨·೦ |
| ಬಂಗಾಲ | ೪·೪ | ೯ ೦ | ೨೬·೦ | ೫೦·೫ |
| ಪಂಜಾಬು | ೩·೮ | ೧೦·೨ | ೧೧·೯ | ೩೧·೩ |
| ಕಾಶ್ಮೀರ ರಾಜ್ಯ | ೩·೦ | ೫·೯ | ೬·೯ | ೨೮·೦ |
| ಮದ್ರಾಸು | ೨·೦ | ೪·೪ | ೧೦·೧ | ೨೩·೭ |
| ಅಸ್ಸಾಮ್ ಪ್ರಾಂತ್ಯ | ೦ ೯ | ೨·೭ | ೬·೬ | ೨೨·೮ |
| ಉತ್ತರ ಪಶ್ಚಿಮ ಸೀಮೆ | ೦·೯ | ೩·೦ | ·೫ | ೧೭·೯ |
| ಮೈಸೂರು ರಾಜ್ಯ | ೦·೧ | ೦·೬ | ೫·೧ | ೧೯·೭ |
| ತಿರುವಾಂಕೂರು ರಾಜ್ಯ | ೦·೧ | ೦·೬ | ೦·೭ | ೭·೩ |

ಮೇಲಿನ ವಿಶಾಲವಾದ ಸಂಖ್ಯೆಯು ಹಿಂದೂಸ್ಥಾನದಲ್ಲಿ ರೂಢಿಯಲ್ಲಿರುವ ಬಾಲ್ಯವಿವಾಹದ ಸಂಪೂರ್ಣ ಚಿತ್ರವನ್ನು ತೋರಿಸುತ್ತದೆ. ಇದರಿಂದಲೇ ಹಿಂದೂಸಮಾಜದ ನಿಜಸ್ಥಿತಿಯು ಹೇಗಿದೆ ಎಂಬುದು ವ್ಯಕ್ತವಾಗುತ್ತದೆ. ಇಂತಹ ವಿವಾಹಗಳಿಂದಲೇ ದೇಶದಲ್ಲಿ ವಿಧವೆಯರ ಸಂಖ್ಯೆಯು ದಿನೇದಿನೇ ಹೆಚ್ಚುತ್ತಿದೆ; ಮತ್ತು ಅದರಿಂದಾಗಿ ಸಮಾಜದಲ್ಲಿ ಬಹು ವಿಧದ ಅನಾಚಾರಗಳು ಹರಡುತ್ತವೆ. ಹಿಂದೂ ಸಮಾಜವು ವಿಧವೆಯರ ಪುನರ್ವಿವಾಹಕ್ಕೆ ಇನ್ನೂ ಪೂರ್ಣ ಸಮ್ಮತಿಯನ್ನೀಯಲು ಮುಂದೆ ಬಂದಿಲ್ಲ. ಇದರಿಂದಾಗಿ ಎಷ್ಟೋ ಕುಟುಂಬಗಳು ನಾಶವಾಗುತ್ತಿವೆ. ಶಾಸ್ತ್ರವಾದಿಗಳೂ ವಿಧವೆಯರ ಪುನರ್ವಿವಾಹಕ್ಕೆ ಹೆಚ್ಚಿನ ತಡೆಯನ್ನುಂಟುಮಾಡುತ್ತಾರೆ. ಆದರೆ ಧರ್ಮಶಾಸ್ತ್ರ, ರಾಷ್ಟ್ರದ ಉನ್ನತಿ, ಸಮಾಜೋನ್ನತಿ ಮುಂತಾದವುಗಳ ದೃಷ್ಟಿಯಿಂದ ನೋಡುವುದಾದರೆ ವಿಧವಾವಿವಾಹವು ವರ್ತಮಾನ ಕಾಲದಲ್ಲಿ ನ್ಯಾಯಯುಕ್ತವಾದುದೆಂಬುದು ಸರಿಯಾಗಿ ಒಡೆದು ಕಾಣುತ್ತವೆ. ಈ ವಿಷಯವನ್ನು ಜನತೆಯ ಮುಂದಿಡುವ ಉದ್ದೇಶದಿಂದಲೆ "ವಿಧವಾವಿವಾಹವು ಶಾಸ್ತ್ರವಿರುದ್ಧವೇ" ಎಂಬ ಈ ಪುಸ್ತಕವನ್ನು ಬರೆದಿರುವೆನು. ಇದನ್ನು ಎಲ್ಲರೂ ಓದಿ ವರ್ತಮಾನಕಾಲದ ನಿರ್ಭಾಗ್ಯಶಾಲಿ ವಿಧವೆಯರ ಉದ್ಧಾರದ ಬಗ್ಗೆ ಪ್ರತಿಯೊಬ್ಬರೂ ಪ್ರತಿಯೊಂದು ವಿಧದಲ್ಲಿ ಪ್ರಯತ್ನವನ್ನು ಗೈದರೆ ನನ್ನ ಇದೊಂದು ಪರಿಶ್ರಮವು ಸಫಲವಾದಂತಾಗುವುದು. ಇದರ ಪ್ರಕಾಶನ ಕಾರ್ಯದಲ್ಲಿ ಮುಕ್ತಹಸ್ತದಿಂದ ಸಹಾಯವನ್ನಿತ್ತ ಶ್ರೀಮಾನ್ ಗಣಪತಿ ನಾರಾಯಣ ಭಟ್, ಅಕ್ಕಾದಾಸ್ ಶಿರ್ಸಿ, ಮತ್ತು ಕೆ. ಯಮ್. ರಾಮರಾವ್, ಕಳಸಾಪುರ ಈ ಮಹನೀಯರಿಗೆ ನನ್ನ ಅನಂತ ವಂದನೆಗಳು.

ಕನ್ನಡ ವಾಙ್ಮಯದಲ್ಲಿ ಪಾಂಡಿತ್ಯವನ್ನು ಗಳಿಸದಿದ್ದವನಾದರೂ ಕೇವಲ ಸಮಾಜಸುಧಾರಣೆಯ ಉದ್ದೇಶದಿಂದಲೇ ಹಲವು ಗ್ರಂಥಗಳ ಆಧಾರದಿಂದ ಬರೆದಿರುವ ಈ ಪುಸ್ತಕದಲ್ಲಿ ಭಾಷಾದೋಷ, ಇನ್ನಿತರ ದೋಷಗಳು ಅನೇಕವಿರಬಹುದು. ಅಂಥವುಗಳೆಲ್ಲವನ್ನು ಸುಜ್ಞವಾಚಕ ಮಹಾಶಯರುಗಳು ತೋರಿಸಿಕೊಟ್ಟಲ್ಲಿ ದ್ವಿತೀಯ ಮುದ್ರಣದಲ್ಲಿ ಸರಿಗೊಳಿಸುವೆನಲ್ಲದೆ ಅಂತಹವರ ಉಪಕಾರಕ್ಕೆ ಚಿರಋಣಿಯಾಗಿರುವೆನು.

## ಧನ್ಯವಾದ ಸಮರ್ಪಣೆ.

ನನ್ನ ಈ ಅಲ್ಪಕೃತಿಗೆ ಬೇಕಾದ ಶಾಸ್ತ್ರೀಯ ಪ್ರಮಾಣಗಳ ಬಗ್ಗೆ ಈ ಕೆಳಗಿನ ಗ್ರಂಥಗಳನ್ನು ಸಹಕಾರಿಯಾಗಿ ಆರಿಸಿಕೊಂಡಿದ್ದೇನೆ. "ಹಿಂದೀ ಸತ್ಯಾರ್ಥಪ್ರಕಾಶ", "ಋಗ್ವೇದಾದಿ ಭಾಷ್ಯಭೂಮಿಕೆ", "ದಾಂಪತ್ಯವಿಜ್ಞಾನ", "ವಿಧವಾವಿವಾಹ ಶಾಸ್ತ್ರಸಂಗ್ರಹ", ಚಾಂದ್ ಪತ್ರಿಕೆಯ "ವಿಧವಾ ಅಂಕ" ಮತ್ತು "ನಾರೀ ಆಂದೋಲನ ಅಂಕ", "ವಿಧವಾವಿವಾಹ ಮೀಮಾಂಸ", "ಸಂಸ್ಕಾರಚಂದ್ರಿಕೆ" ಇತ್ಯಾದಿ. ಈ ಎಲ್ಲಾ ಗ್ರಂಥಕರ್ತರಿಗೂ ನನ್ನ ಹೃತ್ಪೂರ್ವಕವಾದ ಧನ್ಯವಾದಗಳನ್ನರ್ಪಿಸುತ್ತೇನೆ. ಇದರ ೧೫ನೆಯ ಅಧ್ಯಾಯದಲ್ಲಿ ವಿವರಿಸಿರುವ "ವಿಧವೆಯರಿಗೆ ಮುಂಡನವೇಕೆ?" ಎಂಬ ಲೇಖವನ್ನು ವಿಸ್ತೃತವಾಗಿ ಸಂಗ್ರಹಿಸಿಕೊಟ್ಟ ನನ್ನ ಮಿತ್ರರಾದ ಶ್ರೀಯುತ ಗೋಪಾಲ ನಾರಾಯಣ ಭಟ್ ಭಿಡೆ "ರಾಷ್ಟ್ರಭಾಷಾ ವಿಶಾರದ" ಇವರಿಗೂ, ೧೫ನೆಯ ಅಧ್ಯಾಯದ "ಸರಕಾರದ ಕಾನೂನು" ಇದರ ಇಂಗ್ಲಿಷ್ ಪ್ರತಿಯನ್ನು ಕನ್ನಡಕ್ಕೆ ಭಾಷಾಂತರಿಸಿಕೊಟ್ಟ ನನ್ನ ಇನ್ನೊಬ್ಬ ಮಿತ್ರರಿಗೂ ನಾನು ಸದಾ ಆಭಾರಿಯಾಗಿರುವೆನು. ಇದಕ್ಕೆ ಬೇಕಾದ ಉತ್ತಮವಾದ ಮುನ್ನುಡಿಯಿಂದ ಇದನ್ನಲಂಕರಿಸಿ ನನ್ನನ್ನು ಪ್ರೋತ್ಸಾಹಿಸಿದ ಶ್ರೀಮಾನ್ ದೇಶಭಕ್ತ ಕಾರ್ನಾಡು ಸದಾಶಿವರಾಯರಿಗೆ ನನ್ನ ಅನೇಕ ವಂದನೆಗಳನ್ನರ್ಪಿಸಿ ಈ ಗ್ರಂಥವನ್ನು ಅಖಿಲ ಕರ್ನಾಟಕದ ಸೋದರಸೋದರಿಯರ ಕರಕಮಲಗಳಿಗೆ ಸಹರ್ಷಚಿತ್ತದಿಂದ ಸಮರ್ಪಿಸುತ್ತೇನೆ. ಈ ಪುಸ್ತಕದ ಮುದ್ರಣಕಾರ್ಯದಲ್ಲಿ ಹೆಚ್ಚಿನ ಪರಿಶ್ರಮವನ್ನು ವಹಿಸಿದ ಮಂಗಳೂರು ಛಾಪಖಾನೆಯ ಮ್ಯಾನೇಜರಿಗೂ ನನ್ನ ವಂದನೆಗಳನ್ನರ್ಪಿಸುತ್ತೇನೆ.

ಬಿ. ಲಕ್ಷ್ಮಣದೇವ ವಿದ್ಯಾರ್ಥಿ,
ಸಂಪಾದಕ,
ಸದ್ಧರ್ಮ ಪ್ರಚಾರಕ ಗ್ರಂಥಮಾಲೆ.

೧—೧೨—೧೯೩೪.
ಮಂಗಳೂರು, ದ. ಕ.



ಶ್ರೀ। ಬಿ ಲಕ್ಷ್ಮಣದೇವ ವಿದ್ಯಾರ್ಥಿ.

# ನಿರ್ಭಾಗ್ಯ ವಿಧವೆ!

ಲೋಕದಲಿ ಪತಿಯೆಂಬ ವಸ್ತುವುಂಟೇ? ।
ಸತಿಯೆಂಬ ವಸ್ತುವದು ಅದಕೆ ಗಂಟೆ? ॥
ನನಗೆ ಗೊತ್ತಿಲ್ಲ ಈ ರೀತಿಯುಂಟೆ? ।
ಹಾಗಾದರೆನಗೆ ಸಹ ಪತಿಯೆಂಬುದುಂಟೆ? ॥ ೧ ॥

ಆ ಮನೆಯ ರಾಧೆ ಕೇಶವ ಬಳೆಸುತಿಹಳು ।
ಈ ಮನೆಯ ಲಲಿತೆ ಆಭರಣ ತೊಡುತಿಹಳು ॥
ನೆರಮನೆಯ ಸುಬ್ಬಿ ತಿಲಕವನಿಡುತಿಹಳು ।
ನನಗಿಲ್ಲ ಕೇಶಾಭರಣ ತಿಲಕ ಒರಳು ॥ ೨ ॥

ನನ್ನ ಮನೆಯವರೆಲ್ಲ ಹರ್ಷದಲಿ ಮೂಬಾರಿ ।
ಅನ್ನವನ್ನುಣ್ಣುತಿಹರವರು ಹದವಿರಿ ॥
ನನಗಿಲ್ಲ ಆಹಾರ ಸರಿ ಒಂದು ಬಾರಿ ।
ನನಗೇಕೆ ಈ ಶಿಕ್ಷೆ? ಹೇ ವಿಶ್ವಧಾರಿ ॥ ೩ ॥

ಮದುವೆ ಮುಂಜಿಗಳಿಂಗೆ ಹೋಗಬಿಡರೆನ್ನ ।
ಅಶುಭವಾಗುವುದಂತೆ ಕಂಡವರಿಗೆನ್ನ ॥
"ಮಾರ್ಜಾಲದಂತೆ ನೀ ಅಶುಭ" ಎಂದೆನ್ನ ।
ಹೀಯಾಳಿಸುತಲಿಹರು ದೇವ! ಸಲಹೆನ್ನ ॥ ೪ ॥

ನಾಯಿಗಿಂತಲು ಹೀನೆ ನಾನು ಜನರಲ್ಲಿ ।
ಅಸಹ್ಯತೋರ್ಪುದು ಜನಕೆ ಎನ್ನ ಬಾಳ್ವಿಯಲಿ ॥
ಎನಗೇಕೆ ಸಂಬಂಧ ಇಂಥ ಲೋಕದಲಿ ।
ಎನಗೇಕೆ ಆಶೆ ಈ ತುಚ್ಛ ಪ್ರಾಣದಲಿ ॥ ೫ ॥

ಹಸುಗೂಸು ಇರುವಾಗ ಆಗಿರುವ ಮದುವೆ ।
ಕಂಡು ಕೇಳದೆ ಇದ್ದ ನಿರ್ಭಾಗ್ಯ ವಿಧವೆ ॥
ಹೇ! ದೇವ! ಎನಗೇಕೆ ಈ ಕಷ್ಟಕೊಡುವೆ? ।
ಇದನೆಲ್ಲ ನೆನೆಯುತ್ತ ಹಾರಿದಳು ಕೆರೆಗೆ! ॥ ೬ ॥

ನಿರ್ಭಾಗ್ಯ ವಿಧವೆಯರ ಜೀವನವ ಕಾಣಿ ।
ಇಂಥ ಮದುವೆಯು ಘೋರ ನರಕಕ್ಕೆ ಏಣಿ ।
ಬಾಲ್ಯಮದುವೆಯೊಳೀಗಲಾಗುತಿಹ ಹಾನಿ ॥
ಎಷ್ಟೆಂದು ವರ್ಣಿಸಲಿ ವಿಶ್ವಧಾರಿ ॥ ೭ ॥

"ವಿಧವಾಬಂಧು".



# ವಿಧವಾವಿವಾಹವು ಶಾಸ್ತ್ರವಿರುದ್ಧವೆ?



## ೧. ಹೆತ್ತವರ ಕರ್ತವ್ಯ.

ಮಹಿಳೆಯರೆದುರು ಸನ್ಮಾನದಿಂದ ವರ್ತಿಸುವಂತಹ ಸದ್ಭಾವನೆಯನ್ನು ನಿಮಗೆ ಹುಟ್ಟಿದ ಮಕ್ಕಳಲ್ಲಿ ಬಾಲ್ಯಾರಭ್ಯದಲ್ಲಿಯೇ ಉಂಟು ಮಾಡಿರಿ! ಅವರಿಗೆ ಅನುದಿನವೂ ಅನ್ನಪಾನಗಳನ್ನು ಕೊಡುವಾಗ ನಿಮ್ಮ ಮಧುರವಾಣಿಯಿಂದ ನಮ್ಮ ಪೂರ್ವಪುರುಷರ ಪುಣ್ಯಕಥೆಗಳನ್ನೂ, ಮಹಾತ್ಮರುಗಳ ಪವಿತ್ರಾಚರಣೆಗಳನ್ನೂ ಅವರಿಗೆ ಬೋಧಿಸಿರಿ! ಶಿಕ್ಷಣದ ನೆವನದಿಂದ ಚಿಕ್ಕ ಮಕ್ಕಳನ್ನು ತಮ್ಮಿಂದ ಅಗಲಿಸಿ ದೂರಕ್ಕೆ ಕಳುಹಿಸುವಾಗ ಚೆನ್ನಾಗಿ ಎಚ್ಚರಿಕೆಯಿಂದಿರಿ! ಯಾಕಂದರೆ— ನಿಮ್ಮ ಅಲಕ್ಷ್ಯಭಾವನೆಯಿಂದಾಗಿ ನಿಮ್ಮ ಮಕ್ಕಳು ಪಟ್ಟಣಗಳಲ್ಲಿರುವ ಈಗಿನ ಕಾಲದ ಸೋಗುಗಳಿಗೆ ಒಲಿಬಿದ್ದು ಪ್ರಾಯಭರಿತರಾದಾಗ ನಿಮ್ಮನ್ನು ತೀಕ್ಷ್ಣದೃಷ್ಟಿಯಿಂದ ನೋಡಿ ಎಡಗಾಲಿನಿಂದ ಒದೆಯುವರು. ಆಗ ನೀವು ನಿಮ್ಮ ಅದೃಷ್ಟವನ್ನು ಹೀಯಾಳಿಸಿಕೊಂಡು ಸುಮ್ಮನೆ ಇರಬೇಕಾಗುತ್ತದೆ. ಬಾಲ್ಯದಲ್ಲಿ ಮಕ್ಕಳನ್ನು ನಿರಂಕುಶವಾಗಿ ಬೆಳೆಯಬಿಟ್ಟರೆ ಯೌವ್ವನದಲ್ಲಿ ಹಾಳಾಗುವುದು ಮಾತಾಪಿತೃಗಳ ಆಲಸ್ಯ ಮತ್ತು ಮೂರ್ಖತೆಯಿಂದಲ್ಲದೆ ಅದೃಷ್ಟದಿಂದಲ್ಲ. ಅದೃಷ್ಟದಂತೆ ಎಲ್ಲವೂ ನೆರವೇರುವುದೆಂಬುದೇ ನಿಮ್ಮ ದೃಢಭಾವನೆಯಾದರೆ ಹುಟ್ಟಿದ ಮಕ್ಕಳನ್ನು ಸಾಕುವುದು ಏತಕ್ಕೆ? ಯೌವ್ವನದಲ್ಲಿ ವಿವಾಹಾದಿ ವ್ಯವಸ್ಥೆಗಳನ್ನು ಮಾಡಿಕೊಡುವುದು ಏತಕ್ಕೆ? ಹಾಗೆಯೇ ಬಿಟ್ಟುಬಿಡಬಾರದೇ? ಎಲ್ಲವೂ ಅದೃಷ್ಟದಂತೆಯೇ ಆಗುವುದಲ್ಲವೇ? ಸಹೋದರಿಯರೇ! ಇನ್ನಾದರೂ ಸ್ವಲ್ಪ ವಿಚಾರ ಮಾಡಿರಿ. ಅದೃಷ್ಟದ

ಗೊಡ್ಡು ನಂಬಿಕೆಯಿಂದ ಸುಮ್ಮನಿರುವುದಕ್ಕಿಂತ ಪರಮಾತ್ಮನು ಕೊಟ್ಟಿರುವ ಪವಿತ್ರ ಬುದ್ಧಿಯನ್ನುಪಯೋಗಿಸಿ ಮಕ್ಕಳ ಉನ್ನತಿಗೆ ಪ್ರಯತ್ನಿಸಿರಿ. ಹೀಗೆ ಮಾಡುವುದರಿಂದಲೇ ಬಾಲಕನು ದೊಡ್ಡವನಾದಾಗ ನಿಮ್ಮ ಮತ್ತು ಸಮಾಜದ ಹಾಗೂ ಎಲ್ಲಾ ಮಹಿಳೆಯರ ಗೌರವವನ್ನು ಕಾಪಾಡುವನು. ಜನಾಂಗದ ಮುಂದೆ ಆದರ್ಶಪುರುಷನಾಗುವಂತಹ ಸೌಭಾಗ್ಯವನ್ನು ನೀವೇ ಗಳಿಸಿಕೊಟ್ಟಂತಾಗುವುದು. ಇಂತಹ ಪುತ್ರರತ್ನಗಳೇ ಹಿಂದೂಸಮಾಜದಲ್ಲಿ ಕೀರ್ತಿಯನ್ನು ತರಲಿಕ್ಕೆ ಅರ್ಹರು. ಪ್ರಕೃತ ಸಮಾಜದಲ್ಲಿರುವ ಅನಾವಶ್ಯಕವಾದ ಬಂಧನಗಳನ್ನು ನಾಶಮಾಡಲು ಪುರುಷಸಮಾಜಕ್ಕಿಂತ ನೀವೇ ಧೈರ್ಯಶಾಲಿನಿಯರಾಗಿ ಮುಂದೆ ಬಂದರೆ, ಪುರುಷಸಮಾಜವು ಅರೆಕ್ಷಣದೊಳಗೆ ತನ್ನ ಆಲಸ್ಯವನ್ನು ತ್ಯಜಿಸುವುದೆಂಬುದರಲ್ಲಿ ಸಂದೇಹವಿಲ್ಲ. ಪ್ರಾಚೀನ ಆರ್ಯ ಮಹಿಳೆಯರ ವೀರತ್ವವನ್ನು ಸ್ಮರಿಸಿ ಪ್ರಕೃತ ಮಹಿಳಾಸಮಾಜವು ಬಂಧಿಸಲ್ಪಟ್ಟಿರುವ ಬಂಧನವನ್ನು ಕಿತ್ತೊಗೆಯಲು ಸಮಾಜದಲ್ಲೆಲ್ಲಿಯೂ ಪ್ರಬಲವಾದ ಕ್ರಾಂತಿಯನ್ನು ಪಸರಿಸಿರಿ! ಇದರಿಂದಲೇ ಮಹಿಳೆಯರ ಉದ್ಧಾರವಾಗುವುದು. ಭಾವೀಜನಾಂಗದ ಉನ್ನತಿಯ ಬಗ್ಗೆ "ವಿವಾಹ"ದ ಕುರಿತು ಚೆನ್ನಾಗಿ ಆಲೋಚಿಸಿಕೊಳ್ಳಿರಿ.



# ೨. ವಿವಾಹವೇತಕ್ಕೆ?

ವಿವಾಹವು ಕೇವಲ ವಿವಾಹಿತರಾಗುವವರಿಗೆ ಮಾತ್ರವಲ್ಲದೆ ನೆಂಟರಿಷ್ಟರಿಗೂ ಸುಖವನ್ನು ಕೊಡುವಂಥದ್ದಾಗಿರುತ್ತದೆ. ಅಷ್ಟು ಮಾತ್ರವಲ್ಲದೆ, ಅದು ಭವಿಷ್ಯ ಸಂತಾನದ ಸುಖಕ್ಕೂ, ಅದೃಷ್ಟಕ್ಕೂ ಸಂಬಂಧಿಸಿರುವುದು.

ಡಾ। ಎಸ್ ಸ್ಟಾಲ್.

ವಿವಾಹವು ಜಾತಿಯ ಅಭಿವೃದ್ಧಿಗೆ ಅವಶ್ಯಕವಾದುದು. ಆದರೂ ಜನರು ಕೇವಲ ಸಂತಾನೋತ್ಪಾದನೆಗಾಗಿಯೇ ಮದುವೆಯಾಗುವುದಾದರೆ ತಮ್ಮ ಮಕ್ಕಳು ಮಾನವಜಾತಿಗೆ ಮತ್ತು ದೇವರ ಸೇವಕರಾಗುವಂತೆ ಜಾಗರೂಕತೆಯನ್ನು ವಹಿಸುವುದು ಮದುವೆಯಾಗುವವರ ಕರ್ತವ್ಯವಾಗಿರುತ್ತದೆ.

ಕೌಂಟ್ ಲಿಯೋ ಟಾಲ್‌ಸ್ಟಾಯ್.

ಸ್ತ್ರೀಪುರುಷರು ಸಮ್ಮಿಳಿತರಾಗಿ, ನಾವಿಬ್ಬರೂ ಛಲಕಪಟಾದಿ ದುಷ್ಟವ್ಯವಹಾರಗಳನ್ನು ವರ್ಜಿಸಿ ಪರಸ್ಪರ ಪ್ರೀತಿಯಿಂದ ಸರಳ ಜೀವನವನ್ನನುಸರಿಸುವೆವು. ಯಾವ ಪ್ರಾಣಿಗೂ ಹಿಂಸೆಯನ್ನುಂಟು ಮಾಡುವುದಿಲ್ಲ. ಹಗಲಿರುಳೂ ಸಾಧ್ಯವಾದಷ್ಟು ಮಟ್ಟಿಗೆ ಜಗತ್ತಿನ ಹಿತವನ್ನೇ ಸಾಧಿಸುತ್ತಾ ಗೃಹಸ್ಥಾಶ್ರಮದ ಕರ್ತವ್ಯವನ್ನು ನಿಯಮಾನುಸಾರವಾಗಿ ನೆರವೇರಿಸುವೆವು.

ಋಗ್ವೇದ.

ಸೃಷ್ಟಿಕರ್ತನಾದ ಪರಮಾತ್ಮನ ಸೃಷ್ಟಿಯಲ್ಲಿ ಎರಡು ವಿಧಗಳ ಶಕ್ತಿಗಳು ಗೋಚರವಾಗುತ್ತವೆ. ಒಂದು ಪುರುಷಶಕ್ತಿ, ಮತ್ತೊಂದು ಸ್ತ್ರೀಶಕ್ತಿ. ಈ ಎರಡು ಶಕ್ತಿಗಳ ಸಂಯೋಗದಿಂದಲೇ ವಂಶವೃದ್ಧಿಯಾಗುತ್ತದೆ. ದೇವರು ಇವುಗಳಲ್ಲಿ ವಿಶೇಷವಾದ ಒಂದು ಪ್ರಾಕೃತಿಕ ಸ್ವಭಾವವನ್ನು ನಿರ್ಮಿಸಿದ್ದಾನೆ. ಆದುದರಿಂದಲೇ ಈ ಶಕ್ತಿಗಳು ಒಂದನ್ನೊಂದು ನೋಡಿದ ಕೂಡಲೇ ಪರಸ್ಪರ ಆಕರ್ಷಿತವಾಗುತ್ತವೆ. ಈ ನಿಯಮವು ಕೇವಲ ಮನುಷ್ಯಜಾತಿಯಲ್ಲಿ ಮಾತ್ರವಲ್ಲದೆ ಪಶುಪಕ್ಷಿ

ಕ್ರಿಮಿಕೀಟಾದಿ ಸರ್ವಪ್ರಾಣಿಗಳಲ್ಲಿಯೂ ಗೋಚರವಾಗುತ್ತದೆ. ಎತ್ತು ದನದೊಡನೆಯೂ, ಅಶ್ವವು ಅಶ್ವಿನಿಯೊಡನೆಯೂ ಮತ್ತು ಶುಕ, ಸಾರಿ ಕಾದಿ ವಿಹಂಗಮುಗಳು ತಮ್ಮ ತಮ್ಮ ಜೊತೆಯೊಡನೆಯೂ ನಿಜವಾದ ಸುಖವನ್ನು ಅನುಭವಿಸುತ್ತವೆ. ಇದೇ ಪ್ರಕಾರ ಸ್ತ್ರೀಪುರುಷರು ಸಹ ಸಹವಾಸ (ಜೊತೆ)ಜೀವನದಲ್ಲಿಯೇ ಆನಂದವನ್ನನುಭವಿಸುತ್ತಾರೆ. ಪರಂತು, ಮನುಷ್ಯವರ್ಗ ಮತ್ತು ಪ್ರಾಣಿವರ್ಗಗಳ ವ್ಯವಹಾರಗಳಲ್ಲಿ ಬಹಳ ವ್ಯತ್ಯಾಸಗಳು ಕಂಡುಬರುತ್ತವೆ. ದೇವರು ಮನುಷ್ಯನಿಗೆ ಜ್ಞಾನವನ್ನು ಕೊಟ್ಟಿರುವನು. ಅದರೊಂದಿಗೆ ಕರ್ಮವನ್ನು ಮಾಡು ವುದರಲ್ಲಿಯೂ ಸ್ವತಂತ್ರತೆಯನ್ನು ಕೊಡಲಾಗಿದೆ. ಇತರ ಪ್ರಾಣಿ ಗಳಲ್ಲಿ ಈ ತೆರದ ಸ್ವತಂತ್ರತೆಯಿಲ್ಲ. ದಾರ್ಶನಿಕದೃಷ್ಟಿಯಲ್ಲಿ ಹೇಳುವು ದಾದರೆ ಮನುಷ್ಯನು ಕರ್ಮ ಮತ್ತು ಭೋಗಯೋನಿಯೆಂದೂ, ಇತರ ಪ್ರಾಣಿಗಳು ಬರೇ ಭೋಗಯೋನಿಯೆಂದೂ ಹೇಳಬಹುದು.

ಪ್ರಾಣಿಗಳು ತಮ್ಮ ಸ್ವಾಭಾವಿಕವಾದ ಪ್ರೇರೇಪಣೆಯಿಂದಲೇ ಎಲ್ಲಾ ವ್ಯವಹಾರಗಳನ್ನೂ ಮಾಡುವವು. ಹಾನಿಲಾಭದ ಕಡೆಗೆ ಮನಸ್ಸುಕೊಡುವ ಮತ್ತು ಆ ಕುರಿತು ತರ್ಕವಿತರ್ಕಮಾಡುವ ವಿವೇ ಚನಾ ಶಕ್ತಿಯು ಪ್ರಾಣಿಗಳಲ್ಲಿಲ್ಲ. ಮನುಷ್ಯರಾದ ನಮಗೆ ಈ ಕುರಿತು ವಿಶೇಷಜ್ಞಾನವು ದೊರೆತಿರುವುದರಿಂದ ಸಾಮಾಜಿಕ ಉತ್ತರದಾಯಿ ತ್ವವು ಪ್ರಾಣಿಗಳಿಗಿಂತಲೂ ನಮ್ಮ ಮೇಲೆಯೇ ವಿಶೇಷವಾಗಿದೆ. ನಾವು ಯಾವ ಕಾರ್ಯವನ್ನು ಯಾವ ವಿಧದಲ್ಲಿ ಮಾಡುವೆವೋ ಅದರ ಸರಿ ಯಾದ ಪ್ರತಿಫಲವನ್ನನುಭವಿಸುವೆವು.

ದೇವರು ಪ್ರಾಣಿಗಳ ಸಾಮಾಜಿಕ ಸಂಘಟಣೆಯನ್ನು ತನ್ನ ಅಧೀನವಿಟ್ಟುಕೊಂಡಿದ್ದಾನೆ. ಆತನ ನಿಯಮಗಳನ್ನು ಇವುಗಳು ಉಲ್ಲಂಘಿಸುವುದಿಲ್ಲ. ಇವುಗಳಿಗೆ ಪ್ರತ್ಯೇಕವಾದ ಸಂಸ್ಕಾರವು ಆಗುವು ದಿಲ್ಲವಾದರೂ ಅವು ಋತುಗಾಮಿಗಳಾಗಿರುತ್ತವೆ. ಮನುಷ್ಯನು ಪ್ರಾಣಿಗಳಿಗಿಂತ ವಿವೇಕಶಾಲಿಯಾಗಿರುವುದರಿಂದಲೂ, ಸ್ವತಂತ್ರ ನಾಗಿರುವುದರಿಂದಲೂ ತನ್ನ ಸಮಾಜ ಸಂಘಟಣೆಯನ್ನು ತಾನೇ

ಮಾಡಿಕೊಂಡಿರಬೇಕಾಗುತ್ತದೆ. ಮಾನವನು ಸೃಷ್ಟಿಕರ್ತನ ನಿಯಮ ಗಳನ್ನು ಸರಿಯಾಗಿ ಪಾಲಿಸಿದರೆ ಸಮಾಜವು ಸದಾ ಸುಖಿಯಾಗಿರು ವುದು. ಅವುಗಳನ್ನು ಮೀರಿದ್ದಲ್ಲಿ ರಸಾತಲಕ್ಕಿಳಿಯುವುದು.

ಈಶ್ವರೀಯ ನಿಯಮಗಳನ್ನು ಪಾಲಿಸುವಾಗ ಮನುಷ್ಯನಿಗೆ ಕೆಲವು ವೇಳೆ ಇತರರ ಸಹಾಯವು ಬೇಕಾಗುತ್ತದೆ. ಈ ಕಾರಣ ದಿಂದಲೇ ಮಾನವಸಮಾಜವು ಸ್ತ್ರೀಪುರುಷರ ಸಂಬಂಧದಿಂದ ಬಂಧಿಸ ಲ್ಪಟ್ಟಿರುತ್ತದೆ. ಇವರೊಬ್ಬರಿಗೊಬ್ಬರು ಸಹಾಯಕರಾಗಿ ಮಾನವ ಜೀವನವನ್ನು ಸಾರ್ಥಕಗೊಳಿಸುವುದಕ್ಕೆ ಅನುಕೂಲವಾಗುವಂತೆ ಇಬ್ಬರಲ್ಲಿಯೂ ಒಂದು ಸೂಕ್ಷ್ಮಶಕ್ತಿಯನ್ನು ಭಗವಂತನು ನಿರ್ಮಿಸಿ ದ್ದಾನೆ. ಈ ಶಕ್ತಿಯು ಸ್ತ್ರೀಪುರುಷರು ಪ್ರಾಪ್ತವಯಸ್ಕರಾಗಿ ಹಾಗೂ ಸಮಾಜದ ಉತ್ತರದಾಯಿತ್ವವನ್ನು ತಿಳಿದುಕೊಳ್ಳುವಷ್ಟು ಸಮರ್ಥ ರಾದಾಗ ವಿಕಸಿತವಾಗುತ್ತದೆ. ಆಗ ಇವರ ಮನಸ್ಸು ಒಬ್ಬರ ನ್ನೊಬ್ಬರು ಪರಸ್ಪರ ಆಕರ್ಷಿಸುವಂತೆ ಮಾಡುತ್ತದೆ. ಇಂತಹ ಆಕರ್ಷಣೆಯೇ ಇವರಿಬ್ಬರನ್ನೂ ಒಂದು ವಿಶಿಷ್ಟ ಕೇಂದ್ರದಲ್ಲಿ ನಿಲ್ಲಿಸು ತ್ತದೆ. ಈ ಕೇಂದ್ರವೇ ಗೃಹಸ್ಥಾಶ್ರಮವೆಂದು ಕರೆಯಲ್ಪಡುತ್ತದೆ. ಈ ಆಕರ್ಷಣಾಕ್ರಿಯೆಯು ಹೆಚ್ಚಿದ ಹಾಗೆ ಸ್ತ್ರೀಪುರುಷರು ತಮ್ಮ ಪಾರಸ್ಪರಿಕ ಸಂಬಂಧವನ್ನು ಕ್ರಿಯಾತ್ಮಕರೂಪಕ್ಕೆ ತರುತ್ತಾರೆ. ಆಗ ಒಂದೊಂದು ವೇಳೆ ಅವರಲ್ಲಿರುವ ಆದೊಂದು ಸೂಕ್ಷ್ಮವಾದ ಶಕ್ತಿಯು ತನ್ನ ಅಧಿಕಾರವನ್ನು ಮಿತಿಮೀರಿ ಅವರ ಮೇಲೆ ನಡೆಸುವುದೂ ಉಂಟು. ಆಗ ಅವರು ನಿರಂಕುಶವರ್ತನೆಗಿಳಿಯುತ್ತಾರೆ. ಹೀಗಾಗದೆ ಆ ಶಕ್ತಿಯು ಮಿತರೀತಿಯಲ್ಲಿ ಉಪಯೋಗಿಸಲ್ಪಡುವಂತೆ ಸ್ತ್ರೀಪುರುಷ ರನ್ನು ಒಂದು ವಿಶೇಷವಾದ ಸಂಬಂಧದಲ್ಲಿ ಪ್ರಾಚೀನ ವಿದ್ವಾಂಸರು ಬಂಧಿಸಿರುತ್ತಾರೆ. ಈ ಪವಿತ್ರಬಂಧನೆಗೆ ವಿವಾಹವೆಂದು ಹೆಸರು. ಪರಸ್ಪರ ಸಹಾಯದಿಂದ ಸ್ತ್ರೀಪುರುಷರು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ಸಂಪಾದಿಸುವುದೇ ವಿವಾಹದ ಮುಖ್ಯ ಉದ್ದೇಶವಾಗಿರುತ್ತದೆ.

**ನಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹ ಮುಚ್ಯತೇ ॥**
**ತಯಾ ಹಿ ಸಹಿತಃ ಸರ್ವಾನ್ ಪುರುಷಾರ್ಥಾನ್ ಸಮಶ್ನುತೇ ॥**
— ಗೋಭಿಲ. ಸೂ. ೧. ೨. ೧೫.

“ಗೃಹಿಣಿಯೇ ನಿಜವಾದ ಗೃಹ. ಅದನ್ನು ಹೊಂದಿದವನೇ ಗೃಹಸ್ಥನು. ಯಾವನು ಗೃಹಿಣಿಯನ್ನು ಹೊಂದುವನೋ ಅವನು ಸರ್ವ ಪುರುಷಾರ್ಥಗಳನ್ನು ಸಾಧಿಸುವನು.”

## ವಿವಾಹದ ಪ್ರಯೋಜನ.

ವಿವಾಹದಿಂದ ಎರಡು ವಿಧದ ಪ್ರಯೋಜನಗಳಿವೆ. ಸಂತಾನೋತ್ಪತ್ತಿ ಮತ್ತು ಪ್ರಾಕೃತಿಕವಾಗಿ ಬಂದಿರುವ ಸ್ವಭಾವಿಕ ಇಚ್ಛೆಯನ್ನು ನಿಯಮಿತರೀತಿಯಲ್ಲಿ ಪೂರ್ತಿಗೊಳಿಸುವುದು. ಹಸಿವೆ ಎಂಬುವುದು ಸರ್ವ ಪ್ರಾಣಿಗಳಿಗೂ ಇದೆಯಷ್ಟೆ! ಅವು ಯಾವುದಾದರೊಂದು ಖಾದ್ಯ ಪದಾರ್ಥವನ್ನು ಹುಡುಕುವಾಗ ಮೊದಲಾಗಿ ತಿನ್ನುವ ಇಚ್ಛೆಯನ್ನು ಮಾಡುತ್ತವೆ. ಇದೇ ಪ್ರಕಾರ ಭೋಜನಮಾಡುವುದರಿಂದ ನಮಗೆ ಮುಖ್ಯವಾದ ಎರಡು ಪ್ರಯೋಜನಗಳು ದೊರೆಯುತ್ತವೆ. ಒಂದನೆಯದಾಗಿ ಶರೀರದ ಬೆಳವಣಿಗೆ ಮತ್ತು ಬುದ್ಧಿಯ ವಿಕಾಸತೆ, ಎರಡನೆಯದಾಗಿ ಹಸಿವೆಂಬ ಸ್ವಾಭಾವಿಕ ಗುಣವನ್ನು ಯುಕ್ತ ರೀತಿಯಲ್ಲಿ ಇಡುವುದು, ಹಸಿವಾಗದೆ ಅನ್ನವನ್ನು ಹುಡುಕುವವರು ಅಥವಾ ಉಣ್ಣುವವರು ಲೋಕದಲ್ಲಿ ಬಹಳ ವಿರಳವೆನ್ನಬೇಕು. ಆದುದರಿಂದಲೇ ಪರಮಾತ್ಮನು ಪ್ರತಿಯೊಂದು ಪ್ರಾಣಿಯಲ್ಲಿಯೂ ಉಂಟುಮಾಡಿರುವ ಹಸಿವಿನ ಅರಿವಾದ ಕೂಡಲೆ ಎಲ್ಲವೂ ಉಣ್ಣುವುದಕ್ಕೋ ತಿನ್ನುವುದಕ್ಕೋ ಅತ್ತಿತ್ತ ಓಡಾಡಿ ಪ್ರಯತ್ನಪಡುತ್ತವೆ. ಒಂದು ಶಿಶುವು ಜನಿಸುತ್ತಲೇ ಹಸಿವಿನಿಂದ ಅಳತೊಡಗುತ್ತದೆ. ಶರೀರ ರಕ್ಷಣೆಗೆ ಬೇಕಾಗಿ ತಾನು ತಾಯಿಯ ಸ್ತನದಿಂದ ಹಾಲನ್ನು ಕುಡಿಯುತ್ತೇನೆಂಬ ಅರಿವು ಆಗ ಅದಕ್ಕಿರುವುದಿಲ್ಲ. ಪರಂತು, ಹಾಲುಣ್ಣದಿದ್ದರೆ ಅದು ಬದುಕಲಾರದು. ಇದರಿಂದ ಹಸಿವೆಂಬುದು ಸ್ವಾಭಾವಿಕ ಗುಣವೆಂದು ವ್ಯಕ್ತವಾಗುತ್ತದೆ.

ಹಸಿವಿನ ನಿವಾರಣೆ ಮತ್ತು ದೇಹಪೋಷಣೆಗಾಗಿ ಉಪಯೋಗಿಸುತ್ತಿರುವ ಭೋಜನವನ್ನು ನಾವು ಒಂದೊಂದು ವೇಳೆ ಬಹು ವಿಧದ ರುಚಿಗಳಿಗೆ ಅಧೀನರಾಗಿ ಕೆಡಿಸಿಕೊಳ್ಳುತ್ತೇವೆ. ಇದರಿಂದ ನಮ್ಮ ಆರೋಗ್ಯಕ್ಕೂ ಹಾನಿಯುಂಟಾಗುತ್ತದೆ.

ಇದೇ ಪ್ರಕಾರ—ವಿವಾಹದಿಂದಲೂ ಮುಖ್ಯವಾಗಿ ಮೇಲೆ ವಿವರಿಸಿದ ಎರಡು ಪ್ರಯೋಜನಗಳಿವೆ. ಸಂತಾನೋತ್ಪತ್ತಿಯೇ ಸ್ತ್ರೀಪುರುಷರ ಸಂಯೋಗದ ಮುಖ್ಯ ಕಾರಣವಲ್ಲ. ಸಂಸರ್ಗದ ಸ್ವಾಭಾವಿಕ ಇಚ್ಛೆಯು ಸ್ತ್ರೀಪುರುಷರಲ್ಲಿ ಇಲ್ಲದಿದ್ದರೆ ನೂರರಲ್ಲಿ ಒಬ್ಬನಾದರೂ ಸಂತಾನವೃದ್ಧಿಯ ವ್ಯವಸಾಯದಲ್ಲಿ ಬೀಳುತ್ತಿದ್ದಿಲ್ಲ. ಮಾನಸಿಕ ಮತ್ತು ಆತ್ಮಿಕ ಇಚ್ಛೆಯ ಪೂರ್ತಿಯೇ ಸಂಸರ್ಗದ ಗೌಣವಾದ ಪ್ರಯೋಜನವಾಗಿರುತ್ತದೆ. ಆದುದರಿಂದಲೇ ಸ್ತ್ರೀಪುರುಷರಲ್ಲಿ ಪರಸ್ಪರ ಸಂಯೋಗವಾಗುವಂತಹ ಸ್ವಭಾವವನ್ನೂ, ಅದಕ್ಕನುಕೂಲವಾಗುವಂತೆ ನೋಡಿದ ಮಾತ್ರಕ್ಕೇ ಒಬ್ಬರು ಇನ್ನೊಬ್ಬರನ್ನು ಆಕರ್ಷಿಸಿಕೊಳ್ಳುವಂತಹ ಒಂದು ಸೂಕ್ಷ್ಮತತ್ವವನ್ನೂ, ಅದಕ್ಕೆ ಸಲಕರಣೆಯಾಗಿ ಬಾಹ್ಯಸೌಂದರ್ಯವನ್ನೂ ಪರಮಾತ್ಮನು ಕೊಟ್ಟಿರುವನು. ಅದರಲ್ಲೂ ಸ್ತ್ರೀಯರ ಸೌಂದರ್ಯರಚನೆಯಲ್ಲಿ ಪರಮಾತ್ಮನು ತನ್ನ ಸೃಷ್ಟಿವೈಚಿತ್ರ್ಯವನ್ನು ಚೆನ್ನಾಗಿ ತೋರಿಸಿರುವನು. ಅಂದರೆ,—ಸೌಂದರ್ಯವನ್ನು ಕೊಡುವುದರಲ್ಲಿ ಸ್ತ್ರೀಸಮಾಜದ ಮೇಲೆಯೇ ಆತನು ಹೆಚ್ಚಿನ ದಯೆಯನ್ನು ತೋರಿಸಿರುವನೋ ಎಂಬಂತೆ ಪುರುಷಸಮಾಜವು ಬಲು ಬೇಗನೆ ಅದರ ಕಡೆಗೆ ಆಕರ್ಷಿಸಲ್ಪಡುತ್ತದೆ. ಇದಕ್ಕೆ ಸರಿಯಾಗಿ ಮಹಿಳೆಯರ ಅಂತಃಕರಣವು ಕೋಮಲವಾಗಿಯೂ, ವಿಶಾಲವಾಗಿಯೂ ಇರುತ್ತದೆ. ಈ ಗುಣದಿಂದ ಉತ್ಪನ್ನವಾಗುವ ಇಚ್ಛೆಯನ್ನು ಪೂರ್ತಿಗೊಳಿಸುವುದಕ್ಕಾಗಿ ನಡಿಸುವ ಪರಸ್ಪರ ಸಂಸರ್ಗವೇ ವಿವಾಹದ ಪ್ರಯೋಜನಗಳಲ್ಲಿ ಒಂದಾಗಿರುತ್ತದೆ. ಪರಂತು,—ಇದು ಗೌಣವಾದ ಪ್ರಯೋಜನವು. ನಿಯಮವನ್ನುಲ್ಲಂಘಿಸಿ ಊಟ ಮಾಡುವವನು ತನ್ನ ಸ್ವಾಸ್ಥ್ಯವನ್ನು ಕೆಡಿಸಿಕೊಳ್ಳುವಂತೆ ಸ್ತ್ರೀಪುರು

ಷರ ಸಹವಾಸ ಮತ್ತು ಸಂಸರ್ಗದಲ್ಲಿ ನಿಯಮವಿಲ್ಲದಿದ್ದರೆ ಅವರಿಬ್ಬರ ಶಾರೀರಿಕ, ಮಾನಸಿಕ ಮತ್ತು ಆತ್ಮಿಕ ಉನ್ನತಿಯು ಕೆಟ್ಟುಹೋಗಿ ಸಮಾಜವ್ಯವಸ್ಥೆಯು ಹಾಳಾಗಿ ಅದರ ದುಷ್ಪರಿಣಾಮವು ಇಡೀ ಜನಾಂಗದ ಮೇಲೆ ಆವರಿಸುವುದು. ಹೀಗಾಗದಂತೆ ವಿವಾಹವೆಂಬ ಉತ್ತಮ ಸಂಸ್ಕಾರವನ್ನು ನಮ್ಮ ಪ್ರಾಚೀನಕಾಲದವರು ನಿರ್ಣಯಿಸಿರುವರು. ವಿವಾಹಿತ ಜೀವನ ಅಥವಾ ಗೃಹಸ್ಥಾಶ್ರಮವೆಂಬುವುದು ಜಗತ್ತಿನ ಸಕಲ ಹಿತವನ್ನು ಸಾಧಿಸುವ ಪವಿತ್ರ ವೃತವೆಂದು ಎಣಿಸಲ್ಪಟ್ಟಿರುವುದು. ನಮ್ಮ ಪ್ರಾಚೀನ ಕಾಲದ ವೈವಾಹಿಕ ಮಹತ್ವವು ಹೇಗಿತ್ತೆಂಬುವುದಕ್ಕೆ ಉದಾಹರಣೆಯಾಗಿ ಋಗ್ವೇದದ ಒಂದು ಮಂತ್ರದ ಅರ್ಥವನ್ನು ಈ ಅಧ್ಯಾಯದ ಪ್ರಾರಂಭದಲ್ಲಿಯೇ ಕೊಟ್ಟಿರುವೆವು. ಇದರಿಂದ ವಿವಾಹಕ್ಕೆ ಎಷ್ಟು ಮಹತ್ವವಿದೆ ಎಂಬುವುದು ಚೆನ್ನಾಗಿ ತಿಳಿದುಬರುವುದು. ಇಂತಹ ಪವಿತ್ರ ಉದ್ದೇಶವು ವಿವಾಹದಲ್ಲಿರುವುದರಿಂದ ಅಂತಹ ವಿವಾಹವನ್ನು ನೆರವೇರಿಸುವ ಕಾಲದಲ್ಲಿ ಕೆಳಗೆ ವಿವರಿಸಿದ ಮುಖ್ಯವಾದ ಎರಡು ವಿಷಯಗಳ ಕಡೆಗೆ ಚೆನ್ನಾಗಿ ಲಕ್ಷ್ಯವಿಡತಕ್ಕದ್ದು.

(1) ಸ್ತ್ರೀಪುರುಷರಲ್ಲಿರುವ ಪರಸ್ಪರ ಸಂಸರ್ಗದ ಸ್ವಾಭಾವಿಕ ಇಚ್ಛೆಯು ಸಂಪೂರ್ಣವಾಗಿ ನೆರವೇರತಕ್ಕದ್ದು.

(2) ಉತ್ತಮವಾದ ಸಂತಾನೋತ್ಪತ್ತಿಯಾಗತಕ್ಕದ್ದು.

ಸರ್ವಸಾಧಾರಣವಾಗಿ ಸಂತತಿಯ ಇಚ್ಛೆಗಿಂತ ಸಂಸರ್ಗದ ಇಚ್ಛೆಯೇ ಸ್ತ್ರೀಪುರುಷರಲ್ಲಿ ಅಧಿಕವಾಗಿ ಕಂಡುಬರುತ್ತಿದೆ. ಸಂತಾನಕ್ಕೆ ಬೇಕಾಗಿ ಮಾತ್ರ ಸಂಸರ್ಗಮಾಡುವವರು ಇಂದ್ರಿಯನಿಗ್ರಹದ ಶಿಕ್ಷಣವನ್ನು ಹೊಂದಿದವರೂ ಕರ್ತವ್ಯ ಮತ್ತು ಅಕರ್ತವ್ಯಗಳ ತಿಳುವಳಿಕೆಯುಳ್ಳವರೂ ಆಗಿರುತ್ತಾರೆ. ಇಂತಹವರು ಮಿತಸಂತತಿಯ ಕ್ರಮವನ್ನು ಚೆನ್ನಾಗಿ ಅರಿತವರಾಗಿದ್ದು ಶರೀರವನ್ನೂ, ಜೀವನವನ್ನೂ ಉತ್ತಮರೀತಿಯಲ್ಲಿ ಇಟ್ಟುಕೊಳ್ಳುತ್ತಾರೆ. ಪರಂತು,—ನವನಾಗರಿಕ

ತನದಲ್ಲಿ ಬೆಳೆದು ಪ್ರಾಚೀನಕಾಲದ ಜನರಲ್ಲಿದ್ದಂತಹ ಇಂದ್ರಿಯನಿಗ್ರಹದ ತತ್ವವನ್ನು ಅರಿಯದ ಜನರು ಮಿತಸಂತತಿಯ ಸೇವನದಿಂದಲೂ, ಯೌವನ ಮತ್ತು ಸೌಂದರ್ಯದ ರಕ್ಷಣೆಗಾಗಿಯೂ ಅನೇಕ ಕೃತ್ರಿಮ ವಿಧಿಗಳನ್ನುಪಯೋಗಿಸಿಕೊಳ್ಳುತ್ತಾರೆ ಇದು ಅಷ್ಟೊಂದು ಪ್ರಶಂಸನೀಯವಾದ ಕೆಲಸವಲ್ಲವು.

ಯಾರು ಉತ್ತಮೋತ್ತಮವಾದ ಧಾರ್ಮಿಕತತ್ವದ ಸುವಾಸನೆಯನ್ನಾದರೂ ಪಡೆದಿರುವರೋ ಅಥವಾ ಯಾರ ಬುದ್ಧಿಶಕ್ತಿಯು ವಿಕಾಸವಾಗಿ ವಿವೇಕಶೀಲತೆಯು ಸರಿಯಾಗಿ ಇರುವುದೋ ಇಂತಹವರು ಇಡೀ ಜೀವಮಾನದಲ್ಲಿ ಗೃಹಸ್ಥಾಶ್ರಮದಲ್ಲಿದ್ದರೂ ಇಂದ್ರಿಯ ನಿಗ್ರಹವನ್ನು ಸ್ವಲ್ಪಮಟ್ಟಿಗಾದರೂ ಮಾಡಬಲ್ಲರು. ಈ ಪ್ರಕಾರ ಪರಮಾತ್ಮನು ಜನರಲ್ಲಿ ಕೊಟ್ಟಿರುವ ಯೌವನವು ಪ್ರಕೃತಿ ನಿಯಮಕ್ಕನುಸಾರವಾಗಿ ಉಪಯೋಗಿಸಲ್ಪಡಬೇಕೆಂದೂ, ಅದಕ್ಕೆ ವಿರುದ್ಧವಾಗಿ ವಿಷಯವಾಸನಾಲೋಲುಪ್ತತೆಯಲ್ಲಿ ಬಿದ್ದು ಬಹುಸಂಖ್ಯೆಯಲ್ಲಿ ನಿರ್ವೀರ್ಯಸಂತತಿಯು ಉಂಟಾಗಬಾರದೆಂಬುವುದು ಸರ್ವರೂ ಒಪ್ಪತಕ್ಕದ್ದಾಗಿರುತ್ತದೆ. ದಯಾಮಯನಾದ ಭಗವಂತನು ನಮಗೆ ಕೊಟ್ಟಿರುವ ಅಮೂಲ್ಯವಾದ ವಸ್ತುವೆಂದರೆ ಯೌವನವು. ಅದರ ವಾಸ್ತವಿಕವಾದ ಪ್ರಯೋಜನವನ್ನು ನಾವು ಹೊಂದದೆ ಯಾವುದಾದರೊಂದು ವಿಧದಲ್ಲಿ ಅಥವಾ ಮೇಲೆ ವಿವರಿಸಿದ ನವನಾಗರಿಕ ಕ್ರಮದಲ್ಲಿ ಜೋಪಾನವಾಗಿಟ್ಟುಕೊಂಡು ಮರಣಕಾಲಕ್ಕೆ ಕಣ್ಣುಮುಚ್ಚಿಬಿಡುವುದಾದರೆ ಮಾನವಜೀವನದ ನಿಜವಾದ ಉದ್ದೇಶವೇನು? ಆದುದರಿಂದ ಮನುಷ್ಯಜನ್ಮದ ಸಫಲತೆಗಾಗಿ ಈಶ್ವರೀಯ ನಿಯಮವನ್ನುಲ್ಲಂಘಿಸದೆ ಉತ್ತಮ ಸಂತಾನಯುಕ್ತರಾಗುವುದೇ ವಿವಾಹದಿಂದುಂಟಾಗುವ ನಿಜವಾದ ಪ್ರಯೋಜನ.

**"ವರ ಮೇಕೋ ಗುಣೀ ಪುತ್ರೋ ನಚ ಮೂರ್ಖ ಶತಾನ್ಯಪಿ"**

**(ಹಿತೋಪದೇಶ.)**

"ಮೂರ್ಖರಾದ ನೂರಾರು ಮಂದಿ ಮಕ್ಕಳಿಗಿಂತ ಗುಣವಂತನಾದ ಒಬ್ಬ ಪುತ್ರನಿರುವುದೇ ಮೇಲು" ಎಂಬ ತತ್ವವನ್ನರಿತ ಗೃಹಸ್ಥಾಶ್ರಮಿಗಳು ವಿವಾಹದ ಮುಖ್ಯ ಉದ್ದೇಶಗಳನ್ನು ಕೆಡಿಸಲಾರರು. ಸ್ತ್ರೀಪುರುಷರು ಸಂಪೂರ್ಣ ರೀತಿಯಲ್ಲಿ ಇಂದ್ರಿಯನಿಗ್ರಹವನ್ನು ಮಾಡಲಾರದೆ ಹೋದಲ್ಲಿ ಪರಸ್ಪರ ವಿದ್ಯಾಬುದ್ಧಿಯಾದಿ ಯೋಗ್ಯತೆಗಳನ್ನು ಸರಿಯಾಗಿ ತಿಳಿದುಕೊಂಡು ವಿವಾಹಮಾಡಿಕೊಳ್ಳತಕ್ಕದ್ದು. ವಿವಾಹವೇ ಗೃಹಸ್ಥಾಶ್ರಮಕ್ಕೆ ಪ್ರವೇಶದ್ವಾರವಾಗಿರುತ್ತದೆ.

ವರ್ತಮಾನಕಾಲದಲ್ಲಿ ಜಗತ್ತಿನ ಸ್ಥಿತಿಗತಿಯ ಕುರಿತು ನಾವು ಚೆನ್ನಾಗಿ ವಿಚಾರಮಾಡಿ ನೋಡಿದರೆ, ಈ ನಿಯಮವೇ ಎಲ್ಲೆಲ್ಲಿಯೂ ಕಾರ್ಯರೂಪದಲ್ಲಿ ಕಂಡುಬರುತ್ತದೆ. ಒಬ್ಬನ ಕನ್ಯೆಯು ಪ್ರಾಪ್ತವಯಸ್ಕಳಾಗುವ ಮೊದಲೆ ಆವನಿಗೆ ತನ್ನ ಮಗಳ ಮದುವೆಯ ಯೋಚನೆಯು ಬಲವಾಗಿ ಪೀಡಿಸುತ್ತದೆ. ಕನ್ಯೆಗೆ ಎಂಟು ವರ್ಷ ದಾಟಿತೆಂದರೆ ಸರಿ! ಮತ್ತೆ ಆಕೆಯ ತಂದೆಗೆ ಉಂಡನ್ನವು ಕರಗಲಾರದು. ತನ್ನ ಮಗಳು ತನ್ನಲ್ಲಿ ಉತ್ಪನ್ನವಾಗುವ ಸ್ವಾಭಾವಿಕ ಇಚ್ಛೆಯ ವೇಗವನ್ನು ತಡೆಯಲಿಕ್ಕಾಗದೆ ಎಲ್ಲಿಯಾದರೂ ಸಮಾಜದ ಮತ್ತು ಧರ್ಮದ ಗೌರವವನ್ನು ಕೆಡಿಸಿಬಿಡುವಳೋ ಅಥವಾ ಜಾತಿಗೃಹಸ್ಥರು ಸಂದೇಹಾತ್ಮಕ ವಿಚಾರವನ್ನು ಪ್ರಕಟಿಸುವರೋ ಎಂಬ ಭೀತಿಯು ಆತನನ್ನು ಅನುದಿನವೂ ಬಾಧಿಸುತ್ತಿರುವುದು.

ಸಂತಾನೋತ್ಪತ್ತಿಗಾಗಿಯೇ ವಿವಾಹವು ಮಾಡಲ್ಪಡುತ್ತದೆ. ಈ ಇಚ್ಛೆ ಇಲ್ಲದಿರುವಲ್ಲಿ ವಿವಾಹಮಾಡಿಕೊಳ್ಳುವುದು ಪಾಪವೆಂಬುದನ್ನು ಧರ್ಮವು ಬೋಧಿಸುತ್ತದೆ ಎಂದು ಕೆಲವರು ಹೇಳಬಹುದು. ಪರಂತು,—ಹೀಗೆ ಹೇಳುವವರು ಧರ್ಮದ ಒಂದೇ ಅಂಗವನ್ನು ತಿಳಿದುಕೊಂಡವರಾಗಿರುತ್ತಾರೆ. ಸಂತಾನೋತ್ಪಾದನೆಗೆ ವಿವಾಹವು ಅತ್ಯಗತ್ಯವೆಂಬುದರಲ್ಲಿ ಸಂದೇಹವಿಲ್ಲ. ಆದರೆ,—ಇದನ್ನೇ ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡು ಮನುಷ್ಯರು ಕಾರ್ಯತತ್ಪರರಾಗುವುದಿಲ್ಲ.

ಮನುಷ್ಯನ ಸ್ವಾಭಾವಿಕ ಶಕ್ತಿಯನ್ನು ತಿಳಿದುಕೊಳ್ಳುವುದೂ ಅದಕ್ಕೆ ಸರಿಯಾಗಿ ಅವನ ಕರ್ತವ್ಯದ ನಿರ್ಣಯವನ್ನು ಮಾಡುವುದೂ ಧರ್ಮದ ಅಂತರ್ಗತವಾದ ನಿಯಮವಾಗಿರುತ್ತದೆ. ಯಾವದಾದರೊಂದು ಧರ್ಮವು ಸ್ಥಾಪಿಸಲ್ಪಡುವಾಗ ಅದನ್ನು ಸರಿಯಾಗಿ ಅನುಸರಿಸಲಿಕ್ಕೆ ಮನುಷ್ಯನಲ್ಲಿ ಶಕ್ತಿ ಇದೆಯೋ ಇಲ್ಲವೋ ಎಂಬುದರ ಕುರಿತು ಆ ಧರ್ಮಸಂಸ್ಥಾಪಕರು ಚೆನ್ನಾಗಿ ಆಲೋಚನೆ ಮಾಡಿಕೊಳ್ಳುತ್ತಾರೆ. ಉದಾಹರಣೆಗಾಗಿ ಮನುಮಹಾರಾಜರು ತನ್ನ ಮಾನವ ಧರ್ಮಶಾಸ್ತ್ರದಲ್ಲಿ ಯಾವ ಪ್ರಾಣಿಯನ್ನೂ ಹಿಂಸಿಸಬಾರದಾಗಿ ವಿಧಿಸಿರುವರು. ಪರಂತು ನಾವು ನಡಿಯುವಾಗ, ಕಸಗುಡಿಸುವಾಗ ಅಥವಾ ದೀಪ ಉರಿಸಿದ್ದಲ್ಲಿ ಅನೇಕ ಸೂಕ್ಷ್ಮ ಜಂತುಗಳು ನಾಶವಾಗುತ್ತವೆ. ಅನೇಕ ಕ್ರೂರಜಂತುಗಳು ಅವುಗಳ ಸ್ಥಾನವನ್ನು ಬಿಟ್ಟು ಜನರ ಮಧ್ಯಕ್ಕೆ ಒಂದಲ್ಲಿ ಅವುಗಳನ್ನು ಕೊಲ್ಲಬೇಕಾಗುತ್ತದೆ. ಈ ತರದ ಹಿಂಸೆಯಿಂದ ತಪ್ಪಲಿಕ್ಕೆಂದೂ ಸಾಧ್ಯವಿಲ್ಲ. ಇದರ ಪ್ರಾಯಶ್ಚಿತ್ತಕ್ಕೂ ಧರ್ಮಾತ್ಮರಾದ ಮನುವು ಪಂಚಮಹಾ ಯಜ್ಞ ವಿಧಿಯನ್ನು ವಿಧಿಸಿರುವರು. ಇದೇ ಪ್ರಕಾರ ಒಬ್ಬನು ತನ್ನ ಉತ್ಪತ್ತಿಯ ಸಂಪೂರ್ಣ ಭಾಗವನ್ನು ಅಥವಾ ಅದರ ಅಧಿಕಾಂಶವನ್ನು ದಾನವಾಗಿ ಕೊಡುವುದರಲ್ಲಿ ಒಳ್ಳೆಯದಲ್ಲದೆ ಕಟ್ಟದಿರುವುದಿಲ್ಲ ಅನೇಕರು ತಮ್ಮ ಉತ್ಪತ್ತಿಯ ಹಚ್ಚಿನಂಶವನ್ನು ಒಡವರಿಗೆ ದಾನಮಾಡುತ್ತಾರೆ. ಈ ನಿಯಮವನ್ನು ಸಾಧಾರಣ ಜನರ ಮೇಲೆ ಹೊರಿಸುವುದು ಬಹಳ ಪ್ರಯಾಸ. ಇದಕ್ಕಾಗಿ ತನ್ನ ಉತ್ಪತ್ತಿಯ ನೂರನೇ ಒಂದಂಶವನ್ನು ದಾನಮಾಡಬೇಕೆಂಬ ಸಮಾನವ್ಯವಸ್ಥೆಯನ್ನು ತಿಳಿದವರು ಮಾಡಿರುವರು. ತಾತ್ಪರ್ಯವೇನೆಂದರೆ—ಧರ್ಮ ಅರ್ಥಾತ್ ಕರ್ತವ್ಯಗಳನ್ನು ನಿರ್ಣಯಮಾಡುವ ಮೊದಲು ಕರ್ತೃವಿನಲ್ಲಿರುವ ಶಕ್ತಿಯನ್ನು ಚೆನ್ನಾಗಿ ತಿಳಿದುಕೊಳ್ಳುವುದು ಅತ್ಯಗತ್ಯವು.

ಧರ್ಮದಲ್ಲಿ ಮುಖ್ಯವಾಗಿ ಎರಡು ಅಂಗಗಳಿವೆ. ಒಂದು ಉದ್ದೇಶ; ಇನ್ನೊಂದು ಉದ್ದೇಶದ ಪೂರ್ತಿಯ ಸಾಧನೆ. ಆ ಉದ್ದೇಶದ ತುದಿಗೆ ಮುಟ್ಟಬೇಕಾದರೆ ಯಾವ ಮಾರ್ಗವನ್ನು ಅನುಸರಿಸಬೇಕು? ಆ ಮಾರ್ಗದಲ್ಲಿ ತಪ್ಪಿ ಹೋಗದಂತೆ ನಾವು ಏನೇನು ಮಾಡಬೇಕು? ಎಂಬ ಪ್ರಶ್ನೆಗೆ ಒಂದೇ ಉತ್ತರವೆಂದರೆ ಮಾನವನಿಗೆ ಯೋಗ್ಯವಾದ ಕರ್ತವ್ಯ ಕರ್ಮವನ್ನೇ ಮಾಡುತ್ತಿರಬೇಕು. ಈ ಪ್ರಕಾರ ಯಾವ ಕಾರ್ಯವು ಮನುಷ್ಯನನ್ನು ಅಧರ್ಮದಿಂದ ರಕ್ಷಿಸುತ್ತದೋ ಅದೆಲ್ಲವೂ ಧರ್ಮದಲ್ಲಿಯೇ ಸಮ್ಮಿಳಿತವಾಗಿರುತ್ತದೆ. ಈ ಕುರಿತು ಇನ್ನೊಂದು ದೃಷ್ಟಾಂತವನ್ನು ಕೊಡುತ್ತೇವೆ.

ಯುದ್ಧವೆಂಬುವುದು ಎಲ್ಲಾದಕ್ಕಿಂತಲೂ ಕೆಟ್ಟ ವ್ಯವಹಾರವಾಗಿರುತ್ತದೆ. ಇದರಿಂದ ಸಾವಿರಾರು ಮಂದಿಯ ಪ್ರಾಣಹಾನಿಯಾಗುತ್ತದೆ. ಜನಾಂಗದಲ್ಲೆಲ್ಲಿಯೂ ದರಿದ್ರತೆಯುಂಟಾಗುತ್ತದೆ. ಪರಂತು,—ಕೆಲವು ಸಂದರ್ಭಗಳಲ್ಲಿ ರಾಜನು ಯುದ್ಧವನ್ನು ಮಾಡುವುದು ಅವನ ಧರ್ಮವಾಗಿರುತ್ತದೆ. ಆದುದರಿಂದಲೇ ದೇಶದ ಮತ್ತು ಪ್ರಜೆಗಳ ಉನ್ನತಿಗಾಗಿ ಯುದ್ಧವು ಅನಿವಾರ್ಯವೆಂದು ಕಂಡುಬಂದರೆ ಆಗ ನ್ಯಾಯವಾದ ರೀತಿಯಲ್ಲಿ ಯುದ್ಧವನ್ನು ಮಾಡುವುದು ರಾಜಧರ್ಮವೆನ್ನಿಸಲ್ಪಟ್ಟಿರುವುದು.

ಇದೇ ರೀತಿಯಲ್ಲಿ ಜೀವನ ಪರ್ಯಂತ ಬ್ರಹ್ಮಚರ್ಯದಿಂದಿರುವುದು ಅತ್ಯಂತ ಶ್ರೇಷ್ಠವಾದ ಧರ್ಮವಾಗಿರುತ್ತದೆ. ಆದರೆ,—ಹೀಗಿರುವುದು ಸಾಮಾನ್ಯ ಜನರ ಶಕ್ತಿಗೆ ಮೀರಿದ ವಿಷಯವಾಗಿರುತ್ತದೆ. ಹೀಗಿರುವವರು ನೂರರಲ್ಲಿ ಒಂದು ಮಂದಿ ಸಿಗುವುದು ಪ್ರಯಾಸ. ಅನ್ಯಾಯವನ್ನು ನಿಲ್ಲಿಸಲಿಕ್ಕೆ ರಾಜನು ಸಮಯ ಬಂದಾಗ ಯುದ್ಧವನ್ನು ಮಾಡುವುದು ರಾಜಧರ್ಮವು ಹೇಗೋ ಹಾಗೆಯೇ ಮನುಷ್ಯನಲ್ಲಿ ಸ್ವಾಭಾವಿಕವಾಗಿ ಉಂಟಾಗುವ ಕಾಮೇಚ್ಛೆಯನ್ನು ಪೂರ್ತಿಗೊಳಿಸಲಿಕ್ಕೆ ನಿಯಮವಿರುದ್ಧವಾದ ದುರ್ವ್ಯವಹಾರಗಳನ್ನು ಆಚರಿಸ

ದಂತೆ ವಿವಾಹವೆಂಬ ಒಂದು ಉತ್ತಮಸಾಧನವು ಅತ್ಯಗತ್ಯವಾಗಿರುತ್ತದೆ. ಇಲ್ಲದಿದ್ದರೆ ಜನರು ತಮ್ಮ ಮಾನಸಿಕ ವೇಗವನ್ನು ತಡೆಯಲಾರದೆ ಸಮಾಜದ ನಿಯಮಗಳನ್ನು ಮೀರಿ ಗುಪ್ತರೀತಿಯಲ್ಲಿ ವ್ಯಭಿಚಾರಾದಿ ದುರ್ವ್ಯವಹಾರಾದಿಗಳನ್ನು ನಡೆಸುತ್ತಾರೆ. ಇದರಿಂದ ಸಮಾಜಕ್ಕೂ ಬಹುವಿಧದ ಹಾನಿಯನ್ನು ಅನುಭವಿಸಬೇಕಾಗುತ್ತದೆ. ಪ್ರತಿಯೊಬ್ಬನಸೂ ನಿಯಮದಲ್ಲಿಡಲಿಕ್ಕೆ ಪ್ರಾಮುಖ್ಯವಾದ ಎರಡು ಸಾಧನಗಳಿವೆ.

(1) ನಾವು ವಿಧಿಸುವಂತಹ ನಿಯಮವು ಸಾಧಾರಣ ಪರಿಸ್ಥಿತಿಯಲ್ಲಿಯೂ ಕೆಟ್ಟುಹೋಗುವಷ್ಟು ನಿರ್ಬಲವಾಗಿರಕೂಡದು

(2) ಹೆಚ್ಚಿನ ಜನರು ಅದನ್ನನುಸರಿಸದಂತೆ ಅತ್ಯಂತ ಕಠಿಣತರದಲ್ಲಿಯೂ ಇರಕೂಡದು.

ಸದಾಸಮಯ ಸ್ಥಿರವಾಗಿರುವಂತಹ ನಿಯಮಗಳೇ ಸಮಾಜದಲ್ಲಿರತಕ್ಕದ್ದು. ಒಂದು ವೇಳೆ ಬರೇ ಹೆಸರಿಗೆ ತಕ್ಕ ನಿಯಮಗಳನ್ನು ಇಟ್ಟದ್ದಾದರೆ ಅರ್ಥಾತ್,—ಸ್ತ್ರೀಪುರುಷರು ತಮಗೆ ಇಚ್ಛೆಬಂದಾಗ ಮಾತ್ರ ಕಂಡವರೊಡನೆ ಸಂಸರ್ಗಮಾಡಬಹುದೆಂಬ ಒಂದು ನಿಯಮವಿದ್ದರೆ ಇದು ಹೆಸರಿಗೆ ತಕ್ಕದ್ದೆಂದು ಹೇಳಬಹುದಲ್ಲದೆ ಇದನ್ನೊಂದು ನಿಯಮವೆಂದು ಹೇಳಬರುವುದಿಲ್ಲ; ಮತ್ತು ಸಮಾಜಕ್ಕೆ ಇಂತಹ ನಿಯಮದ ಆಗತ್ಯವೂ ಕಂಡುಬರುವುದಿಲ್ಲ. ಕಾರಣವೇನೆಂದರೆ,—ಯಾವ ನಿಯಮಗಳೂ ಇಲ್ಲದಿರುವಲ್ಲಿ,—ಯಾವ ವರ್ತನೆಯು ಸ್ತ್ರೀಪುರುಷರಲ್ಲಿ ಕಂಡುಬರುತ್ತದೋ ಅದು ಮೇಲೆ ವಿವರಿಸಿದ ನಿರ್ಬಲವಾದ ನಿಯಮವನ್ನು ವಿಧಿಸಿದರೂ ಇದ್ದೇ ಇರುವುದು. "ಸಂತಾನದ ಇಚ್ಛೆಯು ಮತ್ತು ಅವಶ್ಯಕತೆಯು ಸರಿಯಾಗಿ ತಿಳಿದಿರುವ ವರೆಗೆ ಸ್ತ್ರೀಪುರುಷರಿಗೆ ಪರಸ್ಪರ ಸಂಬಂಧಮಾಡಿಕೊಳ್ಳಲು ಅಧಿಕಾರಕೊಡಕೂಡದು" ಎಂಬ ಉಗ್ರವಾದ ಒಂದು ನಿಯಮವನ್ನಿಟ್ಟರೆ ಅದು ಸಾಧಾರಣ ಜನರಿಂದ ಆಚರಿಸಲ್ಪಡಲಿಕ್ಕಿಲ್ಲ. ಅತ್ಯಲ್ಪ

ಕಾಲದಲ್ಲಿಯೇ ಉಲ್ಲಂಘಿಸಲ್ಪಡುವುದು. ಆದುದರಿಂದಲೇ ಇವೆರಡರ ಮಧ್ಯವರ್ತಿಯಾಗಿ **"ಸ್ತ್ರೀಪುರುಷರು ಬ್ರಹ್ಮಚರ್ಯಪಾಲನೆಯಲ್ಲಿ ಅಸಮರ್ಥರಾದರೆ ಉತ್ತಮ ಸಂತಾನೋತ್ಪತ್ತಿ ಮತ್ತು ಸ್ವಾಭಾವಿಕವಾದ ಇಚ್ಛೆಯನ್ನು ನಿಯಮಿತರೀತಿಯಲ್ಲಿ ಪೂರ್ತಿಗೊಳಿಸುವಂತೆ ವಿವಾಹಮಾಡಿಕೊಳ್ಳಬೇಕು"** ಎಂಬ ಒಂದು ನಿರ್ಣಯವನ್ನು ನಿಯಮಿಸಲಾಗಿದೆ. ಈ ನಿಯಮವನ್ನು ಮೀರಿ ನಡೆಯುವ ವಿವಾಹಗಳಿಂದಲೇ ಜನರ ಆದರಲ್ಲೂ ವರ್ತಮಾನಕಾಲದಲ್ಲಿ ಅನೇಕ ಕನ್ಯೆಯರ ಜೀವನವು ಬಹಳ ಶೋಚನೀಯಾವಸ್ಥೆಯಲ್ಲಿ ಬಿದ್ದಿರುತ್ತದೆ.

"ಸ್ತ್ರೀಪುರುಷರಲ್ಲಿರುವ ಪ್ರೇಮದ ವೃದ್ಧಿಯೇ ವಿವಾಹದ ನಿಜವಾದ ಉದ್ದೇಶವಾಗಿರುತ್ತದೆ." ಎಂದು ಕೆಲವರ ಅಂಬೋಣವಿದೆ. ಪರಂತು,—ಇದು ಒಂದು ವಿಧದ ವಾಕ್ಚಾತುರ್ಯವೆನ್ನಬೇಕು. ಏತಕ್ಕೆಂದರೆ ಹೀಗೆ ಹೇಳುವವರು ವಿವಾಹವೆಂಬ ಶಬ್ದದ ಮೇಲೆಯೇ ಮನಮುಗ್ಧರಾಗಿರುವರು ಹೊರತು ಅದರ ನಿಜವಾದ ಅರ್ಥವನ್ನು ಸರಿಯಾಗಿ ತಿಳಿದುಕೊಂಡಿಲ್ಲ. ಪರಸ್ಪರ ಸಂಸರ್ಗಮಾಡುವಂತಹ ಯಾವ ಸ್ವಾಭಾವಿಕ ಇಚ್ಛೆಯು ಸ್ತ್ರೀಪುರುಷರಲ್ಲಿದೆಯೋ ಅದನ್ನು ನಿಯಮಿತ ರೀತಿಯಲ್ಲಿಡುವುದಕ್ಕೇನೇ ಪ್ರೇಮದ ವೃದ್ಧಿಯೆನ್ನಬಹುದು. ಉತ್ತಮವಾದ ಪ್ರೇಮದ ಅರ್ಥವನ್ನು ಕಾಮವಾಸನೆಯ ಪೂರ್ತಿಗಾಗಿ ಉಪಯೋಗಿಸುತ್ತೀರೋ ಎಂದು ಯಾರಾದರೂ ಪ್ರಶ್ನಿಸಬಹುದು. ದಾಂಪತ್ಯಪ್ರೇಮವೆಂಬುವುದು ಮಾತಾಪಿತೃಗಳ ಅಥವಾ ಸಹೋದರ ಸಹೋದರಿಯರೇ ಮುಂತಾದವರಲ್ಲಿರುವ ಪ್ರೇಮದಂತಿರುವುದಿಲ್ಲ. ಇವರ ಪ್ರೇಮವು ಒಂದಿಲ್ಲೊಂದು ವಿಧದಲ್ಲಿ ಜೀವಿತಕಾಲದಲ್ಲಿಯೇ ವಿಚ್ಛೇದವಾಗಬಹುದು; ಪರಂತು, ಯೋಗ್ಯರಾದ ಸುಶಿಕ್ಷಿತ ಸ್ತ್ರೀಪುರುಷರಲ್ಲಿರುವ ಅಂತರಾತ್ಮ ಪ್ರೇರಿತವಾದ ದಾಂಪತ್ಯಪ್ರೇಮವು ಜೀವನಾಂತ್ಯದ ವರೆಗೆ ಸ್ಥಿರವಾಗಿ ನಿಲ್ಲುವುದಲ್ಲದೆ ಇತರರಿಗೂ ಆದರ್ಶನೀಯವಾಗುವುದು.

ಪತಿಪತ್ನಿಯರ ಪರಸ್ಪರ ಪ್ರೇಮವು ಒಂದು ವೇಳೆ ಅಧಿಕವಾಗಿ ಹೋದರೂ ಅದರಿಂದ ಅವರಿಗೆ ಹೆಚ್ಚಿನ ಹಾನಿಯುಂಟಾಗಲಾರದು. ಕಾರಣವೇನೆಂದರೆ— ಈ ಪ್ರಕಾರದ ಪ್ರೇಮವು ಕೆಟ್ಟುಹೋಗದಂತೆ ಅದನ್ನು ಯುಕ್ತರೀತಿಯಲ್ಲಿ ಉಪಯೋಗಿಸಿಕೊಳ್ಳಲು ನ್ಯಾಯವಾದ ನಿಯಮವನ್ನನುಸರಿಸಿ ಒಂದು ವಿಶಿಷ್ಟ ಸಂಬಂಧವನ್ನು ಅವರು ಮಾಡಿ ಕೊಂಡಿರುವರು ಪ್ರೇಮವೆಂಬುವುದು ಸಾಮಾನ್ಯ ವಸ್ತುವಲ್ಲವು. ಪ್ರೇಮದ ತತ್ವವನ್ನು ತಿಳಿದುಕೊಂಡಂತಹವರು ಜಾಗರ, ನಿದ್ರೆ, ಸ್ವಪ್ನ ಈ ಮೂರವಸ್ಥೆಗಳಲ್ಲಿಯೂ ಪ್ರಸನ್ನಚಿತ್ತರಾಗಿರುತ್ತಾರೆ. ನಿಸ್ವಾರ್ಥಿ ಯಾದ ಪ್ರೇಮಿಯು ಯಾವ ತರದ ಬಂಧನವನ್ನೂ ಸಹಿಸಲಾರನು. ನಿಜವಾದ ಪ್ರೇಮಿಯು ಇಡೀ ಜಗತ್ತನ್ನು ಏಕಪ್ರಕಾರವಾಗಿ ಪ್ರೀತಿಸು ವನು. ಪ್ರೇಮವೆಂಬುವುದು ಈಶ್ವರಪ್ರದತ್ತವಾದ ಒಂದು ಅಮೂಲ್ಯ ವಸ್ತುವಾಗಿರುವುದು. ಸಾಮಾಜಿಕ ಜೀವನದಲ್ಲಿ ಗೃಹಸ್ಥಾಶ್ರಮವು ಅತ್ಯಂತ ಪವಿತ್ರವಾಗಿರುವುದು. ಅದನ್ನು ಪ್ರವೇಶಿಸಿದಂತಹ ಪತಿಪತ್ನಿಯರ ನಿಷ್ಕಲಂಕ ಮತ್ತು ಅವಿಚಲವಾದ ಹಾಗೂ ಶಾರೀರಿಕ, ಮಾನಸಿಕ, ಆತ್ಮಿಕ ಪ್ರೇಮವು ಪರಮ ಪುನೀತವಾದುದು. ಇಂತಹ ಪವಿತ್ರವಾದ ಪ್ರೇಮದ ತತ್ವವನ್ನರಿತ ದಂಪತಿಗಳ ಜೀವನವೇ ನಿಜ ವಾದ ದಾಂಪತ್ಯಜೀವನವೆನ್ನಲ್ಪಡುವುದು. ಪತಿಪತ್ನಿಯರೆಂಬ ವಿಶಿಷ್ಟ ಸಂಬಂಧವಿರದಿದ್ದರೆ ಪ್ರೇಮವು ಮೇರೆತಪ್ಪಿ ಮಾನವಸಮಾಜದಲ್ಲಿ ಮಹಾ ಅನರ್ಥಗಳುಂಟಾಗುವವು. ಹೀಗಾಗದಂತೆ, ಸ್ತ್ರೀಪುರುಷರಿಗೆ ವಿವಾಹವೆಂಬ ಅದೊಂದು ವಿಶಿಷ್ಟ ಸಂಬಂಧವನ್ನು ಪ್ರಾಚೀನಕಾಲದ ತತ್ವವೇತ್ತರು ಏಕಮತದಿಂದ ನಿರ್ಣಯಿಸಿದ್ದಾರೆ. ಪರಂತು, ಪ್ರಚಲಿತ ಕಾಲದಲ್ಲಿ ಅಂದಿನ ಆ ಆದರ್ಶನೀಯವಾದ ಪದ್ಧತಿಯು ಈಗ ಲೋಪ ವಾಗುತ್ತಿರುವುದರಿಂದ ಇಂತಹ ವಿಷಯಗಳನ್ನು ಪುನಹ ಜನತೆಯ ಮುಂದಿಡಬೇಕಾಗಿ ಬಂತು. ಈ ಮೇಲೆ ವಿವರಿಸಿದ ಎಲ್ಲಾ ಅಭಿ ಪ್ರಾಯಗಳಿಂದ ವಿವಾಹದ ಪ್ರಯೋಜನವೇನೆಂಬುವುದು ವಾಚಕ

ವೃಂದಕ್ಕೆ ಗೊತ್ತಾಗದಿರದು. ಪ್ರಚಲಿತ ಕಾಲದ ಹಿಂದೂಸಮಾಜದಲ್ಲಿ ಆಗುತ್ತಿರುವ ವಿವಾಹವು ಕ್ರಮತಪ್ಪಿ ಬಹು ವಿಧದ ಅಂಧಾಚಾರಗಳಿಗೆ ಬಲಿಬಿದ್ದು ಅನೇಕ ಯುವತಿಯರನ್ನು ಮಹತ್ತಾದ ದುಃಖಕ್ಕೀಡುಮಾಡಿದೆ. ಇಂತಹ ಅಂಧಾಚಾರಗಳಲ್ಲಿ ವರಶುಲ್ಕವೂ ಒಂದಾಗಿರುತ್ತದೆ. ಈ ಪದ್ಧತಿಯು ಎಷ್ಟು ಅನ್ಯಾಯಯುಕ್ತವಾಗಿರುತ್ತದೆ ಎಂಬುದನ್ನು ತಿಳಿದುಕೊಳ್ಳುವುದು ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ. ಆದುದರಿಂದ ಇಲ್ಲಿ ವರಶುಲ್ಕದ ಕುರಿತು ಸಂಕ್ಷಿಪ್ತವಾಗಿ ವಿವರಿಸುವೆವು.

## ವ ರ ಶು ಲ್ಕ

ನಾರೀಜೀವನವೆಂಬುದು ನಿಷ್ಕಲಂಕ ಪ್ರೇಮದ ಇತಿಹಾಸವಾಗಿರುತ್ತದೆ. ನಾರಿಯ ಹೃದಯಮಂದಿರವು ಪ್ರಾರಂಭದಲ್ಲಿ ಮಾತಾಪಿತೃಗಳ, ಆ ಮೇಲೆ ಪತಿಯ, ತದನಂತರ ಪುತ್ರಪುತ್ರಿಯರ, ಈ ರೀತಿ ತರತರದ ಪ್ರೇಮತರಂಗಗಳಿಂದ ತುಂಬಿರುತ್ತದೆ. ಇದರಿಂದಲೇ ಆಕೆಯು ವಿಕ್ಷುಬ್ಧವಾದ ಈ ಜಗತ್ತಿನಲ್ಲಿರುವ ಮಾನವಸಮಾಜದ ಮಧ್ಯೆ ತನ್ನ ಜೀವನಪಥವನ್ನು ಮುಂದುವರಿಸಬೇಕಾಗುತ್ತದೆ. ಈ ಲೋಕದಲ್ಲಿಯೇ ಆಕೆಯ ಆಶಾನಿರಾಶೆಗಳೂ, ಸಂಪತ್ತುವಿಪತ್ತುಗಳೂ ತುಂಬಿರುತ್ತವೆ. ಯಾವಾಗ ಪುರುಷಜೀವನವು ತನ್ನ ದೇಹಗುಡಿಸಲಿನಿಂದ ಹೊರಹೊರಟು ಮೇಲಕ್ಕೆದ್ದು ಆಕಾಶಮಧ್ಯದಲ್ಲಿರುವ ಸೂರ್ಯನ ಪ್ರಭೆಯೊಂದಿಗೆ ಸ್ವಚ್ಛಂದವಾಗಿ ವಿಹರಿಸುತ್ತದೋ ಆಗ ನಾರೀಜೀವನವು ಏಕಾಂಗಿಯಾಗಿ ತನ್ನ ಅಂತಃಕರಣವೆಂಬ ಗುಡಿಸಲಿನಲ್ಲಿ ಅವಿತಿರುವುದು. ನಾರೀಸ್ನೇಹವು ಪುರುಷನ ವಿಶ್ರಾಂತಿಯ ಪ್ರಮೋದವೂ, ಆಲಸ್ಯದ ನಿವಾರಣವೂ ವಿರಾಮಕಾಲಕ್ಕೆ ಚಿತ್ತವಿನೋದಮಾಡುವಂತಹದ್ದೂ ಆಗಿರುತ್ತದೆ. ಅದು ಆಕೆಯ ಸಮಸ್ತ ಮುಹೂರ್ತವೂ ಸರ್ವ ಚಿಂತನೆಯೂ, ಸಕಲ ಕಾರ್ಯವೂ, ಸಂಪೂರ್ಣ ಜೀವನವೂ ಆಗಿರುತ್ತದೆ. ಸ್ನೇಹದಲ್ಲಿಯೇ ಅವಳ ಜೀವನವೂ ನಿವಾಸವೂ ಕೊನೆಗೆ

ಮೃತ್ಯುವೂ ಅವಲಂಬಿಸಿರುತ್ತದೆ. ನಾರೀಸಮುದಾಯಕ್ಕೆ ಯಾವು ದಾದರೊಂದು ಸ್ವರ್ಗವಿರುವುದಾದರೆ ಅದು ಅವರ ಅಂತಃಕರಣ ಮಧ್ಯದಲ್ಲಿರುವ ನಿರ್ಮಲವಾದ ಸ್ನೇಹರಾಶಿಯಲ್ಲದೆ ಮತ್ತೊಂದಲ್ಲ. ಸ್ನೇಹವೇ ಈ ಜೀವನದ ಆಹಾರ ವಿಹಾರವೂ, ನಿದ್ರೆ ಸ್ವಪ್ನವೂ ಆಗಿರು ತ್ತದೆ. ಇಂತಹ ಪವಿತ್ರವಾದ ನಾರೀಸ್ನೇಹದಿಂದ ಅತಿ ಭಯಂಕರ ವಾದ ದ್ವೇಶಾಗ್ನಿಯು ಕೂಡಾ ಶಾಂತವಾಗಬಲ್ಲುದು. ಈ ತರಹದ ನಾರಿಯರ ಪವಿತ್ರ ಜೀವನವನ್ನು ಈಗಿನ ಅನೇಕರು ತಮ್ಮಲ್ಲಿನ ಧನಲೋಲುಪ್ತತೆಯಿಂದ ನಾಶಮಾಡುತ್ತಾರೆ. ವರನ ಅಥವಾ ವಧು ವಿನ ಕಡೆಯಿಂದ ಒಂದಷ್ಟು ಹಣ ದೊರೆಯದ ಮಕ್ಕಳ ಮದುವೆಯನ್ನು ಆಗಗೊಡುವುದಿಲ್ಲ. ಈ ತರದ ವರದಕ್ಷಿಣೆಯ ಕಾಟದಿಂದಲೇ ಎಷ್ಟೋ ತರುಣಿಯರ ಜೀವನವು ದುಃಖಕ್ಕೀಡಾಗಿದೆ.

ಈಗಿನ ಕಾಲದಲ್ಲಿ ವರದಕ್ಷಿಣೆ ಎಂಬ ಘೋರಪಿಶಾಚವು ಹಿಂದೂಗಳಲ್ಲಿ ಪ್ರತಿಯೊಂದು ಪಂಗಡಗಳಲ್ಲಿಯೂ ಬಲವಾಗಿ ನೆಲೆ ನಿಂತಿದೆ. ಎಲ್ಲೆಲ್ಲಿ ಸ್ತ್ರೀಪುರುಷರಲ್ಲಿ ಪರಸ್ಪರ ಯೋಗ್ಯತೆಯು ಸರಿಬಿದ್ದು ಪ್ರೇಮದ ಬೀಜವು ಮೊಳೆಯುತ್ತದೋ ಅಲ್ಲಲ್ಲಿ ಈ ಪಿಶಾಚವು ಬಂದು ಅದನ್ನು ನಾಶಮಾಡಿಬಿಡುತ್ತದೆ. ಯಾರಲ್ಲಿ ವಿದ್ಯೆ, ರೂಪ, ಯವ್ವನ ಮತ್ತು ಉತ್ತಮವಾದ ಗುಣಸಪತೆಗಳಿವೆಯೋ ಅಂಥವರನ್ನು ಈ ಭೂತವು ಬಂದು ಅಗಲಿಸುತ್ತದೆ. ಈ ಪಿಶಾಚಿಯ ಉಪದ್ರವಕ್ಕೆ ಮಿತಿಯೇ ಇಲ್ಲ. ಇದರ ಘರ್ಜನೆಯನ್ನು ಕೇಳಿದರೆ ಅಪಾರವಾದ ಸಂಪತ್ತಿನ ಕುಟುಂಬವು ಸಹ ಗಡಗಡನೆ ನಡುಗತೊಡಗುತ್ತದೆ. ಆಹಾ! ಈ ತರದ ಸಮಾಜಪೀಡೆಯು ಇನ್ನೆಷ್ಟು ಕಾಲದ ವರೆಗೆ ಇರುವುದು? ಈ ಪ್ರೇಮವಧೆಯನ್ನು ಯಾರು ಸಹಿಸಬಲ್ಲರು? ಇದರ ಬಾಧೆಯಿಂದಲೇ ಎಷ್ಟೋ ಕುಟುಂಬಗಳು ನಾಶಹೊಂದಿದವು. ವಿದ್ಯಾ ವತಿ ಮತ್ತು ಸೌಂದರ್ಯಯುಕ್ತರಾದ ಎಷ್ಟೋ ಮಂದಿ ಕನ್ಯೆಯರೂ ಅನೇಕ ಮಂದಿ ವಿದ್ಯಾವಂತ ಯುವಕರೂ ಅನುಕೂಲವಾದ

ದಾಂಪತ್ಯಕ್ಕೆ ಅವಕಾಶವಿಲ್ಲದೆ ತಲ್ಲಣಿಸುತ್ತಿರುವುದು ವರದಕ್ಷಿಣೆ ಎಂಬ ಈ ಪೈಶಾಚಿಕ ಪದ್ಧತಿಯ ಉಪದ್ರವದಿಂದಲ್ಲವೇ? ದೇಶಾಭಿಮಾನ, ಸಮಾಜಹಿತಚಿಂತನೆ ಇತ್ಯಾದಿ ವಿಚಾರಗಳಿಲ್ಲದ ಡಾಂಭಿಕರ ಮಾತಂತಿರಲಿ; ದೇಶಬಾಂಧವರೆಂತಲೂ ಉನ್ನತ ವಿದ್ಯಾವಂತರೆಂದೂ ಹೆಸರು ಪಡೆದು ಉಪನ್ಯಾಸ ಮಾಡುವಾಗ ಮೇಘಗರ್ಜನೆಯೊಂದಿಗೆ ವರದಕ್ಷಿಣೆಯನ್ನು ಖಂಡಿಸುತ್ತಾರೆ ಪರಂತು, ಕಾರ್ಯಕ್ಕೆ ಬರುವಾಗ ಮೂಕಬುದ್ಧಿಯನ್ನುಪಯೋಗಿಸಿ ತಮ್ಮ ಮಕ್ಕಳ ವಿಷಯದಲ್ಲಿಯೇ ವರದಕ್ಷಿಣೆಯ ಬಗ್ಗೆ ಸೆಟ್ಟಗೆ ಸಿಲ್ಲುತ್ತಾರೆ. ಇಂತಹ ಗೋಮುಖ ವ್ಯಾಘ್ರಗಳ ದೆಸೆಯಿಂದಲೇ ದೇಶ ಹಾಗೂ ಸಮಾಜದ ಏಳಿಗೆಯು ಭಗ್ನವಾಗುತ್ತಿದೆ. ಈಗ ಬರಬರುತ್ತಾ ಬಿ. ಎ., ಎಮ್. ಎ., ಐ. ಸಿ. ಎಸ್. ಮುಂತಾದ ಪದವೀಧರರು ಇನ್ನೂ ಕೆಲವು ಕಡೆಗಳಲ್ಲಿ ಈ ಪದವಿಗಳನ್ನು ಪಡೆಯಲಿಕ್ಕೆ ಆತುರಗೊಳ್ಳುವವರೂ ವರದಕ್ಷಿಣೆಯ ಮೂಲಕ ಧನಾರ್ಜನೆ ಮಾಡುತ್ತಿದ್ದಾರೆ. ದೇವರಿಗಾದರೂ ಅಂಜಬೇಡವೇ? ಆತನು ಜ್ಞಾನನೇತ್ರಗಳಿಗೆ ಮಾತ್ರ ಗೋಚರಿಸುವನು. ಎಲ್ಲವನ್ನೂ ನಿರಾಕರಿಸಿದರೂ ತನ್ನ ಆತ್ಮಸಾಕ್ಷಿಯನ್ನಾದರೂ ಇಟ್ಟುಕೊಳ್ಳಬೇಡವೇ? ಅಂತಃಕರಣ ವಿರುದ್ಧವಾದ ಈ ಕ್ರೂರ ಕಾರ್ಯವನ್ನು ಮತ್ತೂ ಮತ್ತೂ ರೂಢಿಯಲ್ಲಿಡಲು ಹೇಗೆ ಮನಸ್ಸು ಬರುತ್ತದೆ? ಇಂದಿಲ್ಲದಿದ್ದರೆ ನಾಳೆ ಎಂಬಂತೆ ಒಬ್ಬರಿಂದ ಇನ್ನೊಬ್ಬರಿಗೆ ಸೇರುತ್ತಿರುವ ಹಣಕ್ಕೆ ಮೋಹಗೊಂಡು "ವರಶುಲ್ಕ" ಯಾ "ಕನ್ಯಾಶುಲ್ಕ" ಎಂಬ ಕೆಟ್ಟ ವ್ಯಾಪಾರದಿಂದ ತಮ್ಮ ಮಕ್ಕಳನ್ನು ಮಾರುತ್ತಿರುವ ನರಮಾಂಸ ವಿಕ್ರಯದ ಈ ನೀಚಪದ್ಧತಿಯನ್ನು ಯುವಕರೆಲ್ಲರೂ ಕೂಡಿ ಏತಕ್ಕೆ ನಿಲ್ಲಿಸಕೂಡದು? ಈ ಕೆಟ್ಟ ರೂಢಿಯನ್ನು ನಾಶಗೊಳಿಸಿ ಹಿಂದೂಸಮಾಜದ ಗೌರವವನ್ನು ಹೆಚ್ಚಿಸುವುದು ನಮ್ಮ ಕರ್ತವ್ಯವಾಗಿರುತ್ತದೆ.

ನಮ್ಮ ಧರ್ಮತತ್ತ್ವಗಳಲ್ಲಿ ಅಹಿಂಸಾ ಪರಮೋಧರ್ಮವೆಂಬುದು ಉತ್ತಮೋತ್ತಮ ತತ್ತ್ವವಾಗಿರುತ್ತದೆ. ಅತಿ ಚಿಕ್ಕ ಜಂತುವಾದ ಇರುವೆಯನ್ನು ಸಹ ಕೊಲ್ಲಬಾರದೆಂಬುದನ್ನು ಈ ತತ್ತ್ವವು ಬೋಧಿಸುತ್ತದೆ. ಧರ್ಮವು ಹೀಗೆ ಬೋಧಿಸುತ್ತಿರುವುದಾದರೂ ಜನರು ಮಾತ್ರ ಅದನ್ನು ಕಾರ್ಯಕ್ಕೆ ತರುವುದಿಲ್ಲ. ಅಹಿಂಸೆಯ ಹೆಸರಲ್ಲಿ ಲೆಖ್ಖವಿಲ್ಲದೆ ಅನಾಚಾರಗಳು ಹಿಂದೂಸಮಾಜದಲ್ಲಿ ನಡೆಯುತ್ತಿವೆ. ಇದರಲ್ಲಿ ಇನ್ನೊಂದು ಆಶ್ಚರ್ಯವೇನೆಂದರೆ:–ಮದ್ಯ, ಮಾಂಸಾದಿ ನಿಕೃಷ್ಟ ಪದಾರ್ಥಗಳನ್ನು ತ್ಯಜಿಸಿ ನಿತ್ಯವೂ ವಿಷ್ಣುಸಹಸ್ರನಾಮ ಅಥವಾ ರಾಮನಾಮವನ್ನು ಜಪಿಸುವಂತಹವರು ಸಹ ಅತ್ಯಂತ ಹ್ಯೇಯವಾದ ರೂಢಿಗೆ ಕಟ್ಟುಬಿದ್ದಿರುವರು. ಅಂತಹ ರೂಢಿಗಳಲ್ಲಿ ಒಂದಾದ ಈ ವರದಕ್ಷಿಣೆಯ ದುಷ್ಪರಿಣಾಮವನ್ನು ಯಾರೊಬ್ಬರೂ ಮನಸ್ಸಿಗೆ ತಂದುಕೊಳ್ಳುವುದಿಲ್ಲ.

ವಿವಾಹಕಾಲದಲ್ಲಿ ವರನ ತಂದೆಯು ವಧುವಿನ ತಂದೆಯಿಂದ ಒಂದು ನಿಶ್ಚಿತಧನವನ್ನು ಪಡೆಕೊಳ್ಳುವುದಕ್ಕೆ ವರಶುಲ್ಕವೆಂದೂ ಕನ್ಯೆಯ ತಂದೆಯು ವರನ ತಂದೆಯಿಂದ ತೆಗೆದುಕೊಳ್ಳುವುದಕ್ಕೆ ಕನ್ಯಾಶುಲ್ಕವೆಂದೂ ಹೆಸರು. ಈ ರೀತಿಯ ಧನವು ಸಿಕ್ಕದಿದ್ದರೆ ಆತನು ತನ್ನ ಮಕ್ಕಳ ವಿವಾಹವನ್ನು ನೆರವೇರಿಸಲಾರನು. ಕನ್ಯಾಶುಲ್ಕವು ಹೆಚ್ಚಾಗಿ ವಾಡಿಕೆಯಲ್ಲಿಲ್ಲ. ಪರಂತು ವರಶುಲ್ಕವು ಈಗ ಎಲ್ಲೆಲ್ಲಿಯೂ ಹಬ್ಬಿಕೊಂಡಿದೆ. ಇದು ಒಂದೇ ಪ್ರಾಂತ್ಯದಲ್ಲಿರದೆ ಇಡೀ ಹಿಂದುಸ್ಥಾನದಲ್ಲೆಲ್ಲಾ ಸರ್ವ ಸಂಪ್ರದಾಯಗಳಲ್ಲೂ ಹಬ್ಬಿಕೊಂಡಿದೆ. ಹಿಂದೂಸಮಾಜದಲ್ಲಿ ಇದರಿಂದಾಗುವ ಹಿಂಸೆಯಷ್ಟು ಬೇರೆ ಯಾವುದರಿಂದಲೂ ಆಗುವುದಿಲ್ಲ. ಹೇಗೆಂದರೆ, ಕಟುಕನು ಒಂದು ಪ್ರಾಣಿಯನ್ನು ಕೊಲ್ಲುವಾಗ ಕತ್ತಿಯಿಂದ ಒಂದೇ ಸಾರಿ ಕೊಯ್ದುಬಿಡುತ್ತಾನೆ. ಅದು ಒಂದೆರಡು ಘಳಿಗೆ ತನಕ ಒದ್ದಾಡಿ ಕಡೆಗೆ ಪ್ರಾಣಬಿಡುತ್ತದೆ. ಆದರೆ ವರದಕ್ಷಿಣೆಯನ್ನು ಪಡೆಕೊಳ್ಳು

ವವರು ಕನ್ಯೆಯ ಮತ್ತು ಅವಳ ಎಲ್ಲಾ ಸಂಬಂಧಿಕರನ್ನು ಅನುದಿನದ ದುಃಖದಲ್ಲಿ ಮುಳುಗಿಸುತ್ತಾರೆ. ಇದರ ದೆಸೆಯಿಂದಾಗಿ ಕನ್ಯೆಯರಿಗೆ ದೊರೆಯುವ ದುಃಖವು ಅಷ್ಟಿಷ್ಟಲ್ಲ. ಹಿಂದೂಗೃಹಗಳಲ್ಲಿ ಹೆಮ್ಮಕ್ಕಳು ಜನಿಸಿದರೆಂದರೆ ತಾಯಿತಂದೆಗಳು ಬಹಳ ದುಃಖಕ್ಕೀಡಾಗುತ್ತಾರೆ. ಕೆಲವು ಮನೆಗಳಲ್ಲಿ ಹೆಣ್ಣು ಶಿಶು ಹುಟ್ಟಿದ ಕೂಡಲೇ ಅಳುವ ಪದ್ಧತಿಯೂ ಉಂಟು. ಇದು ಹಿಂದೂಗಳಲ್ಲಿರುವ ಮೂಢನಂಬಿಕೆಯೆಂದು ಅನ್ಯಮತದವರು ಹೇಳುತ್ತಾರೆ. ಆದರೆ ಇದು ಮೂಢನಂಬಿಕೆಯಲ್ಲ. ವರಶುಲ್ಕದ ಭಯವೇ ಈ ತರದ ದುಃಖಕ್ಕೆ ಮೂಲಕಾರಣ. ಎಷ್ಟೋ ಕಡೆಗಳಲ್ಲಿ ಹೆಣ್ಣು ಶಿಶುಗಳನ್ನು ಹುಟ್ಟಿದ ಕೂಡಲೇ ಕೊಂದುಬಿಡುವರು. ಯಾವಾಕೆಗೂ ತನ್ನುದರದಲ್ಲಿ ಜನಿಸಿದ ಶಿಶುವಿನಲ್ಲಿ ಪ್ರೇಮವಿಲ್ಲದಿರಲಿಕ್ಕಿಲ್ಲ. ಶಿಶುವು ಎಷ್ಟೇ ಕುರೂಪಿಯಾಗಿರಲಿ ತನಗೆ ಹುಟ್ಟಿದ ಕನ್ಯೆಯಾದುದರಿಂದ ತಂದೆಯೂ ಅದನ್ನು ತಿರಸ್ಕರಿಸಲಾರನು. ಪರಂತು ವರದಕ್ಷಿಣೆಯೆಂಬ ಕೆಟ್ಟ ವ್ಯವಹಾರವು ನಾಶಹೊಂದುವ ವರೆಗೆ ಈ ದುಃಖವು ನಿವಾರಣೆಯಾಗಲಾರದು. ವಿವಾಹವೆಂಬುದು ವಧೂವರರಿಗಲ್ಲದೆ ಅವರ ಮಾತಾಪಿತೃಗಳಿಗಲ್ಲವಷ್ಟೆ! ಇದು ಹೊರತು ಕೇವಲ ವಧುವಿಗಾಗಲೀ ಅಥವಾ ವರನಿಗಾಗಲೀ ವಿವಾಹವು ಜರಗುವುದಿಲ್ಲ. ಗಾಡಿಯ ಎರಡು ಗಾಲಿಗಳಂತೆ ಗೃಹಸ್ಥಜೀವನವೆಂಬ ರಥಕ್ಕೆ ದಂಪತಿಗಳೆಂಬ ಎರಡು ಚಕ್ರಗಳು ಸಮಾನತೆಯಲ್ಲಿರಬೇಕು. ವಿವಾಹಕಾಲದಲ್ಲಿ ವಧೂವರರ ಪರಸ್ಪರ ಯೋಗ್ಯತೆಗಳು ಉತ್ತಮರೀತಿಯಲ್ಲಿ ಸಮಾನವಿರಬೇಕು. ಆದರೆ ಈಗಿನ ಕಾಲದಲ್ಲಿ ಈ ಕುರಿತು ಒಬ್ಬರೂ ಧ್ಯಾನವನ್ನಿಡುವುದಿಲ್ಲ. 'ನೀನು ಕನ್ಯಾದಾನಮಾಡಿದ್ದರಿಂದ ನಿನಗಿಂತ ನಾನು ಶ್ರೇಷ್ಠನು' ಎಂದು ಒಬ್ಬನೂ, ನನ್ನ ಹುಡುಗನು ಈಗಲೇ ಮೆಟ್ರಿಕಿನಲ್ಲಿ ಓದುತ್ತಾನೆ. ಆದುದರಿಂದ 1000ಕ್ಕಿಂತ ಕಡಿಮೆ ತೆಗೆದುಕೊಳ್ಳಲಾರೆ' ಎಂದು ಇನ್ನೊಬ್ಬನೂ, ನನ್ನ ಮಗನು ಮೊನ್ನೆ ತಾನೇ ಬಿ. ಎ. ಪರೀಕ್ಷೆಯಲ್ಲಿ ಉತ್ತಮರೀತಿಯಲ್ಲಿ ಪಾಸಾಗಿದ್ದಾನೆ. ಇನ್ನು ಒಂದೆರಡು ತಿಂಗಳೊಳಗೆ ಐ. ಸಿ. ಎಸ್. ಕಲಿಯಲಿಕ್ಕೆ

ಇಂಗ್ಲೆಂಡಿಗೆ ಹೋಗುತ್ತಾನೆ. ನಿನ್ನ ಮಗಳನ್ನು ಅವನಿಗೆ ಕೊಡ ಬೇಕೆನ್ನುವಿಯಾದರೆ 10,000 ಕೊಟ್ಟೇ ತೀರಬೇಕು. ಇಲ್ಲವಾದರೆ ನಿನ್ನ ಕನ್ಯೆಯೇ ಬೇಡ' ಎಂದು ನಾನಾ ವಿಧದಲ್ಲಿ ತಮ್ಮ ಮಕ್ಕಳ ಮೇಲೆ ಬೆಲೆ ನಿಶ್ಚಯಿಸುತ್ತಾರೆ. ಪಾಪ! ಕನ್ಯೆಯ ತಂದೆಯು ತನ್ನ ಜೀವಮಾನದ ಸಂಪಾದನೆಯೆಲ್ಲವನ್ನು ಒಟ್ಟುಗೂಡಿಸಿದರೆ ಒಬ್ಬಳ ವಿವಾಹವು ನೆರವೇರುವಂತಿಲ್ಲ. ಹೀಗಿರುವಲ್ಲಿ ಐದಾರು ಮಂದಿ ಹೆಮ್ಮಕ್ಕಳು ಇದ್ದವರ ಗತಿ ಏನಾದೀತೆಂಬುದನ್ನು ವಾಚಕರೇ ಯೋಚಿಸಿರಿ. ಇಂತಹ ವಿಪತ್ತಿನಿಂದ ಮಾತಾಪಿತೃಗಳು ತಪ್ಪಬೇಕಾ ದರೆ ವರದಕ್ಷಿಣೆ ಎಂಬ ರಾಕ್ಷಸೀಯ ಪದ್ಧತಿಯು ನಾಶವಾಗಬೇಕು. ಇದರ ನಿವಾರಣೆಯಾದರೆ ಒಂದುವೇಳೆ ಹಿಂದೂಧರ್ಮವೇ ನಾಶ ವಾದೀತೆಂದು ಯಾರಾದರೂ ಭಾವಿಸುವುದಾದರೆ ಮುಂದಕ್ಕೆ ಹಿಂದೂ ಜಾತಿಯಲ್ಲಿ ಕನ್ಯೆಯರೇ ಹುಟ್ಟದಂತೆ ವಿಧಾತನು ಸೃಷ್ಟಿ ಕ್ರಮವನ್ನು ಬದಲಾಯಿಸಬೇಕು. ನಮಗೆ ಬೇಕಾದರೆ ಅಮೇರಿಕ, ಇಂಗ್ಲಾಂಡು ಮುಂತಾದ ಕಡೆಗಳಲ್ಲಿ ಅಲೆದಾಡುತ್ತಿರುವ ಶ್ವೇತಾಂಗಿನಿಯರನ್ನು ಕೈಹಿಡಿಯಬಹುದು ಆಗ ಧರ್ಮಕ್ಕೆ ಲೋಪ ಬರಲಿಕ್ಕಿಲ್ಲ. ಇದಕ್ಕಿಂತ ಬೇರೆ ಉಪಾಯವಿದ್ದರೆ ವಾಚಕರೇ ನಿರ್ಣಯಿಸಿಕೊಳ್ಳಲಿ.

ಈ ವರದಕ್ಷಿಣೆಯ ಅಭಿಲಾಷೆಯಿಂದ ಬಂಗಾಲಪ್ರಾಂತ್ಯದ ಬ್ರಾಹ್ಮಣರಲ್ಲಿ ಸಹ ಒಬ್ಬೊಬ್ಬರು ಹತ್ತಿಪ್ಪತ್ತು ಮಂದಿ ಕನ್ಯೆಯರನ್ನು ವರಿಸಿಕೊಳ್ಳುತ್ತಾರೆ. ಎಪ್ಪತ್ತು ವರ್ಷದ ವೃದ್ಧ ತರುಣರ ವಿವಾಹ ವಂತೂ ನಮ್ಮ ಊರುಗಳಲ್ಲಿಯೇ ಆಗುತ್ತಿವೆ. ಯಾರು ಬಹಳ ಬಡವರಾಗಿರುತ್ತಾರೋ ಅಂತಹವರಕನ್ಯೆಯರಿಗೆ ಈ ಜನ್ಮದಲ್ಲಿ ವಿವಾಹವೇ ಇಲ್ಲದಂತಾಗಿ ಅವರು ಇಡೀ ಜೀವಮಾನವನ್ನು ಘೋರ ವಾದ ದುಃಖದಲ್ಲಿ ಕಳೆಯಬೇಕಾಗುತ್ತದೆ. "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂಬ ಒಣತತ್ವದ ಬೆದರಿಕೆಯಿಂದ ತಂದೆತಾಯಿಗಳು ತಮ್ಮ ಕನ್ಯೆಯರಿಗೆ ಶಿಕ್ಷಣವನ್ನು ಕೂಡಾ ಕೊಡುವುದಿಲ್ಲ. ಈ ವಿಧದ

ಸ್ತ್ರೀಶಿಕ್ಷಣದ ಕೊರತೆಯಿಂದಲೂ ಹಿಂದೂಸಮಾಜವು ಹೀನಾವಸ್ಥೆಗೆ ಬಿದ್ದಿರುವುದು. ಆದುದರಿಂದ ಕನ್ಯೆಯರಿಗೆ ಎಲ್ಲಾದಕ್ಕಿಂತ ಮೊದಲು ಉತ್ತಮರೀತಿಯಲ್ಲಿ ಶಿಕ್ಷಣವನ್ನು ಕೊಡಬೇಕು. (ಸ್ತ್ರೀ ಶಿಕ್ಷಣದ ವಿವರವನ್ನು ನಮ್ಮ ಗ್ರಂಥಮಾಲೆಯ ತೃತೀಯ ಪುಷ್ಪ "ಮಾತಾಪುತ್ರಿ" ಎಂಬ ಪುಸ್ತಕದಲ್ಲಿ ವಿವರಿಸಿದ್ದೇವೆ. ಸಂಪಾದಕ.)

ವರದಕ್ಷಿಣೆಯನ್ನು ಪೂರೈಸಲಿಕ್ಕಾಗಿ ಕನ್ಯೆಯ ಮಾತಾಪಿತರು ತಮ್ಮ ಸರ್ವಸ್ವವನ್ನೂ ಕಳಕೊಂಡ ಎಷ್ಟೋ ಉದಾಹರಣೆಗಳು ನಮ್ಮ ಪ್ರಾಂತ್ಯದಲ್ಲಿಯೂ ಇವೆ. ವರದಕ್ಷಿಣೆಯು ಪೂರ್ತಿ ದೊರೆಯ ದಿದ್ದಲ್ಲಿ ವರಮಹಾಶಯರುಗಳು ಪತ್ನಿಯನ್ನು ತ್ಯಜಿಸುವುದೂ ಉಂಟು. ಇನ್ನು ಕೆಲವರು ಪತ್ನಿಗೆ ಬಹುವಿಧದ ಯಾತನೆಗಳನ್ನು ಕೊಡುತ್ತಾ ಅವಳ ತಂದೆಯಿಂದ ತನಗೆ ಸಲ್ಲತಕ್ಕ ವರದಕ್ಷಿಣೆಗಾಗಿ ಅವಳನ್ನು ಧಿಕ್ಕರಿಸುತ್ತಿರುವರು. ಇನ್ನೊಂದು ಅಮಾನುಷ ಕೃತ್ಯವೆಂದರೆ ಮದುವೆ ಮಾಡಿಕೊಡುವಾಗ ಬೇರೇನೂ ದಾರಿಕಾಣದೆ ಕೇಳಿದಷ್ಟು ವರದಕ್ಷಿಣೆಯನ್ನು ಕೊಡುತ್ತಾರೆ. ವಿವಾಹಕಾಲದಲ್ಲಿ ತನ್ನ ಶಕ್ತಿ ಗಿಂತಲೂ ಹೆಚ್ಚಾದ ಆಡಂಬರವನ್ನು ತೋರಿಸಿ ದುಡ್ಡನ್ನು ಹಾಳು ಗೆಡಹುತ್ತಾರೆ. ಕಡೆಗೆ ಸಾಲದ ಹೊರೆಯಲ್ಲಿ ಬಿದ್ದು ಮೆಲ್ಲನೆ ತನ್ನ ಮಗಳ ಸರ್ವ ಸ್ವತ್ತುಗಳನ್ನೇ ಉಪಾಯದಿಂದ ಪಡೆದು ಮಗಳನ್ನೇ ದುಃಖಕ್ಕೀಡುಮಾಡಿಬಿಡುತ್ತಾರೆ. ಇದರಿಂದಾಗಿ ಆಕೆಯು ಒಂದೊಂದು ವೇಳೆ ಪತಿಯ ತಿರಸ್ಕಾರಕ್ಕೂ ಪಾತ್ರಳಾಗಬೇಕಾಗುತ್ತದೆ. ಕಡೆಗೆ ಆಕೆಯ ಜೀವನವು "ಇತ್ತ ನಾಡಿಗಿಲ್ಲ, ಅತ್ತ ಕಾಡಿಗಿಲ್ಲ"ವೆಂಬಂತಾಗು ತ್ತದೆ. ಈ ಕುರಿತು ನಮಗೆ ಅನೇಕ ಪ್ರತ್ಯಕ್ಷ ದೃಷ್ಟಾಂತಗಳು ದೊರೆಯುವವು. ಇದೆಲ್ಲವೂ ಈ ಒಂದು ವರದಕ್ಷಿಣೆಯ ಉಪದ್ರವ ದಿಂದಲೇ ಆಗುತ್ತದೆ. ಈ ತರದ ಅತ್ಯಾಚಾರಗಳಿಂದ ತಪ್ಪಿಸಿಕೊಳ್ಳ ಲಿಕ್ಕೆ ಬೇರೆ ದಾರಿ ಕಾಣದೆ ಬಂಗಾಲದಲ್ಲಿ "ಸ್ನೇಹಲತಾ" ಎಂಬ ತರುಣಿಯು ತನ್ನ ದೇಹಕ್ಕೆ ಚಿಮ್ಣಿಎಣ್ಣೆ ಹೊಯಿದುಕೊಂಡು ಬೆಂಕಿ

ಹತ್ತಿಸಿ ಆತ್ಮಹತ್ಯೆಮಾಡಿ ಮಾತಾಪಿತರನ್ನು ವರದಕ್ಷಿಣೆಯ ಬಂಧನ ದಿಂದ ಮುಕ್ತಗೊಳಿಸಿದುದು ಜನಜನಿತವಾದ ವಿಷಯ ಇಂತಹ ದುಃಖದಾಯಕವಾದ ಘಟನೆಗಳು ಹಿಂದುಸ್ಥಾನದಲ್ಲಿ ಅಲ್ಲಲ್ಲಿ ಆಗಾಗ ನಡಿಯುತ್ತಿವೆ. "ಅಹಿಂಸಾ ಪರಮೋ ಧರ್ಮ"ವೆಂಬ ಹಾಡನ್ನು ಹಾಡುತ್ತಿರುವ ನಮ್ಮ ಹಿಂದೂ ಜನರು ಸಮಾಜದ ಹೆಬ್ಬಾಗಲಂತಿರುವ ಸ್ತ್ರೀಸಮಾಜವನ್ನು ಈ ರೀತಿ ಕೊಲ್ಲುವುದೆಂದರೆ ಧರ್ಮವೆಲ್ಲುಳಿಯಿತು?

ವರಶುಲ್ಕವನ್ನು ನಾವು ಕೇವಲ ಕನ್ಯೆಯರ ಸುಖಕ್ಕಾಗಿಯೇ ಪಡಕೊಳ್ಳುತ್ತೇವೆಂದು ಕೆಲವರು ಹೇಳುವುದುಂಟು. ಇದರಿಂದ ನಮ್ಮವರಲ್ಲಿರುವ ವಿಚಾರಶೂನ್ಯತೆಯು ಮತ್ತಷ್ಟು ವ್ಯಕ್ತವಾಗುತ್ತದೆ. ಹೇಗೆಂದರೆ- ಕನ್ಯೆಗೆ ಬೇಕಾದ ವ್ಯವಸ್ಥೆಯನ್ನೂ ಈಶ್ವರೀಯ ನಿಯಮ ವನ್ನೂ ಪಾಲಿಸಲಿಕ್ಕಾಗಿಯೇ ಒಬ್ಬನು ಪತಿಯಾಗುತ್ತಾನೆ. ಪತಿಯಾದ ಮೇಲೂ ಅವಳ ಆರೈಕೆಗೆ ಆಕೆಯ ತಂದೆಯೇ ಹಣಕೊಡಬೇಕೆಂದಿದ್ದರೆ ಆಕೆಯನ್ನು ವರಿಸಿದ ಪತಿಯಿಂದಾಗತಕ್ಕ ಕೆಲಸವೇನು? ಸಂತಾನೋ ತ್ಪತ್ತಿ ಮಾತ್ರವೋ? ಅಥವಾ ಭೋಗವಿಲಾಸದ ನಾಟಕವೋ? ಛೀ! ಇಂತಹ ಸಾಮಾಜಿಕ ಆಚಾರಕ್ಕೆ ಧಿಕ್ಕಾರವಿರಲಿ. ವಿವಾಹದ ನಂತರವೂ ಕನ್ಯೆಯು ತಂದೆಯ ಹಣದಿಂದಲೇ ಪೋಷಿಸಲ್ಪಡಬೇಕಾದರೆ ಆಕೆಗೆ ವಿವಾಹದ ಅಗತ್ಯವೇನು? ತಂದೆಯು ಆಕೆಯನ್ನು ತನ್ನ ಮನೆ ಯಲ್ಲಿಯೇ ಸಾಕಲಾರನೇ? ಆದುದರಿಂದ ಇಂತಹ ಹೇಯ ಕೃತ್ಯವನ್ನು ನಾವು ಇನ್ನಾದರೂ ತ್ಯಜಿಸಲೇ ಬೇಕು. ಶಿಕ್ಷಿತ ಜನರು ಕೂಡಾ ವರದಕ್ಷಿಣೆಯ ಮೂಲಕ ತಮ್ಮನ್ನು ತಾವು ಮಾರಿಕೊಂಡು, ಹುಡುಗಿ ಯರ ಮುಖಾಂತರ ಹಣ ಸಂಪಾದಿಸಿಕೊಳ್ಳುತ್ತಾರೆ. ಆಹಾ! ನಮ್ಮ ಗೌರವವೇ? ಪುತ್ರರನ್ನು ಕನ್ಯೆಯ ತಂದೆತಾಯಿಗಳಿಗೆ ಮಾರುವುದು ಧರ್ಮದ ಗೌರವವೇ? ಪ್ರಚಲಿತ ಕಾಲದ "Gentlemen" ಸಭ್ಯಜನ ಗಳಲ್ಲಿ ಇರುವ ಇನ್ನೊಂದು ಕೆಟ್ಟಪದ್ಧತಿ ಏನೆಂದರೆ- ಅವರು ತಮ್ಮ ವಿವಾಹದ ಪ್ರಸ್ತಾಪ ಬಂದಾಗ ವಧುವಿನ ತಂದೆಯೊಡನೆ ಈ ರೀತಿ ಹೇಳುತ್ತಾರೆ- "ನೀವು ನನ್ನನ್ನು ಲಂಡನಿಗೆ ರವಾನಿಸಿ ಐ. ಸಿ. ಎಸ್.

ಪಾಸುಮಾಡಿಸುವುದಾದರೆ ಮಾತ್ರ ನಿಮ್ಮ ಮಗಳನ್ನು ವರಿಸುವೆನು.'' ವಾಚಕರೇ! ನೋಡಿರಿ; ಒಂದು ಕನ್ಯೆಯ ಸೇವನದಿಂದಲಾದರೂ ಇಂಗ್ಲೆಂಡಿನ ಬೀದಿಯಲ್ಲಿ ಅಲೆದಾಡುವ ಲವಲವಿಕೆಯು ಈಗಿನ ನಮ್ಮವರಲ್ಲಿದೆ. ಈ ಪ್ರಕಾರ ಒಬ್ಬನನ್ನು ವಿಲಾಯಿತಿಗೆ ಕಳುಹಿಸಿ ಅವನಿಗೆ ಬೇಕಾದ ಶಿಕ್ಷಣವನ್ನು ಕೊಡಬೇಕಾದರೆ 20,000 ರೂಪಾಯಿ ಪ್ರತ್ಯೇಕ ಕೊಟ್ಟು ವಿವಾಹದ ಮಿಕ್ಕ ವೆಚ್ಚಕ್ಕೆ ಮನೆಮಾರು ಮಾರಬೇಕಾಗುತ್ತದೆ. ಇದಲ್ಲವೆ ಹಿಂದೂಸಮಾಜದ ಈಗಿನ ಆದರ್ಶತೆ! ಈ ವಿಧದ ಸಂಕಷ್ಟಗಳನ್ನು ಸಹಿಸಲಾರದ ಮಾತಾಪಿತರು ಎಷ್ಟೋ ಮಂದಿ ಆತ್ಮಹತ್ಯೆ ಮಾಡಿಕೊಂಡಿರುತ್ತಾರೆ. ಇನ್ನೊಂದಾಶ್ಚರ್ಯವೇನೆಂದರೆ– ಯಾವಾತನು ತನ್ನ ಕನ್ಯೆಯ ಸಲುವಾಗಿ ದುಃಖಪಡುತ್ತಾನೋ, ಅವನೇ ತನ್ನ ಪುತ್ರರ ಮುಖಾಂತರ ಅನ್ಯರಿಗೆ ದುಃಖ ಕೊಡುತ್ತಾನೆ. ಇದೂ ಒಂದು ತಮಾಷೆ. ಈ ವರದಕ್ಷಿಣೆಯ ಕೆಟ್ಟ ಕ್ರಮವನ್ನು ನಿಲ್ಲಿಸಿರೆಂದು ನಾವು ಯಾರಿಗಾದರೂ ಹೇಳಿದರೆ–''ನಾನು ನನ್ನ ಕನ್ಯೆಯ ವಿವಾಹದಲ್ಲಿ ಕೊಟ್ಟಿರುವೆನು. ಆದುದರಿಂದ ಮಗನ ಬಗ್ಗೆ ಏಕೆ ತೆಗೆದುಕೊಳ್ಳಬಾರದು?'' ಎಂದುತ್ತರ ಕೊಡುತ್ತಾರೆ. ಈ ರೀತಿ ಪ್ರತಿಯೊಬ್ಬರೂ ಮುಯ್ಯಿಗೆ ಮುಯ್ಯಿ ತೀರಿಸುತ್ತಾ ಬಂದರೆ ಈ ಘೋರ ಪೈಶಾಚಿಕ ಪದ್ಧತಿಯು ನಾಶವಾಗುವ ಬಗೆ ಹೇಗೆ? ಕೆಲವು ಸಮಾಜ ಸುಧಾರಕರು ಈ ಕುರಿತು ಉದ್ದುದ್ದ ಭಾಷಣಗಳನ್ನು ದೊಡ್ಡ ದೊಡ್ಡ ಸಭೆಗಳಲ್ಲಿ ಕೊಡುತ್ತಾರೆ. ಆದರೆ, ತಮ್ಮ ಮನೆಯಲ್ಲಾಗುವ ವಿವಾಹದಲ್ಲಿ ಲೆಕ್ಕವಿಲ್ಲದಂತೆ ವರದಕ್ಷಿಣೆ ಪಡೆಯುತ್ತಾರೆ. ಈ ಕುರಿತು ಬುದ್ಧಿವಂತರು ಯಾರಾದರೂ ಪ್ರಶ್ನೆಮಾಡಿದರೆ! "ಏನು ಮಾಡೋಣ, ನಮ್ಮ ಮಾವ ಕೇಳುವುದಿಲ್ಲ, ತಾಯಿ ಬೇಜಾರು ಪಡುತ್ತಾಳೆ, ನನ್ನ ಆಕೆ ಸಮ್ಮತಿಸುವುದಿಲ್ಲ ಇತ್ಯಾದಿ ಹಲವು ನೆವನಗಳನ್ನು ಹೇಳುತ್ತಾರೆ. ಇಂತಹ ಸುಧಾರಕ ವೃಂದದಿಂದಲೇ ಹಿಂದೂ ಸಮಾಜದ ಉನ್ನತಿಯಾಗಬೇಕಲ್ಲವೇ? ನಿಜವಾಗಿಯೂ ವಿವಾಹವೆಂಬುದು ಒಂದು ಪವಿತ್ರ ಸಂಬಂಧವಾಗಿರುತ್ತದೆ. ಇದು ಒಳ್ಳೆಯ

ರೀತಿಯಲ್ಲಿದ್ದರೆ ಮಾತ್ರ ವಿವಾಹದ ಆಂತರಿಕ ಮತ್ತು ಬಾಹ್ಯ ಪ್ರಯೋಜನಗಳು ಸರಿಯಾಗಿ ನೆರವೇರುವವು. ಆದುದರಿಂದ ಶಾಸ್ತ್ರವಿರುದ್ಧವಾದ ವರದಕ್ಷಿಣೆಯ ಪದ್ಧತಿಯನ್ನು ಸಮೂಲವಾಗಿ ನಾಶಮಾಡಬೇಕು. ಈ ಕುರಿತು ಶಾಸ್ತ್ರವು ಏನು ಬೋಧಿಸುತ್ತದೆಂಬುದನ್ನು ಸ್ವಲ್ಪಮಟ್ಟಿಗಾದರೂ ಗಮನಿಸಿರಿ.

ಶುಲ್ಕೇನ ಯೇ ಪ್ರವಚ್ಛಂತಿ ಸ್ವಸುತಾಂ ಲೋಭಮೋಹಿತಾಃ ।
ಆತ್ಮವಿಕ್ರಯಿಣಃ ಪಾಪಾ ಮಹಾ ಕಿಲ್ವಿಷಕಾರಕಾಃ ॥
ಪತಂತಿ ನರಕೇ ಘೋರೇ ಘ್ನಂತಿ ಚ ಸಪ್ತಮಂ ಕುಲಂ ॥

(ಭೌಧಾಯನ ಧರ್ಮಶಾಸ್ತ್ರ.)

ಯಾರು ತಮ್ಮ ಮಕ್ಕಳನ್ನು ಲೋಭದಿಂದ ಹಣತಕ್ಕೊಂಡು ಇನ್ನೊಬ್ಬರಿಗೆ ಕೊಡುತ್ತಾರೋ ಅಂತಹವರು ಆತ್ಮವನ್ನು ಮಾರುವಂತಹ ಪಾಪಿಗಳೂ, ತಮ್ಮ ಕನ್ಯೆಯರನ್ನು ವೇಶ್ಯೆಯರನ್ನಾಗಿ ಮಾಡಿ ವ್ಯಭಿಚಾರಮಾಡಿಸುವವರೂ ಘೋರ ನರಕದಲ್ಲಿ ಬೀಳುತ್ತಾರೆ. ಮತ್ತು ತಮ್ಮ ಕುಲದಲ್ಲಿ ಏಳು ವಂಶಗಳಿಗೆ ಕಲಂಕವನ್ನು ತರುತ್ತಾರೆ.

ಈ ಪ್ರಮಾಣದಿಂದ ವರದಕ್ಷಿಣೆ ಅಥವಾ ಕನ್ಯಾಶುಲ್ಕವೆಂಬುದು ಎಷ್ಟು ಅನ್ಯಾಯ ಮತ್ತು ಅಧರ್ಮಯುಕ್ತವಾಗಿರುತ್ತದೆಂಬುದನ್ನು ತಿಳಿಯಬಹುದು. ಆದುದರಿಂದ ಪ್ರಚಲಿತಕಾಲದ ವಿವಾಹ ಪದ್ಧತಿಯಲ್ಲಿರುವ ಎಲ್ಲಾ ಕೆಟ್ಟ ರೂಢಿಗಳನ್ನು ನಾಶಮಾಡಿ ತರುಣ ತರುಣಿಯರ ಭವಿಷ್ಯ ಜೀವನವನ್ನು ಸುಖಮಯವನ್ನಾಗಿ ಮಾಡುವುದಲ್ಲದೆ ಸಮಾಜವನ್ನು ಅನೇಕ ಗಂಡಾಂತರದಿಂದ ತಪ್ಪಿಸುವುದು ಸಮಾಜ ಹಿತೈಷಿಗಳಾದ ಪ್ರತಿಯೊಬ್ಬರ ಕರ್ತವ್ಯವಾಗಿರುತ್ತದೆ. ಇನ್ನು ಸ್ತ್ರೀ ಪುರುಷರ ಅಧಿಕಾರ ಮತ್ತು ಕರ್ತವ್ಯದ ಕುರಿತು ಮುಂದಿನ ಅಧ್ಯಾಯದಲ್ಲಿ ಸ್ವಲ್ಪ ವಿವರಿಸುವೆವು.

# ೩. ಸ್ತ್ರೀಪುರುಷರ ಅಧಿಕಾರ.

ವಿವಾಹದ ಉಪರ್ಯುಕ್ತ ಪ್ರಯೋಜನಗಳನ್ನು ಲಕ್ಷ್ಯದಲ್ಲಿಡುತ್ತಾ ಸ್ತ್ರೀಪುರುಷರಲ್ಲಿ ಪರಸ್ಪರ ಅಧಿಕಾರ ಮತ್ತು ಕರ್ತವ್ಯದಲ್ಲಿ ವ್ಯತ್ಯಾಸಗಳಿವೆಯೋ ಇಲ್ಲವೋ ಎಂಬ ಪ್ರಶ್ನೆಯು ವಿಚಾರಣೀಯವಾಗಿದೆ. ಸ್ತ್ರೀಪುರುಷರ ಶಾರೀರಕ ಆಕೃತಿ ಮತ್ತು ಆಂತರಿಕ ಸ್ವಭಾವದಲ್ಲಿ ಬಹು ವಿಧದ ಭೇದಗಳೂ ಸಮಾನತೆಗಳೂ ಇದ್ದೇ ಇವೆ. ಆದರೆ ಸರಿಯಾಗಿ ತಿಳದುನೋಡುವಲ್ಲಿ ಭೇದಗಳಿಗಿಂತ ಸಮಾನತೆಯೇ ಅಧಿಕವಾಗಿ ಕಂಡುಬರುತ್ತದೆ. ಅಲ್ಪಸ್ವಲ್ಪವಾಗಿ ಕಂಡುಬರುವ ಭೇದಗಳು ಸ್ವಭಾವಜನ್ಯವಾಗಿರುತ್ತವೆ. ಇಂಥಾ ಭೇದಗಳಿಲ್ಲದಿರುತ್ತಿದ್ದರೆ ಸ್ತ್ರೀಪುರುಷರೆಂಬ ವ್ಯಕ್ತಿಭಿನ್ನತ್ವವು ತಿಳದುಬರಲಾರದು. ಆದರೆ ಎಂದಿನವರೆಗೆ ಇದರ ಸಂಬಂಧವು ಕರ್ತವ್ಯ ಮತ್ತು ಅಧಿಕಾರದಿಂದ ಕೂಡಿರುತ್ತದೋ ಅಂದಿನ ವರೆಗೆ ಇದರ ಸಮಾನತೆಯನ್ನು ನಿಃಸಂಕೋಚವಾಗಿ ಸ್ವೀಕಾರಮಾಡಿಕೊಳ್ಳಬೇಕಾಗುತ್ತದೆ. ಮಾವಿನಗಿಡವೂ ಹಲಸಿನಗಿಡವೂ ಆಕೃತಿಯಲ್ಲಿ ಬೇರೆಬೇರೆ ರೂಪದಲ್ಲಿದ್ದರೂ ಇವುಗಳ ಪಾಲನೆಯಲ್ಲಿ ಹೆಚ್ಚಿನ ವ್ಯತ್ಯಾಸವು ಕಂಡುಬರುವುದಿಲ್ಲ. ಗಾಳಿ, ನೀರು, ಗೊಬ್ಬರ, ಪ್ರಕಾಶ ಇತ್ಯಾದಿಗಳ ಅವಶ್ಯಕತೆಯಲ್ಲಿ ಏನೂ ವ್ಯತ್ಯಾಸವಿಲ್ಲ. ಸ್ತ್ರೀಪುರುಷರಲ್ಲಿಯೂ ಇದೇ ತರದ ಸಮಾನತೆಯು ಕಂಡುಬರುತ್ತದೆ. ಊಟ, ಬಟ್ಟೆಬರೆಗಳೆಲ್ಲವೂ ಇಬ್ಬರಿಗೂ ಸರಿಯಾಗಿ ಬೇಕಾಗಿವೆ. ಪುರುಷರಿಗೆ ಧೋತ್ರವಾದರೆ ಸ್ತ್ರೀಯರಿಗೆ ಸೀರೆ ಇಷ್ಟೇ ವ್ಯತ್ಯಾಸ. ಸರ್ವಸಾಧಾರಣವಾಗಿ ಹಿಂದುಸ್ಥಾನ ಮತ್ತು ಇತರ ಒಂದೆರಡು ರಾಷ್ಟ್ರಗಳಲ್ಲಿ "ಸ್ತ್ರೀಯರಿಗೆ ಪುರುಷರಂತೆ ವಾಯುಸೇವನೆಯ ಅಗತ್ಯವಿಲ್ಲ" ಎಂಬ ಒಂದು ಅಭಿಪ್ರಾಯವು ಹಬ್ಬಿಕೊಂಡಿದೆ. ಸೂರ್ಯಪ್ರಕಾಶದ ಹೊರತು ನಮ್ಮ ಜೀವನವು ಅರೆಕ್ಷಣ

ವಾದರೂ ನಡೆಯಲಾರದೆಂಬುದನ್ನು ಎಲ್ಲರೂ ತಿಳಿದಿರುವರು. ಈ ಪ್ರಕಾಶವು ಕಣ್ಣುಗಳಿಗೆ ಮಾತ್ರವಲ್ಲದೆ ಇಡೀ ಶರೀರಕ್ಕೆ ಅತ್ಯುಪಯುಕ್ತವಾದ ವಸ್ತುವಾಗಿದೆ. ಆದರೆ ಕೆಲವು ಮಹಾನುಭಾವರು ಸ್ತ್ರೀಯರಿಗೆ ಸೂರ್ಯಪ್ರಕಾಶದ ಅಗತ್ಯವೇ ಇಲ್ಲವೆಂಬದಾಗಿ ಮಹಿಳಾವರ್ಗಕ್ಕೇನೇ "ಅಸೂರ್ಯ ಪಶ್ಯಾಃ" ಎಂಬ ಉಪಾಧಿಯನ್ನು ಕೊಟ್ಟಿರುವರು. ಇದು ಹೊರತು ಸ್ತ್ರೀಯರು ತಮಗೆ ಪರಮಾತ್ಮನು ಕೊಟ್ಟಿರುವ ಪಂಚ ಜ್ಞಾನೇಂದ್ರಿಯಗಳಿಂದಲೂ ವಂಚಿತರಾಗಿರುವಂತೆ ಅವರನ್ನು ಮುಸುಕಿನೊಳಗೆ (ಪರದೆಯಲ್ಲಿ) ಇಟ್ಟಿರುವರು. ಈ ತರದ ಘೋಷಾ ಪದ್ಧತಿಯಿಂದಲೇ ಸ್ತ್ರೀಯರ ಮೃತ್ಯು ಸಂಖ್ಯೆಯು ಪುರುಷರಿಗಿಂತ ಹೆಚ್ಚಾಗಿಯದೆ. ಬಂಗಾಳದಲ್ಲಿ ೧೧ ವರುಷಗಳಿಂದ ೧೩ ವರುಷಗಳೊಳಗೂ, ಮುಂಬಯಿಯಲ್ಲಿ ೧೮ರಿಂದ ೩೫ರ ಒಳಗೂ, ಬರ್ಮದಲ್ಲಿ ೨೪ರಿಂದ ೪೪ರ ಒಳಗೂ, ಮದ್ರಾಸಿನಲ್ಲಿ ೭ರಿಂದ ೩೦ರ ಒಳಗೂ, ಸಂಯುಕ್ತಪ್ರಾಂತ್ಯದಲ್ಲಿ ೯ರಿಂದ ೧೭ರ ಒಳಗೂ ಇರುವ ಪ್ರಾಯದ ಸ್ತ್ರೀಯರೇ ಹೆಚ್ಚಾಗಿ ಸತ್ತಿರುವರು. 'Census Report of India, 1911, Vol I Part I page 166 ೧೯೧೮ರಲ್ಲಿ ಬಂದ ಒಂದು ರೋಗದಲ್ಲಿ ಸ್ತ್ರೀಯರೇ ಹೆಚ್ಚಾಗಿ ಮೃತಪಟ್ಟಿರುವರು. ಕಾರಣವೇನೆಂದರೆ— ಅವರ ಶರೀರಕ್ಕೆ ಬೇಕಾಗುವಷ್ಟು ವಾಯು ಮತ್ತು ಪ್ರಕಾಶವು ದೊರೆಯದೆ ಅವರ ದೇಹವು ನಿರ್ಬಲವಾಗಿ ಅವರು ಆ ರೋಗವನ್ನು ಸಹಿಸಲಾರದೆ ಹೋದರು. ಯಾವಾಕೆ ಹೆಚ್ಚಾಗಿ ಮನೆಯೊಳಗೆ ಇರುತ್ತಾಳೋ ಅವಳೇ ಬಹಳ ಸಭ್ಯಳೆಂಬ ಒಂದು ಅಂಧವಿಶ್ವಾಸವು ಹಿಂದೂಸಮಾಜದ ಎಲ್ಲಾ ಜಾತಿಗಳಲ್ಲಿಯೂ ಹೆಚ್ಚಾಗಿ ಹಬ್ಬಿಕೊಂಡಿದೆ. ಇದರಿಂದಲೇ ಭಾರತೀಯ ಮಹಿಳಾ ಸಮಾಜದ ನೈತಿಕ ಮತ್ತು ಮಾನಸಿಕ ಬಲವು ನಾಶವಾಗುತ್ತಾ ಬಂದಿದೆ. ಈ ಪ್ರಕಾರ ಸ್ತ್ರೀಯರ ಶಾರೀರಕ ಮಾನಸಿಕ ಮತ್ತು ಆತ್ಮಿಕ ಬೆಳವಣಿಗೆಯನ್ನು ತಡೆಗಟ್ಟುವಂಥಾ ನಿಯಮಕ್ಕೆ ಯಾವ ಆಧಾರವೂ ಕಂಡುಬರುವುದಿಲ್ಲ.

ಯಾವ ರೀತಿಯಲ್ಲಿ ಸ್ತ್ರೀಪುರುಷರ ಶಾರೀರಿಕ ಅವಶ್ಯಕತೆಗಳಲ್ಲಿ ಬಹುಮಟ್ಟಿಗೆ ಸಮಾನತೆ ಇವೆಯೋ ಅದೇ ಪ್ರಕಾರ ಮಾನಸಿಕ ಮತ್ತು ಆತ್ಮೋನ್ನತಿಯಲ್ಲಿಯೂ ಬುದ್ಧಿ ಮತ್ತು ಹೃದಯವಿಕಾಸಗಳೆಂಬ ಎರಡು ವಿಧದ ಸಮಾನತೆಗಳಿವೆ. ಬುದ್ಧಿಯ ವಿಕಾಸಕ್ಕೆ ವಿದ್ಯೆಯೂ, ಹೃದಯವಿಕಾಸಕ್ಕೆ ಪರಿಶುದ್ಧ ಆಚರಣೆಯೂ ಮುಖ್ಯ ಸಾಧನಗಳಾಗಿವೆ. ವಿದ್ಯೆಯ ಹೊರತು ಬುದ್ಧಿಯು ವಿಕಸಿತವಾಗಲಾರದು. ಹೀಗಾಗದಿದ್ದಲ್ಲಿ ಸ್ತ್ರೀಯರು ಅಜ್ಞಾನಿಗಳಾಗಿ ಪಶುಸಮಾನರಾಗುತ್ತಾರೆ. ಜ್ಞಾನದ ಅಭಾವದಿಂದ ಹೃದಯವಿಕಾಸತೆಯು ಉನ್ನತಿಯನ್ನೈದಲಾರದು. ವಿದ್ಯೆಯ ಪ್ರಭಾವದಿಂದ ಸದಾಚಾರ ಮತ್ತು ಕರ್ತವ್ಯ ಕರ್ಮದ ಘನತರವಾದ ಸಂಬಂಧವೂ ಪರಸ್ಪರವಿದ್ದಲ್ಲಿ ಮಾತ್ರ ಹೃದಯವು ವಿಕಸಿತವಾಗುತ್ತದೆ. ಸದಾಚಾರ ವ್ಯವಹಾರಿಕವಾಗಿಯೂ ವಿದ್ಯೆಯು ಕಾಲ್ಪನಿಕವಾಗಿಯೂ ಇರುತ್ತದೆ. (ಮನುಷ್ಯನ ಬುದ್ಧಿಯ ಸಂಘರ್ಷಣೆಯಿಂದ ಯಾವುದಾದರೊಂದು ವಿಶಿಷ್ಟ ತತ್ವವನ್ನು ಕಂಡುಹಿಡಿಯಲಾಗುತ್ತದೆ. ಆದುದರಿಂದಲೇ ವಿದ್ಯೆ ಕಾಲ್ಪನಿಕವಾಗಿರುತ್ತದೆಂಬುದಾಗಿ ತಿಸ್ಸಲಾಗುತ್ತದೆ). ವ್ಯವಹಾರಿಕ ಮತ್ತು ಕಾಲ್ಪನಿಕ ಉನ್ನತಿಯು ಸಮಕಾಲೀನವಾಗಿರುತ್ತದೆ. ಸ್ವಪ್ರಯತ್ನದಿಂದ ಕಲ್ಪಿಸಿಕೊಂಡ ವಿದ್ಯೆಯನ್ನು ವ್ಯವಹಾರದಲ್ಲಿ ತಾರದಿದ್ದರೆ ಆ ಮನುಷ್ಯನಲ್ಲಿದ್ದ ವ್ಯವಹಾರ ಜ್ಞಾನವೂ ವಿದ್ಯೆಯೂ ಒಂದೇ ಸಮಯದಲ್ಲಿ ನಷ್ಟವಾಗುವುದು. (ಸ್ತ್ರೀಯರಲ್ಲಿ ಸದಾಚಾರದ ಅವಶ್ಯಕತೆಯನ್ನು ಮಾತ್ರ ಇಚ್ಛಿಸಿ ಅವರನ್ನು ವಿದ್ಯೆಯಿಂದ ಯಾರು ವಂಚಿಸಿಡುತ್ತಾರೋ ಅಂಥವರನ್ನು ಚಂದ್ರಕಾಂತ ಶಿಲೆಯಿಂದ ಮಳಲ ಮೇಲೆ ಅರಮನೆಯನ್ನು ಕಟ್ಟುವಂಥಾ ಮೂರ್ಖರೆನ್ನಬೇಕು. ಒಂದು ಶರೀರದ ಎಲ್ಲಾ ಭಾಗಗಳೂ ಬಲಿಷ್ಠವಾಗಿದ್ದು ಒಂದು ಭಾಗವು ನಿರ್ಬಲವಾಗಿದ್ದರೆ ಅದು ರೋಗದಿಂದ ಪೀಡಿತವಾಗಿದೆ ಎಂದು ಹೇಳುವಂತೆ ಹೃದಯ ಬುದ್ಧಿ ಅಥವಾ ಶರೀರ ಇವುಗಳಲ್ಲಿ ಯಾವುದಾದರೂ ಒಂದು ಮಾತ್ರ ಬಲವಾಗಿ ಬೆಳೆದು ಮಿಕ್ಕವುಗಳೆಲ್ಲವೂ ಶಕ್ತಿಹೀನವಾಗಿ

ದ್ದಲ್ಲಿ ಅಂಥವನನ್ನು ರೋಗಿಯೆಂದೇ ಕರೆಯಬೇಕಾಗುತ್ತದೆ. ಪ್ರಚಲಿತ ಕಾಲದಲ್ಲಿ ಸ್ತ್ರೀಯರ ಈ ಮೂರು ಅಂಗಗಳೂ ಇದೇ ಪರಿಸ್ಥಿತಿಯಲ್ಲಿವೆ. ದೇಹದಲ್ಲಂತೂ ಬಲವೇ ಇಲ್ಲ. ಬುದ್ಧಿಯು ವಿದ್ಯೆಯ ಅಭಾವದಿಂದ ದಿನೇ ದಿನೇ ತಣ್ಣಗಾಗುತ್ತಾ ಬರುತ್ತಿದೆ. ಹೀಗಿರುವಲ್ಲಿ ಅವರು ಸದಾಚಾರವನ್ನು ಎಲ್ಲಿಂದ ತರುವರು?

ಮಹಿಳೆಯರು ವಿದ್ಯೆಯನ್ನು ಸಂಪಾದಿಸದಿದ್ದರೆ ಸದಾಚಾರವು ಸ್ಥಿರವಾಗಿ ಉಳಿಯುತ್ತದೆಂದು ಅನೇಕರ ಅಭಿಪ್ರಾಯ. ಆದರೆ ಇಂಥವರು ಆಚಾರದ ನಿಜವಾದ ಅರ್ಥವನ್ನು ತಿಳಿದುಕೊಂಡಿಲ್ಲ. ಇವರು ನಂಬಿಕೊಂಡಿರುವಂಥಾ ವಿಧಾನವೇ ನಿಜವಾದ ಆಚಾರವಾಗಿರುವುದಾದರೆ ಕಲ್ಲು, ಮಣ್ಣು, ಮರ ಇತ್ಯಾದಿಗಳು ಎಲ್ಲಕ್ಕಿಂತಲೂ ಸದಾಚಾರಿಗಳಾಗಿವೆಯೆಂದು ಎಲ್ಲರೂ ಒಪ್ಪಬೇಕಾಗುತ್ತದೆ. ಕಾರಣವೇನೆಂದರೆ ಸುಳ್ಳುಹೇಳೋಣ, ಕದ್ದುಕೊಳ್ಳೋಣ ಇತ್ಯಾದಿ ದುರ್ಗುಣ ಮನುಷ್ಯರಲ್ಲಿದ್ದಂತೆ ಇವುಗಳಲ್ಲಿಲ್ಲ. ಪರಮಾತ್ಮನ ಭಕ್ತಿಯೇ ಸದಾಚಾರದ ಮೂಲಾಧಾರವಾಗಿರುತ್ತದೆ. ಇಂಥಾ ದೇವರ ಭಕ್ತಿಯಿಂದಲೂ ಸ್ತ್ರೀಯರು ಸರಿಯಾಗಿ ವಂಚಿಸಲ್ಪಡುತ್ತಿದ್ದಾರೆ. ಈ ಬಗ್ಗೆ ಸ್ವಕಲ್ಪಿತವಾದ ಒಂದು ಪ್ರಮಾಣವನ್ನು ಹಿಂದುಮುಂದರಿಯದ ಜನರ ಮುಂದಿಡುತ್ತಾರೆ. ಅದಾವುದೆಂದರೆ–

**ನವ್ರತ್ತೈರ್ನೋಪವಾ ಸೈಶ್ಚ ಧರ್ಮೇಣ ವಿವಿಧೇನಚ ।**
**ನಾರೀಸ್ವರ್ಗಮವಾಪ್ನೋತಿ ಪ್ರಾಪ್ನೋತಿ ಪತಿಪೂಜನಾತ್ ॥**

ಅರ್ಥಾತ್ "ಪತಿಪೂಜೆಗಿಂತ ಇತರ ವ್ರತಾದಿ ಯಾವ ಕರ್ಮಗಳೂ ಸ್ತ್ರೀಗೆ ಅವಶ್ಯವಿಲ್ಲ". ಪತಿಸೇವೆ ಸ್ತ್ರೀಯರ ಆದ್ಯ ಕರ್ತವ್ಯವೆಂಬುದನ್ನು ನಾವು ಒಪ್ಪುತ್ತೇವೆ. ಪರಂತು ಇದರಿಂದ ಮಿಕ್ಕ ಎಲ್ಲಾ ಕಾರ್ಯಗಳೂ ತಿರಸ್ಕರಣೀಯವೆಂದು ಹೇಳುವುದು ಮಹಾ ಮೂರ್ಖತನ. ಪತಿಭಕ್ತಿ ಎಂಬುದು ಗೃಹಸ್ಥಾಶ್ರಮದಲ್ಲಿರುವ ಸಾಮಾಜಿಕ ವ್ಯವಹಾರವಾಗಿರುತ್ತದೆ. ಈ ವ್ಯವಹಾರವು ಪತ್ನೀಭಕ್ತಿ ಎಂಬುದಾಗಿ ಪುರುಷನ

ಮೇಲೂ ಅವಲಂಬಿಸುತ್ತದೆ. ಆದರೆ ಪುರುಷನ ಸಂಬಂಧವು ಈ ಲೋಕದಲ್ಲಿ ಕೇವಲ ಸ್ತ್ರೀಯೊಡನೆ ಮಾತ್ರವೋ? ಅಥವಾ ಸ್ತ್ರೀ ಸಂಬಂಧವು ಪುರುಷನೊಡನೆ ಮಾತ್ರವೋ? ಪುರುಷನಂತೆ ಸ್ತ್ರೀಯ ಆತ್ಮಕ್ಕೆ ಪರಮಾತ್ಮನಲ್ಲಿ ಸಂಬಂಧವಿಲ್ಲವೇ? ಎಂಬುದನ್ನು ಸರಿಯಾಗಿ ಯಾರೂ ಯೋಚಿಸಿ ನೋಡುವುದಿಲ್ಲ. ಪುರುಷರು ತಮಗೆ ಬೇಕಾದ ರೀತಿಯಲ್ಲಿ ಸ್ತ್ರೀಯರ ಮೇಲೆ ಅಧಿಕಾರ ನಡಿಸಲಿಕ್ಕಾಗಿಯೇ ಪತಿ ಸೇವೆಯೇ ಪತ್ನಿಯರ ಕರ್ತವ್ಯವೆಂದೂ ಸ್ತ್ರೀಯರಿಗೆ ಈಶ್ವರಭಕ್ತಿಯ ಆವಶ್ಯಕತೆ ಇಲ್ಲವೆಂದೂ, ಅದನ್ನು ಪುರುಷರೇ ಮಾಡುವರೆಂದೂ ನಿಯಮಗಳನ್ನು ವಿಧಿಸಿಕೊಂಡಿರುವರು. ಮತ್ತು ಇವರ ಬಗ್ಗೆ ಪತ್ನಿ ವ್ರತದ ನಿಯಮವನ್ನು ಮಾತ್ರ ವಿಧಿಸಿಕೊಂಡಿಲ್ಲ. ಸ್ತ್ರೀಯ ಸಂಬಂಧವು ಪುರುಷನೊಡನೆ ಆಗಬೇಕಾದರೆ ಪುರುಷನ ಸಂಬಂಧವು ಸ್ತ್ರೀಗೆ ಸಮ್ಮತವಿರಬೇಕು. ಪುರುಷನಂತೆ ಸ್ತ್ರೀಯ ಆತ್ಮಕ್ಕೂ ಪರಮಾತ್ಮನ ಸಂಬಂಧವಿದ್ದೇ ಇದೆ. ಹೀಗಿಲ್ಲದಿದ್ದಲ್ಲಿ ಸ್ತ್ರೀಯಲ್ಲಿ ಆಗುವಂಥಾ ಗರ್ಭೋತ್ಪತ್ತಿಯೂ ಅದರ ಬೆಳವಣಿಗೆಯೂ ಮತ್ತು ಅದರ ಪ್ರಸವವೂ ಮನುಷ್ಯನ ಸ್ವಪ್ರಯತ್ನದಿಂದ ಆಗಲಾರದು. ಪರಮಾತ್ಮನ ದಿವ್ಯ ವಾದ ಅದೊಂದು ಶಕ್ತಿಯೇ ಇದೆಲ್ಲವನ್ನೂ ಮಾಡಿಸುತ್ತದೆ. ಇಡೀ ಜಗತ್ತನ್ನು ಪರಮಾತ್ಮನೇ ಸೃಷ್ಟಿಸಿರುವುದರಿಂದ ಸ್ತ್ರೀಯರೂ ಅವ ನಿಂದಲೇ ಉಂಟಾಗಿರುವರು. ಸಚರಾಚರವಾದ ಎಲ್ಲಾ ಪ್ರಾಣಿಗಳೂ ಆತನಿಂದಲೇ ನಿರ್ಮಿಸಲ್ಪಟ್ಟು ಆತನ ಅಧಿಕಾರಕ್ಕೆ ಒಳಗಾಗುವಂತೆ ಸ್ತ್ರೀಪುರುಷರಿಬ್ಬರಲ್ಲಿಯೂ ಅವನ ಬಲವಾದ ಸಂಬಂಧವಿರುತ್ತದೆ. ಈ ಪ್ರಕಾರ ಸ್ತ್ರೀಪುರುಷರಲ್ಲಿರುವ ಪರಸ್ಪರ ಸಮಾನತೆಯನ್ನು ನಿರ್ವಿ ವಾದವಾಗಿ ಒಪ್ಪತಕ್ಕದ್ದು.

ಇನ್ನುಳಿದ ಪ್ರಶ್ನೆ ಏನೆಂದರೆ ಸ್ತ್ರೀಪುರುಷರ ಅಧಿಕಾರಗಳಲ್ಲಿ ಏನಾದರೂ ಭೇದವಿದೆಯೇ ಎಂಬುದು ಸರಿಯಾಗಿ ಆಲೋಚನೆಮಾಡಿ ನೋಡಿದಲ್ಲಿ, ಪರಸ್ಪರ ಸ್ವಲ್ಪ ಭೇದವಿದೆ. ಸ್ತ್ರೀಯರಿಗೆ ಪುರುಷರಿಗಿಂತ ಸ್ವಲ್ಪ ಹೆಚ್ಚಿನ ಅಧಿಕಾರವಿದೆ. ಅದು ಹೇಗೆಂದರೆ ಸ್ತ್ರೀಯರಲ್ಲಿ

ಸ್ವಾಭಾವಿಕವಾಗಿ ಶಾರೀರಿಕ ಬಲವು ಪುರುಷರಿಗಿಂತ ಕಡಿಮೆ ಇರುತ್ತದೆ. ಈ ಕಾರಣದಿಂದ ಬಲಶಾಲಿಯಾದ ಪುರುಷಸಮಾಜವು ಇವರ ಮೇಲೆ ಸ್ವೇಚ್ಛಾವರ್ತನೆಯನ್ನೊಡ್ಡದಂತೆ ಇವರಿಗೆ ಪುರುಷರಿಗಿಂತ ವಿಶೇಷವಾದ ವ್ಯವಸ್ಥೆಯನ್ನು ಮಾಡಬೇಕಾಗುತ್ತದೆ. ಇನ್ನೊಂದೇನೆಂದರೆ ಅವರ ಹೃದಯವು ಪುರುಷರಿಗಿಂತ ಹೆಚ್ಚು ಕೋಮಲ ಮತ್ತು ಪ್ರೇಮಯುಕ್ತವಾಗಿರುತ್ತದೆ. ಮಕ್ಕಳ ಪೋಷಣೆಯ ಹೆಚ್ಚಿನ ಭಾರವು ತಾಯಿಯ ಮೇಲಲ್ಲದೆ ತಂದೆಯ ಮೇಲೆ ಇರುವುದಿಲ್ಲ. ಆದುದರಿಂದ ಸ್ತ್ರೀಯರ ಅಧಿಕಾರವೇ ಪುರುಷರಿಗಿಂತ ಅಧಿಕ. ಯಾವ ಸ್ತ್ರೀಯರನ್ನು ಒಂದು ತೊತ್ತಿನಂತೆ ನೀಚತರಗತಿಯಲ್ಲಿಡುತ್ತಾರೋ ಅಂಥಾ ಸ್ತ್ರೀಯರಿಗೆ ಹುಟ್ಟುವ ಮಕ್ಕಳು ಕೂಡಾ ಅದೇ ರೀತಿ ನಿರ್ಬಲರೂ, ಅಜ್ಞಾನಿಗಳೂ ಪರಾವಲಂಬಿಗಳೂ ಆಗಿರುತ್ತಾರೆ

ಸರ್ವಸಾಧಾರಣವಾಗಿ ಅಸಭ್ಯಜಾತಿಗಳಲ್ಲಿ ಶಾರೀರಿಕ ಬಲವೇ ಅಧಿಕಾರವನ್ನು ನಡೆಸುವುದು ಕಂಡುಬರುತ್ತದೆ. ಒಬ್ಬನು ತನ್ನಲ್ಲಿದ್ದ ಶಾರೀರಿಕ ಬಲದ ಧೈರ್ಯದಿಂದಲೇ ತಾನು ಇಚ್ಛಿಸಿದ ವಸ್ತುವನ್ನು ತಾನು ಯೋಚಿಸಿದ ವಿಚಾರವನ್ನು ತಾನು ಪಡುವ ಪ್ರಯತ್ನವನ್ನು ಇವೆಲ್ಲವುಗಳಲ್ಲಿ ಸಫಲತೆಯನ್ನು ಪಡೆಯುವೆನೆಂಬ ಧೈರ್ಯವನ್ನು ತಂದುಕೊಳ್ಳುತ್ತಾನೆ. ಶಾರೀರಿಕಬಲದಲ್ಲಿ ಸಂಪೂರ್ಣನಾದವನು ಮಾಡುವ ಯಾವುದೊಂದು ಅನುಚಿತ ಕಾರ್ಯವನ್ನು ಕೂಡ ಫಕ್ಕನೆ ಎದುರಾಡಲಿಕ್ಕೆ ಧೈರ್ಯ ಬರುವುದಿಲ್ಲ. ಪ್ರಾಚೀನಕಾಲದಲ್ಲಿ ಆಂಗ್ಲೇಯರಲ್ಲಿ ಒಂದು ಪದ್ಧತಿ ಇತ್ತು. ಅದಾವುದೆಂದರೆ ಯಾರಾದರೊಬ್ಬನು ಇನ್ನೊಬ್ಬರನ್ನು ನೀಚನೆಂದು ಸಿದ್ಧಪಡಿಸಬೇಕೆಂದಿದ್ದರೆ ಮೊದಲಾತನು ತನ್ನ ಎದುರಾಳಿಯೊಡನೆ ಮಲ್ಲಯುದ್ಧವನ್ನು ಮಾಡುತ್ತಿದ್ದನು. ಸೋತವನೂ ಅವನ ಕಡೆಯವರೂ ನೀಚರೆಂದೆಣಿಸಲ್ಪಡುತ್ತಿದ್ದರು. ಅಲ್ಲಿಯವರು ಶಾರೀರಿಕ ಶಕ್ತಿಯೇ ಎಲ್ಲಾ ಧರ್ಮಶಾಸ್ತ್ರದ ಅಸ್ತಿವಾರವೆಂದು ನಂಬಿಕೊಂಡಿದ್ದರು. ಆದರೆ ಈ ಪದ್ಧತಿಯು

ಅಸಭ್ಯ ಜನಾಂಗದ ಪದ್ಧತಿಯಾಗಿರುತ್ತದೆ. ಇದರಿಂದ ವೈಯಕ್ತಿಕ ಉನ್ನತಿಯು ಕೂಡಾ ತಡೆಗಟ್ಟಲ್ಪಟ್ಟು ಸಾಮಾಜಿಕ ವ್ಯವಸ್ಥೆಯು ಸುರಕ್ಷಿತವಾಗಿ ನಿಲ್ಲದೆ ಕರ್ತವ್ಯಗಳಲ್ಲಿ ಅನೇಕ ತರದ ಬಾಧೆಗೆಳುಂಟಾಗುತ್ತವೆ. ಇಂಥಾ ಪರಿಸ್ಥಿತಿಯಲ್ಲಿ ಯಾರೊಬ್ಬನು ಕೂಡಾ ತನ್ನ ಸ್ವತ್ತುಗಗಳನ್ನು ತನ್ನದೆಂದು ಧೈರ್ಯದಿಂದ ಹೇಳಲಿಕ್ಕ ಸಾಧ್ಯವಿರುವುದಿಲ್ಲ. ಯಾಕೆಂದರೆ ಅವನಿಗಿಂತ ಬಲಶಾಲಿ ಮನುಷ್ಯನು ಅವನ ಸರ್ವಸೊತ್ತನ್ನು ಅಪಹರಿಸಿಕೊಳ್ಳುವನು. ಒಂದೇ ಮಾತಿನಲ್ಲಿ ಹೇಳುವುದಾದರೆ ನಿರ್ಬಲರ ಮೇಲೆ ಬಲಶಾಲಿಗಳು ಪದೇ ಪದೇ ಅತ್ಯಾಚಾರ ನಡೆಸುತ್ತಾರೆ. ಶಕ್ತಿಹೀನರು ಇಂಥಾ ಅತ್ಯಾಚಾರಗಳನ್ನು ಆಕ್ಷೇಪಿಸಲಿಕ್ಕೆ ಕೂಡಾ ಅಸಮರ್ಥರಾಗಿರುತ್ತಾರೆ.

ಸಭ್ಯಜಾತಿಗಳಲ್ಲಿ ಇಂಥ ಪದ್ಧತಿಯು ಕಂಡುಬರುವುದಿಲ್ಲ. ಅತ್ಯಂತ ನಿರ್ಬಲ ಪುರುಷನು ಕೂಡಾ ತನ್ನ ಸರ್ವಸ್ವವನ್ನೂ ತಾನು ಸುಲಭರೀತಿಯಲ್ಲಿ ಕಾಪಾಡಿಕೊಳ್ಳುವ ವ್ಯವಸ್ಥೆಯು ಇದರಲ್ಲಿರುತ್ತದೆ. ಈ ವ್ಯವಸ್ಥೆಗನುಕೂಲವಾದ ಕಾರ್ಯವನ್ನು ಧರ್ಮವೆಂದೂ, ತನಗಿಂತ ಬಲಶಾಲಿಯಾಗಿದ್ದರೂ ಕೂಡಾ ಸುವ್ಯವಸ್ಥೆಯನ್ನು ವಿನಾಶ ಮಾಡಿದ ಕೆಲಸವನ್ನು ಅಧರ್ಮವೆಂದು ಹೇಳುವುದಕ್ಕೂ ಅದನ್ನು ಧೈರ್ಯದಿಂದ ಎದುರಾಡಲಿಕ್ಕೂ ಸಭ್ಯಜಾತಿಗಳಲ್ಲಿ ಸಾಮರ್ಥ್ಯವಿರುತ್ತದೆ.

ಅಸಭ್ಯಜನಾಂಗವು ನಿರ್ಬಲರನ್ನು ತನ್ನ ದಾಸರನ್ನಾಗಿಟ್ಟುಕೊಂಡು ತನ್ನ ಮನಬಂದ ಕಾರ್ಯವನ್ನು ಮಾಡಿಕೊಳ್ಳುವದು. ಶಿಕ್ಷಿತಜನಾಂಗವು ಯಾವನೊಬ್ಬನ ವ್ಯಕ್ತಿ ಸ್ವಾತಂತ್ರ್ಯವನ್ನು ಹಾಳು ಮಾಡುವುದಿಲ್ಲ. ಆದರೆ ಇತ್ತೀಚಿಗಿನ ಇತಿಹಾಸಗಳನ್ನು ನೋಡುವಲ್ಲಿ ಇಡೀ ಜನಾಂಗವನ್ನೇ ಸ್ವಾಧೀನಪಡಿಸಿಕೊಂಡು ಪ್ರಜೆಗಳನ್ನು ಪಾದಾಕ್ರಾಂತರನ್ನಾಗಿ ಮಾಡಿ ಅವರ ರಕ್ತವನ್ನು ಹೀರಿದರೂ ಅದು ಎಲ್ಲರಿಗೆ ಅಧಿಪತಿಯೆನ್ನಿಸಿಕೊಳ್ಳುವುದು ಕಂಡುಬರುತ್ತದೆ. ನಾವು ಮೇಲೆ

ವಿವರಿಸಿದಂತೆ ಸ್ತ್ರೀಯರು ಪುರುಷರಿಗಿಂತ ನಿರ್ಬಲರಾಗಿರುವುದ ರಿಂದಲೇ ಅಸಭ್ಯಜಾತಿಯಲ್ಲಿ ಸ್ತ್ರೀಯರನ್ನು ನೀಚರೆಂದು ಎಣಿಸಲಾಗಿದೆ. ಅನೇಕ ಜಾತಿಗಳಲ್ಲಿ ಸ್ತ್ರೀಯರನ್ನು ಬಲಾತ್ಕಾರವಾಗಿ ಹಿಡಿದು ಮದುವೆ ಮಾಡಿಕೊಳ್ಳುವ ಪದ್ಧತಿಯೂ ಇದೆ. ಆಸ್ಟ್ರೇಲಿಯದ ನಿವಾಸಿಗಳು ಯಾವುದಾದರೊಂದು ಅನ್ಯಜಾತಿಯ ಸ್ತ್ರೀಯನ್ನು ಇಚ್ಛಿಸಿದಲ್ಲಿ ಮೊದಲಾಗಿ ಅವರು ಆಕೆ ಇದ್ದ ಸ್ಥಳಕ್ಕೆ ಮುತ್ತಿಗೆ ಹಾಕುತ್ತಾರೆ. ಅಲ್ಲಿ ಅವಳನ್ನು ರಕ್ಷಿಸುವವರು ಯಾರೂ ಇಲ್ಲವೆಂದು ಅವರಿಗೆ ತಿಳಿದಲ್ಲಿ ಅವಳ ಮೇಲೆ ಬೀಳುತ್ತಾರೆ. ಆಕೆ ಒಪ್ಪದಿದ್ದರೆ ಬರ್ಚಿಗಳಿಂದ ಅವಳಿಗೆ ಬಹಳ ಕಷ್ಟಕೊಡುತ್ತಾರೆ. ಅವಳ ಜುಟ್ಟು ಹಿಡಿದು ಕಾಡಿಗೆ ಎಳೆದುಕೊಂಡು ಹೋಗುತ್ತಾರೆ. ಅಲ್ಲಿ ಅವಳಿಗೆ ಸ್ಮೃತಿ ಬಂದ ಮೇಲೆ "ನೀನು ನಮ್ಮೊಂದಿಗೆ ಇರು" ಎಂದು ಹೇಳಿ ಎಲ್ಲರ ಮುಂದೆ ಆಕೆಯೊಡನೆ ಸಂಸರ್ಗ ಮಾಡುತ್ತಾರೆ. ಸ್ತ್ರೀಯರು ಕುರಿಗಳಿಗಿಂತಲೂ ನೀಚರೆಂಬು ದಾಗಿ ಅವರ ತಿಳುವಳಿಕೆಯಲ್ಲಿದೆ ಅವರಲ್ಲಿರುವ ಇನ್ನೊಂದು ಪದ್ಧತಿ ಏನೆಂದರೆ ಇಬ್ಬರು ಕೂಡಿ ಅನ್ಯಜಾತಿಯ ಸ್ತ್ರೀಯು ನಿದ್ರಿಸುತ್ತಿರುವಲ್ಲಿ ಹೋಗಿ ಒಬ್ಬನು ತನ್ನ ಬರ್ಚಿಯ ತುದಿಯನ್ನು ಅವಳ ಎದೆ ಮಧ್ಯದಲ್ಲಿ ತಾಗಿಸಿಟ್ಟು, ಇನ್ನೊಬ್ಬನು ಬರ್ಚಿಯಿಂದ ಆಕೆಯ ತಲೆಗೂದಲನ್ನು ಮೆಲ್ಲಗೆ ಕೆದರುತ್ತಾನೆ. ಆವಳು ಎಚ್ಚತ್ತು ಈ ದೃಶ್ಯವನ್ನು ನೋಡಿ ವಿಪರೀತವಾದ ಭಯದಿಂದ ಕೂಗಲು ಕೂಡ ಅಸಮರ್ಥಳಾಗುತ್ತಾಳೆ. ಕೂಡಲೆ ಆಕೆಯನ್ನು ಎತ್ತಿಕೊಂಡು ಹೋಗಿ ಒಂದು ಮರಕ್ಕೆ ಕಟ್ಟಿಹಾಕಿ ಬಹಳ ಕಷ್ಟಕೊಡುತ್ತಾರೆ. ಆ ಮೇಲೆ ಒಬ್ಬನು ಅವಳನ್ನು ತನ್ನ ಪತ್ನಿಯನ್ನಾಗಿ ಮಾಡಿಕೊಳ್ಳುತ್ತಾನೆ. ನ್ಯೂಗಿನಿ, ಫಿಜಿ ಮುಂತಾದ ದ್ವೀಪಗಳಲ್ಲಿಯೂ ಇದೇ ರೀತಿ ಅತ್ಯಾಚಾರವು ಸ್ತ್ರೀಯರ ಮೇಲೆ ಆಗುತ್ತಿತ್ತು ಸ್ತ್ರೀಯರು ನಿರ್ಜೀವ ವಸ್ತುಗಳೆಂದು ತಿಳಿದು ತಾಯಿಯನ್ನು ಕೂಡ ಕೊಲ್ಲುವ ಪದ್ಧತಿಯು ಒಂದು ಜಾತಿಯ ಜನರಲ್ಲಿತ್ತು. ಫಿಜಿ ದ್ವೀಪದಲ್ಲಿದ್ದ "ಲೂಚಿ" ಎಂಬಾತನು ತನ್ನ ತಾಯಿಯನ್ನು ಕೊಂದು ಆಕೆಯ ಮಾಂಸವನ್ನು ಬೇಯಿಸಿ

ತಿಂದಿದ್ದನು. ಅಲ್ಲಿಯವರು ತಮ್ಮ ಅಕ್ಕತಂಗಿಯರನ್ನು ಅನ್ಯರಿಗೆ ಮಾರಿ ಬದಲಾಗಿ ತಮಗೆ ಬೇಕಾದ ಸ್ತ್ರೀಯರನ್ನು ಪಡಕೊಂಡು ಮದುವೆ ಮಾಡಿಕೊಳ್ಳುತ್ತಿದ್ದರು. (Evolution of Marriage P. 90 93 106 ನೋಡಿರಿ.)

ವಿವಾಹದ ಮೊದಲು ಸ್ತ್ರೀಯರ ಮನಸ್ಸನ್ನು ಸರಿಯಾಗಿ ತಿಳಿದುಕೊಳ್ಳುವ ಪದ್ಧತಿಯು ಭಾರತವರ್ಷದಲ್ಲಿಯೂ ಇಲ್ಲ. ಇಲ್ಲಿಯ ಪುರುಷಸಮಾಜವು ಕೂಡ ಸ್ತ್ರೀಯರ ಮೇಲೆ ತನ್ನ ಸರ್ವಾಧಿಕಾರವನ್ನು ನಡೆಸುತ್ತದೆ. ಅವನು ಆಕೆಗೆ ತನ್ನ ಕೈದಣಿಯುವಷ್ಟು ಹೊಡೆಯಬಲ್ಲನು; ಬಾಯಿಗೆ ಬಂದಂತೆ ಬೈಯಬಲ್ಲನು; ತನ್ನ ಮನ ಬಂದಂತೆ ಆಕೆಯು ತನ್ನೊಡನೆ ವರ್ತಿಸಲಿಕ್ಕಾಗಿ ಆಕೆಯನ್ನು ನಿರ್ಬಂಧಿಸ ಬಲ್ಲನು. ಹೆಚ್ಚೇಕೆ? ತನಗೆ ತೋರಿದರೆ ಅವಳನ್ನು ಬಿಟ್ಟೇ ಬಿಡಲಿಕ್ಕೂ ಅವನಿಗೆ ಸಂಪೂರ್ಣ ಅಧಿಕಾರವಿದೆ. ಇದು ಹೊರತು ಮನಸ್ಸಾದರೆ ಒಬ್ಬಾಕೆ ಇರುತ್ತಾ ಇನ್ನೊಬ್ಬಳನ್ನೂ ವರಿಸಬಲ್ಲನು. ಇಂತಹವರ ಮಧ್ಯದಲ್ಲಿ ಇದ್ದ ಅಶಿಕ್ಷಿತ ಸ್ತ್ರೀಯರಲ್ಲನೇಕರು ಪುರುಷರಂತೆ ತಾವೂ ಅನ್ಯರನ್ನು ರಹಸ್ಯದಲ್ಲಿ ಪ್ರೀತಿಸಿ ಜೀವನಪಥ ಭ್ರಷ್ಟರಾಗುವುದೂ ಉಂಟು. ಪತಿಯು ಪತ್ನಿಯ ಸಂಬಂಧಿಕರನ್ನು ಬಹು ವಿಧದಲ್ಲಿ ತಿರಸ್ಕರಿಸುತ್ತಾ ಇರುತ್ತಿದ್ದರೂ ಆಕೆ ಮಾತ್ರ ಪತಿಪರಾಯಣಳಾಗಿರಬೇಕು. ಪತಿಯು ಮಹಾ ದುರಾಚಾರಿಯಾಗಿದ್ದರೂ ಆತನ ಶುಶ್ರೂಷೆಯಿಂದಲೇ ಆಕೆಗೆ ಇಹಪರದ ಸುಖವು ದೊರೆಯುವುದಂತೆ! ಆಹಾ! ಪುರುಷಸಮಾಜದ ಈ ತರದ ನೀಚಸ್ವಾರ್ಥತೆಯಿಂದ ಭಾರತೀಯ ಜನಾಂಗದಲ್ಲಿ ಯಾವ ಪರಿಣಾಮವುಂಟಾಯಿತೆಂಬುದನ್ನು ಅಂತಃಕರಣಪೂರ್ವಕವಾಗಿ ಯಾರಾದರೂ ವಿಚಾರಿಸುತ್ತಿದ್ದಾರೆಯೇ?

ಪ್ರಾಚೀನ ವೈದಿಕ ಸಭ್ಯತೆಯು ಎಂದಿನ ವರೆಗೆ ಆರ್ಯಾವರ್ತದಲ್ಲಿ ಪ್ರಚಲಿತವಲ್ಲಿತ್ತೊ ಅಂದಿನ ವರೆಗೆ ಈ ತರಹದ ಅತ್ಯಾಚಾರಗಳು ಆಗುತ್ತಿದ್ದಿಲ್ಲ. ಆ ಕಾಲದಲ್ಲಿ ಎಲ್ಲರೂ ಮಹಿಳಾ ಸಮಾಜವನ್ನು ಅತ್ಯಂತ ಗೌರವ ಮತ್ತು ಆದರ ದೃಷ್ಟಿಯಿಂದ ನೋಡುತ್ತಿದ್ದರು.

**"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ ।**
**ಯತ್ರೈತಾಸ್ತು ನ ಪೂಜ್ಯಂತೆ ಸರ್ವಾಸ್ತತ್ರಾ ಫಲಾಃ ಕ್ರಿಯಾಃ ।।"**

(ಮನು ಅ. 3, 56.)

"ಎಲ್ಲಿ ಸ್ತ್ರೀಯರ ಆದರ ಸತ್ಕಾರವಾಗುತ್ತದೋ ಅಲ್ಲಿ ದೇವತೆಗಳು (ವಿದ್ವಾಂಸರು) ವಾಸಿಸುತ್ತಾರೆ. 'ಸ್ತ್ರೀಯರ ಅನಾದರವಾಗುವಲ್ಲಿ ಎಲ್ಲ ಕಾರ್ಯಗಳೂ ನಿಷ್ಫಲವಾಗುತ್ತವೆ."

ಸ್ವಾಭಾವಿಕವಾಗಿ ಮಹಿಳೆಯರು ಪುರುಷರಿಗಿಂತ ನಿರ್ಬಲರಾಗಿರುವುದರಿಂದ ಅವರು ತಮ್ಮನ್ನು ತಾವೇ ರಕ್ಷಿಸಿಕೊಳ್ಳಲಾರರು. ಆದುದರಿಂದಲೇ ಅವರಿಗಾಗಿ ಒಂದು ವಿಧದ ವಿಶೇಷ ವ್ಯವಸ್ಥೆಯನ್ನು ಮಾಡಲಾಗಿದೆ. ಅಂದರೆ ಪುರುಷನು ಸ್ತ್ರೀಯನ್ನು ಅನಾದರಗೊಳಿಸಿದರೆ ಅವನಿಗೆ ದಂಡನೆಯನ್ನು ವಿಧಿಸುವಂತಹ ಅಧಿಕಾರವು ಸಮಾಜಕ್ಕಿದೆ. ಆದುದರಿಂದ ವಿವಾಹದಲ್ಲಿಯೂ ಪುರುಷರಂತೆಯೇ ಸ್ತ್ರೀಯರಿಗೂ ಸಮಾನಾಧಿಕಾರವಿದೆ. ಇಂತಹ ಸಮಾನತೆಯಿಂದ ಜರಗಿದ ವಿವಾಹವೆ ಆದರ್ಶನೀಯವಾಗಿರುತ್ತದೆ. ಈ ದಂಪತಿಯರೆ ಸದಾ ಸುಖಿಗಳಾಗಿರುತ್ತಾರೆ. ಸ್ತ್ರೀಯು ತನ್ನ ಪತಿಯ ಹೊರತು ಇತರ ಪುರುಷರೊಡನೆ ಸಂಸರ್ಗಮಾಡಕೂಡದೆಂಬಂತೆ ಪುರುಷನು ಕೂಡಾ ತನ್ನ ಪತ್ನಿಯ ಹೊರತು ಇತರ ಸ್ತ್ರೀಯ ಸಂಪರ್ಕಮಾಡಕೂಡದು. "ಮಾತ್ರವತ' ಪರದಾರೇಷು" ಅಂದರೆ ಪರಸ್ತ್ರೀಯು ತಾಯಿಸಮಾನವೆಂದು ತಿಳಿಯತಕ್ಕದ್ದು ಎಂಬ ಉತ್ತಮವಾದ ಇದೊಂದು ನಿಯಮವು ಸಭ್ಯಸಮಾಜದಲ್ಲಿರುತ್ತದೆ. ಇದನ್ನು ಪ್ರತಿಯೊಬ್ಬನೂ ಅವಶ್ಯವಾಗಿ ಅನುಸರಿಸತಕ್ಕದ್ದು. ಪರಪುರುಷನೊಡನೆ ಸಂಸರ್ಗ ನಡೆಸಿದ ಸ್ತ್ರೀಯು ವ್ಯಭಿಚಾರಿಣಿ ಎಂಬದಾಗಿ ಕರೆಯಲ್ಪಡುತ್ತಾಳೆ.

**"ಅಪತ್ಯ ಲೋಭಾದ್ಯಾತು ಸ್ತ್ರೀ ಭರ್ತಾರಮತಿವರ್ತತೇ ।**
**ಸೇಹ ನಿಂದಾಮವಾಪ್ನೋತಿ ಪತಿ ಲೋಕಾಚ್ಚ ಹೀಯತೇ ।।**

**ವ್ಯಭಿಚಾರಾತ್ತು ಭರ್ತ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಂ।**
**ಶೃಗಾಲ ಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥**

(ಮನು. ಅ 5 161. 164.)

ಇದೇ ಪ್ರಕಾರ ಪರಸ್ತ್ರೀಗಮನಮಾಡಿದ ಪುರುಷನು ಸಹ ವ್ಯಭಿಚಾರಿ ಯೆನ್ನಲ್ಪಟ್ಟು ದಂಡನೆಗೆ ಗುರಿಯಾಗುತ್ತಾನೆ. ಸದಾಚಾರದ ಜವಾಬ್ದಾರಿಕೆಯು ಸ್ತ್ರೀಯರ ಮೇಲೆ ಎಷ್ಟಿದೆಯೋ ಅಷ್ಟೇ ಪುರುಷನ ಮೇಲೂ ಇದೆ.

ಪ್ರಚಲಿತ ಕಾಲದಲ್ಲಿ ಹಿಂದೂ ಸಮಾಜದ ವ್ಯವಹಾರಿಕ ಪರಿಸ್ಥಿತಿಯನ್ನು ನೋಡುವಾಗ ನಮಗೆ ಬಹಳ ಭೇದಗಳು ಕಂಡುಬರುತ್ತಿವೆ. ಧಾರ್ಮಿಕ ಗ್ರಂಥಗಳಲ್ಲಿ ವಿಧಿಸಿದ ವಿಧಿಗಳಾದರೋ ಸ್ತ್ರೀಪುರುಷರಿಬ್ಬರಿಗೂ ಸಮಾನರೀತಿಯಲ್ಲಿವೆ. ಮನುಸ್ಮೃತಿಯ ಆರನೆಯ ಅಧ್ಯಾಯದ 92ನೇ ಶ್ಲೋಕದಲ್ಲಿ ವಿವರಿಸಿದ ಧರ್ಮದ ದಶನಿಯಮಗಳು ಸ್ತ್ರೀಪುರುಷರಿಬ್ಬರಿಗೂ ಸಮಾನರೀತಿಯಲ್ಲಿ ವಿಧಿಸಲ್ಪಟ್ಟಿವೆ. ಪತಂಜಲಿ ಋಷಿಯು ಕೂಡಾ ತನ್ನ ಯೋಗದರ್ಶನದಲ್ಲಿ ಲಿಂಗಭೇದ, (ಇದು ಪುರುಷರಿಗೆ ಅಥವಾ ಸ್ತ್ರೀಯರಿಗೆ ಮಾತ್ರವೆಂಬುದಾಗಿ) ಮಾಡಿಲ್ಲ. ಸ್ತ್ರೀಗೆ ಸತ್ಯಾಚರಣೆಯೇ ಮುಖ್ಯ ಕರ್ತವ್ಯವೆಂದಿರುವುದಾದರೆ ಪುರುಷನಿಗೂ ಅದೇಯಾಗಿರುವುದು. ಕ್ರೋಧವು ಆತನಿಗೆ ಹಾನಿಕಾರಕವಾಗಿರುವಂತೆ ಸ್ತ್ರೀಗೂ ಹಾನಿಯುಕ್ತವಾಗಿರುವುದು. ಈ ಪ್ರಕಾರ ಶಾಸ್ತ್ರೀಯ ದೃಷ್ಟಿಯಿಂದಲೂ ಸ್ತ್ರೀಪುರುಷರ ಅಧಿಕಾರ ಮತ್ತು ಕರ್ತವ್ಯಗಳು ಭಿನ್ನಭಿನ್ನವಾಗಿಲ್ಲವೆಂಬುವುದು ಸಿದ್ಧವಾಗುತ್ತದೆ.

ಇಲ್ಲಿ ವಿಚಾರಾರ್ಹವಾದ ಇನ್ನೊಂದು ಮಾತಿದೆ. ಅದಾವುದೆಂದರೆ—ಸ್ತ್ರೀಪುರುಷರ ಆತ್ಮಗಳೆರಡೂ ಲಿಂಗಭೇದವಿಲ್ಲದೆ ನಿರಾಕಾರವಾಗಿರುತ್ತವೆ. ಲಿಂಗಭೇದವು ಕೇವಲ ಶರೀರದಲ್ಲಿ ಮಾತ್ರ; ಇವೆರಡರ ಉದ್ದೇಶವು ಒಂದೇಯಾಗಿರುವುದು ಅಂದರೆ ಮೋಕ್ಷಪ್ರಾಪ್ತಿ. ಶಾಸ್ತ್ರವು ಕೂಡ ಇದನ್ನೇ ಪ್ರತಿಪಾದಿಸುತ್ತದೆ. ಮೋಕ್ಷಪ್ರಾಪ್ತಿಯಲ್ಲಿ ಸ್ತ್ರೀಪುರು

ಷರು ಸಮಾನಾಧಿಕಾರವುಳ್ಳವರೆಂದು ಅನೇಕ ಶಾಸ್ತ್ರಗಳೂ ಪ್ರತಿಪಾದಿಸುತ್ತಿವೆ. ಮಹಾಕವಿ ಭವಭೂತಿ ಹೇಳಿದಂತೆ–

**ಗುಣಾಃ ಪೂಜ್ಯಸ್ಥಾನಮ್ ಗುಣೀಷು ನಚ ಲಿಂಗಮ್ ನಚವಯಃ ॥**

**ಉತ್ತರರಾಮ ಚರಿತ್ರ ಅಂಕ 4**

ತಾತ್ಪರ್ಯ––"ಗುಣಿಜನರ ಗುಣಗಳೇ ಪ್ರಶಂಸನೀಯವಾಗಿರುತ್ತವೆ ಹೊರತು ಅವರ ಲಿಂಗಭೇದ ಯಾ ಆಯುರ್ಮಾನವಲ್ಲ."

ಸ್ತ್ರೀಯು ಮೋಕ್ಷಪ್ರಾಪ್ತಿಗಾಗಿ ಪುರುಷನಾಗಿ ಹುಟ್ಟಬೇಕೆಂದು ಯಾವ ಶಾಸ್ತ್ರವೂ ಹೇಳುವುದಿಲ್ಲ. ಯಮ ಸಿ ಯಮಾದಿಗಳಿಂದ ಮೊದಲುಗೊಂಡು ಸಮಾಧಿಯ ವರೆಗಿನ ವಿಧಿಗಳು ಪುರುಷರಿಗೆ ಮಾತ್ರವಲ್ಲದೆ ಸ್ತ್ರೀಯರಿಗೆ ನಿಷಿದ್ಧವೆಂಬುದರ ಕುರಿತು ಇದುವರೆಗೆ ನಮಗೆ ಯಾವ ಆಧಾರವೂ ದೊರಕಿರುವುದಿಲ್ಲ. ಇನ್ನು ಇತರ ಲೌಕಿಕ ಮತ್ತು ಪಾರಲೌಕಿಕ ವ್ಯವಹಾರದಲ್ಲಿ ಸ್ತ್ರೀಪುರುಷರ ಅಧಿಕಾರ ಮತ್ತು ಕರ್ತವ್ಯಗಳು ಸಮಾನರೂಪದಲ್ಲಿ ಇರುವಲ್ಲಿ ವಿವಾಹದ ಕುರಿತು ಹೇಗಿದೆ ಎಂಬುದನ್ನು ವಿವರಿಸುವೆವು.

ವಿವಾಹದಲ್ಲಿ ಸ್ತ್ರೀಪುರುಷರಿಬ್ಬರ ಸಂಬಂಧವಾಗುತ್ತದೆ. ಬೇರೆ ಬೇರೆ ಲಿಂಗಗಳ ವ್ಯಕ್ತಿಗಳು ವಿಶೇಷವಾದ ಒಂದು ಕಾರ್ಯಾರ್ಥವಾಗಿ ನಿಯೋಜಿಸಲ್ಪಡುತ್ತಾರೆ. ಬೇರೆ ಬೇರೆ ವ್ಯಕ್ತಿಗಳು ಒಟ್ಟಿಗೆ ಸೇರುವುದರಿಂದ ಅವರ ಅಧಿಕಾರ ಮತ್ತು ಕರ್ತವ್ಯವು ಭಿನ್ನವಾಗಿರುವಂತೆ ಕಂಡುಬರುತ್ತದೆಯೆಂದು ಹಲವರು ಹೇಳಬಹುದು. ಆದರೆ ಇದು ಸರಿಯಲ್ಲ. ಈ ಕುರಿತು ನಾವು ಈ ಕೆಳಗಿನ ವಿಚಾರಗಳನ್ನು ವಾಚಕರ ಮುಂದಿಡುತ್ತೇವೆ.

(1) ವಿವಾಹದಲ್ಲಿ ವಧುವರರಿಬ್ಬರ ಇಚ್ಛೆಯನ್ನು ತಿಳಿಯುವ ಅಗತ್ಯವಿದೆಯೋ ಅಥವಾ ಯಾರಾದರೊಬ್ಬರು ಸಮ್ಮತಿಸಿದರೆ ಸಾಕೊ?

(2) ಒಬ್ಬರ ಮೇಲೆ ಇನ್ನೊಬ್ಬರ ಯಜಮಾನತ್ವವಿದೆಯೆ? ಇದ್ದರೆ ಯಾವ ರೀತಿಯ ಅಧಿಕಾರವು ಯಾರ ಮೇಲಿದೆ? ಇಲ್ಲವಾದರೆ ಅದು ಏಕೆ ತಾನೇ ಇಲ್ಲ?

(3) ಒಬ್ಬ ಸ್ತ್ರೀ ಒಂದೇ ಸಮಯದಲ್ಲಿ ಅನೇಕ ಪುರುಷರೊಡನೆ ವಿವಾಹಮಾಡಿಕೊಳ್ಳಬಹುದೋ?

(4) ಓರ್ವ ಪುರುಷನು ಬಹುಮಂದಿ ಸ್ತ್ರೀಯರನ್ನು ವರಿಸ ಬಹುದೋ?

(5) ಒಬ್ಬನು ಪತ್ನಿ ಸತ್ತ ಮೇಲೆ ಪುನರ್ವಿವಾಹವನ್ನು ಮಾಡಿ ಕೊಳ್ಳಬಹುದೊ?

(6) ಪತಿ ಸತ್ತ ಮೇಲೆ ವಿಧವೆಯು ದ್ವಿತೀಯ ಪತಿಯನ್ನಾರಿಸ ಬಹುದೊ?

ಮೊದಲಾಗಿ ವಧೂವರರಿಬ್ಬರ ಇಚ್ಛೆಯ ಕುರಿತು ಸಮಾಲೋಚಿಸೋಣ. ವಿವಾಹವೆಂಬುವುದು ಸ್ತ್ರೀಪುರುಷರ ಮಧ್ಯದಲ್ಲಾಗುವ ವಿಶೇಷರೀತಿಯ ಒಂದು ಸಂಬಂಧವೆಂಬುವುದು ಎಲ್ಲರಿಗೂ ತಿಳಿದೇ ಇದೆ. ಇದು ಕೇವಲ ಶಾರೀರಿಕವಾಗಿರದೆ ಮಾನಸಿಕ ಮತ್ತು ಆತ್ಮಿಕ ಸಂಬಂಧವೂ ಆಗಿರುತ್ತದೆ. ಪರಂತು, ವಧೂವರರಿಬ್ಬರ ಸಂಪೂರ್ಣ ಸಮ್ಮತಿ ಇಲ್ಲದೆ ಯಾವ ವಿಧದಲ್ಲಿಯೂ ಇಂತಹ ಸಂಬಂಧ ಉಂಟಾಗಲಾರದು. ಒಂದು ವೇಳೆ ಮಾತಾಪಿತೃಗಳ ನಿರ್ಬಂಧದಿಂದ ವಧೂವರರ ಸಂಬಂಧವುಂಟಾದರೆ ಅವರಿಗೆ ನಿಜವಾದ ದಾಂಪತ್ಯಸುಖವು ದೊರೆಯುವುದಿಲ್ಲ. ಇದು ಒಂದು ತರಹದ ಬಲಾತ್ಕಾರದ ಸಂಬಂಧವಾಗಿರುವುದು ಸ್ತ್ರೀಪುರುಷರಿಗೆ ಇದರಿಂದ ದೊರೆಯುವ ಆನಂದವು ಕ್ಷಣಿಕವಾಗಿರುವುದು; ಮಾತ್ರವಲ್ಲದೆ ಇದರಿಂದ ಗೃಹಜೀವನ, ಸಂತಾನವೃದ್ಧಿ ಮುಂತಾದವುಗಳು ಕೆಟ್ಟು ಹೋಗುತ್ತವೆ. ನಿಜವಾದ ಗಾರ್ಹಸ್ಥ್ಯ ಜೀವನಕ್ಕೆ ದಂಪತಿಗಳಲ್ಲಿ ವಾಸ್ತವಿಕವಾದ ಉಸ್ಮುಖಪ್ರೇಮದ ಸ್ನಿಗ್ಧ ಜ್ಯೋತಿಯು ತುಂಬಿತುಳುಕಾಡುತ್ತಿರಬೇಕು. ಇಂತಹ ಪ್ರೇಮವು ಇವರಿಬ್ಬರ ಮಾನಸಿಕ ಇಚ್ಛೆಗಳ ಪರಸ್ಪರ ಐಕ್ಯತೆಯ ಹೊರತು ಉಂಟಾಗುವುದಿಲ್ಲ. ಇನ್ನುಳಿದುದು ಸಂತಾನೋತ್ಪತ್ತಿ. ಶಿಶುವು ಗರ್ಭದಲ್ಲಿರುವಾಗ ಜನನಿಯ ಆಚಾರವಿಚಾರದ ಪ್ರಭಾವವೇ ಅದರ ಮೇಲೂ

ಬೀಳುತ್ತದೆ. ಇದು ಹೊರತು ಶಿಶುವಿನ ಮೆದುಳು ತಾಯಿಯ ಮೆದುಳಿನಿಂದಲೇ ಉಂಟಾಗುತ್ತದೆ. ಈ ಕುರಿತು ಬ್ರಾಹ್ಮಣಗ್ರಂಥದಲ್ಲಿ ಬರೆದಿರುವುದೇನೆಂದರೆ:

"ಅಂಗಾದಂಗಾತ್ಸಂಭವಸಿ ಹೃದಯಾದಧಿಜಾಯಸೇ ।
ವೇದೋ ವೈ ಪುತ್ರನಾಮಾಸಿ ಸ ಜೀವ ಶರದಃ ಶತಮ್ ॥"
(ಬ್ರಾ ಮಂ. 1, 5, 17.)

"ಮಾತಾಪಿತೃಗಳ ಅಂಗದಿಂದ ಶಿಶುವಿನ ಶರೀರವುಂಟಾಗುತ್ತದೆ. ಜನನಿಯ ಮನಸ್ಸಿಗೆ ವಿರುದ್ಧವಾಗಿ ಸಂಬಂಧವುಂಟಾದರೆ ಮತ್ತು ಆಕೆಯ ಮನಸ್ಸು ದುಃಖಾದ್ರ್ರವಾಗಿದ್ದರೆ ಹುಟ್ಟಿದ ಶಿಶುವಿನ ಮೇಲೂ ಅದರ ಪರಿಣಾಮವು ಆವರಿಸುತ್ತದೆ. ವ್ಯಸನ ಯಾ ಕ್ರೋಧದ ಸಮಯದಲ್ಲಿ ಶಿಶುವಿಗೆ ಮೊಲೆಹಾಲನ್ನು ಉಣಿಸಿದರೆ ಅದರ ಆರೋಗ್ಯವು ಕೆಟ್ಟುಹೋಗುವುದೆಂಬದಾಗಿ ಬಹು ಮಂದಿ ವೈದ್ಯರು ಅಭಿಪ್ರಾಯಪಡುತ್ತಾರೆ. ಈ ಕಾರಣದಿಂದಲೇ ಸಾಧಾರಣ ಜನರು ಸಹ ಏನೂ ತಿಳಿಯದ ಸ್ತ್ರೀಯರಿಗೆ "ಮಗುವಿಗೆ ಮೊಲೆಹಾಲು ಕೊಡುವಾಗ ಕ್ರೋಧ ಯಾ ದುಃಖದಲ್ಲಿರಬೇಡ" ಎಂದು ಹೇಳುವ ವಾಡಿಕೆ ಹಳ್ಳಿಗಳಲ್ಲಿಯೂ ಕಂಡುಬರುತ್ತದೆ. ಕಾಡುನಿವಾಸಿಗಳು ಸದಾ ಕ್ರೂರಸ್ವಭಾವಿಗಳೂ ಅತ್ಯಾಚಾರಿಗಳೂ ಆಗಿರುವುದರಿಂದಲೇ ಅವರ ಸಂತಾನವು ಕೂಡ ಅದೇ ರೀತಿಯಾಗುತ್ತದೆ. ಈ ಎಲ್ಲಾ ಕಾರಣಗಳಿಂದ ವಿವಾಹವು ಸ್ತ್ರೀಪುರುಷರಿಬ್ಬರ ಸಂಪೂರ್ಣ ಸಮ್ಮತಿ ಮತ್ತು ಪ್ರಸನ್ನತೆಯಿಂದಲೇ ಆಗತಕ್ಕದ್ದು.

ಇನ್ನು ಎರಡನೆಯ ಪ್ರಶ್ನೆಯ ಕುರಿತು ವಿವೇಚಿಸೋಣ. ಗೃಹಸ್ಥಾಶ್ರಮದಲ್ಲಿ ಒಬ್ಬರ ಮೇಲೆ ಇನ್ನೊಬ್ಬರಿಗೆ ಸಮಾನಾಧಿಕಾರ ಇರುವುದೋ ಎಂಬ ಕುರಿತು ಭಿನ್ನಭಿನ್ನ ಸಂಪ್ರದಾಯದವರಲ್ಲಿ ಬಹುವಿಧದ ಮತಭೇದಗಳಿವೆ. ಅಶಿಕ್ಷಿತ ಜಾತಿಗಳಲ್ಲಿ ಸ್ತ್ರೀಯು ಸದಾ ಸಮಯ ಪುರುಷನ ಪದತಲದ ದಾಸಿ ಎಂಬದಾಗಿ ಪರಿಗಣಿಸಲ್ಪಟ್ಟಿರು

ವಳು. ಈ ಕುರಿತು ಕೆಲವು ಉದಾಹರಣೆಗಳನ್ನು ಮೊದಲೇ ಕೊಟ್ಟಿರುವೆವು. ಪರಂತು, ಪಾಶ್ಚಾತ್ಯ ಜನಾಂಗಗಳಲ್ಲಿ ಕೆಲವಂಶಗಳಲ್ಲಿ ಇದಕ್ಕಿಂತ ವಿಪರೀತ ಪದ್ಧತಿಗಳಿವೆ. ಆಂಗ್ಲಭಾಷೆಯಲ್ಲಿ ಸ್ತ್ರೀಯನ್ನು ಪುರುಷನ "ಉತ್ತಮಾರ್ಧ" (Better-Half) ಎಂದು ಹೇಳುತ್ತಾರೆ. ಗೃಹಸ್ಥರನ್ನು ಎರಡು ವಿಭಾಗ ಮಾಡಿದರೆ ಸ್ತ್ರೀಯು ಉತ್ಕೃಷ್ಟಾರ್ಧಳಾಗಿ ಪುರುಷನು ನಿಕೃಷ್ಟಾರ್ಧ (Worse-Half) ನಾಗಿ ಉಳಿಯುತ್ತಾನೆ. ಆದುದರಿಂದಲೇ ಯುರೋಪೀಯ ಜನರು ಸ್ತ್ರೀಯರನ್ನು ಬಹಳ ಗೌರವಿಸುತ್ತಾರೆ. ಆದರೆ ಅಲ್ಲಿಯ ಈ ತರಹದ ಬಾಹ್ಯಾಚಾರವನ್ನು ಮಾತ್ರ ನೋಡಿ ಅಲ್ಲಿಯ ಸ್ತ್ರೀಯರು ಪುರುಷರಿಗಿಂತ ಉತ್ತಮರೆಂದು ಹೇಳಲು ಸಾಧ್ಯವಿಲ್ಲ. ಇದರ ಯಥಾರ್ಥವನ್ನು ತಿಳಿಯಬೇಕಾದರೆ "ಇಂಗ್ಲಿಷ್ ಜನಾಂಗದ ಇತಿಹಾಸ"ವನ್ನು ಓದಬೇಕು. ಮೊತ್ತಮೊದಲು ಅಲ್ಲಿಯ ಸ್ತ್ರೀಯರಿಗೆ ಯಾವ ವಿಧದ ಮನ್ನಣೆಯೂ ಇದ್ದಿರಲಿಲ್ಲ. ಅನೇಕ ಮಹಿಳೆಯರು ಬಲಾತ್ಕಾರದಿಂದ ವರಿಸಲ್ಪಡುತ್ತಿದ್ದರು ಮಧ್ಯಕಾಲದ ಐರೋಪ್ಯ ಜನರು ಸ್ತ್ರೀಯರಲ್ಲಿ ಆತ್ಮವಿಲ್ಲೆಂದು ತಿಳಿದುಕೊಂಡಿದ್ದರು. ತದನಂತರ ಮಹಿಳೆಯರು ಪುರುಷರ ದಾಸಿಗಳೆಂಬದಾಗಿ ಭಾವಿಸತೊಡಗಿದರು. ಆಂಗ್ಲಭಾಷೆಯಲ್ಲಿ ವಾಡಿಕೆಯಾಗಿರುವ "ಲೇಡಿ" (Lady) ಶಬ್ದವು ಮೊದಲು ಅಡಿಗೆ ಮಾಡುವ ದಾಸಿಯರಿಗೆ ಉಪಯೋಗಿಸಲ್ಪಡುತ್ತಿತ್ತು. ಆದರೆ ಈಗ ಮಾತ್ರ ಈ ಶಬ್ದವನ್ನು ಸಭ್ಯಮಹಿಳೆಯರಿಗೆ ಉಪಯೋಗಿಸುತ್ತಾರೆ. ಯುರೋಪಿನಲ್ಲಿ ಸುಧಾರಣೆಯ ವಾಯುವು ಬೀಸತೊಡಗಿದಾಗಲೂ ಸ್ತ್ರೀಯರು ಹೀನಗತಿಯಲ್ಲೇ ಬಿದ್ದಿದ್ದರು. ಪುರುಷರು ಎಲ್ಲಾ ತರದ ವಿದ್ಯಾರ್ಜನೆ ಮಾಡುತ್ತಿದ್ದರು. ಮಹಿಳೆಯರು ವಿದ್ಯೆಯಿಂದ ತೀರಾ ವಂಚಿತರಾಗಿದ್ದರು. "ಕ್ರೈಸ್ತ ಧರ್ಮದ ಪ್ರಚಾರವು ಸಹಾ ಸ್ತ್ರೀಯರು ಉತ್ತಮ ಸ್ಥಿತಿಗೆ ಬರುವಂತೆ ಸಹಕಾರಿಯಾಗಲಿಲ್ಲ". ಇದರ ಕಾರಣವೇನೆಂದರೆ ಈ ಧರ್ಮದ ಅಸ್ತಿವಾರವೇ ಪಕ್ಷಪಾತವೆಂಬ ಕ್ಷುದ್ರ ಶಿಲೆಯಿಂದ ಕಟ್ಟಲ್ಪಟ್ಟಿದೆ. ಹವ್ವಳ ಬೋಧನೆಯಿಂದ

ಆದಮನು ಪಾಪಿಯಾದನು. ಸರ್ಪದ ಕುತಂತ್ರದಿಂದ ಹವ್ವಳು ಮೋಸಹೋದಳು. ಬೈಬಲಿನ ತತ್ವದ ಪ್ರಕಾರ ಕ್ರೈಸ್ತರ ದೇವರು ನ್ಯಾಯಕಾರಿಯೂ, ನಿಷ್ಪಕ್ಷಪಾತಿಯೂ, ಪ್ರಾಜ್ಞನೂ (ಆಗು ಹೋಗುವ ವಿಚಾರಗಳನ್ನು ತಿಳಿಯುವವನು) ಆಗಿರುತ್ತಿದ್ದರೆ ಹವ್ವಳನ್ನು ಮೋಸಗೊಳಿಸುವಂತಹ ಸೈತಾನನೆಂಬ ಸರ್ಪವನ್ನು ಉಂಟುಮಾಡುತ್ತಿದ್ದಿಲ್ಲ: ತಾವು ಬತ್ತಲೆಯಾಗಿದ್ದೇವೆ ಎಂಬುದನ್ನೂ ಒಳ್ಳೇದು ಕೆಟ್ಟದ್ದು ಎಂಬುದನ್ನು ತಿಳಿದುಕೊಳ್ಳುವ ಅರಿವನ್ನೂ ಆದಮ ಹವ್ವರು ಗೊತ್ತುಪಡಿಸಿಕೊಳ್ಳಬಾರದೆಂಬ ಉದ್ದೇಶದಿಂದ ಜೀವದ ವೃಕ್ಷದ ಫಲವನ್ನು ತಿನ್ನಬಾರದೆಂಬ ವಿಧಿಯನ್ನು ವಿಧಿಸುತ್ತಿದ್ದಿಲ್ಲ. ಸೈತಾನನ ತಪ್ಪಿಗೆ ಸ್ತ್ರೀಜಾತಿಯನ್ನೇ ಶಪಿಸುವುದು ಕ್ರೈಸ್ತರ ದೇವರಾದ ಯೆಹೋವನ ಯಾವ ತರದ ನ್ಯಾಯವೆಂಬುದನ್ನು ಸುಜ್ಞರು ತಿಳಿದುಕೊಳ್ಳಬಹುದು. ಈ ಕುರಿತು ವಾಚಕರು "The Holv Bible, Ist Timothy Chapter 2 Verses 11—14" ಎಂಬುದನ್ನು ನೋಡಿರಿ. ಒಂದುವೇಳೆ ಹವ್ವಳು ಸರ್ಪದ ಮಾತನ್ನು ಕೇಳದಿರುತ್ತಿದ್ದರೆ ಮತ್ತು ತನ್ನ ನಗ್ನಾವಸ್ಥೆಯ ಅರಿವನ್ನು ತಂದುಕೊಳ್ಳದಿರುತ್ತಿದ್ದರೆ ಆದಮನು ಸಹಾ ಸದಾಸಮಯ ಕ್ರೈಸ್ತರ ಸ್ವರ್ಗವಾದ ಏಡೆನ್‌ತೋಟದಲ್ಲಿರುತ್ತಿದ್ದನು. ಅವನ ಸಂತಾನವು ಕೂಡ ಯೆಹೋವನ ಶಾಪಕ್ಕೆ ಗುರಿಯಾಗುತ್ತಿದ್ದಿಲ್ಲ. ಈ ಸಿದ್ಧಾಂತದ ಪ್ರಭಾವವು ಇಡೀ ಜಗತ್ತಿನ ಮೇಲೆ ಆವರಿಸಿಕೊಂಡಿದೆ. ಅಲ್ಲಿಯ ಸ್ತ್ರೀಯರು ಮಾತ್ರ ತಿರಸ್ಕೃತರಲ್ಲದೆ ಅವರ ಸಂಬಂಧಿಕರು ಕೂಡಾ ಅವಹೇಳನೆಗೆ ಪಾತ್ರರಾಗಿರುತ್ತಾರೆ. ಯಾವನೊಬ್ಬ ಪುರುಷನೂ ತನ್ನ ತಾಯಿಯ ಸಂಪತ್ತಿನ ಉತ್ತರಾಧಿಕಾರಿಯಾಗಲಾರನು ಎಂಬ ಒಂದು ನಿಯಮವು ಮಧ್ಯ ಯುರೋಪಿನಲ್ಲಿತ್ತು. ಈ ನಿಯಮಕ್ಕೆ "Law Selique" ಎಂದು ಹೆಸರು. ಆ ಸಮಯದಲ್ಲಿ ಒಬ್ಬನು ತನ್ನ ತಂದೆಯಿಂದಲೇ ಆದರಿಸಲ್ಪಡುತ್ತಿದ್ದನು ಹೊರತು ತನ್ನ ತಾಯಿಯಿಂದ ಏನೂ

ದೊರೆಯುತ್ತಿದ್ದಿಲ್ಲ. ಇದೇ ಪ್ರಕಾರ ಸ್ತ್ರೀಯೊಡನೆ ಅವಳ ಸಂತಾನವು ಕೂಡ ನಿರಾಧಾರ ವರ್ಗಕ್ಕೆ ತಳ್ಳಲ್ಪಡುತ್ತಿತ್ತು. ಇಂತಹ ವಿಧಾನವು ಇಂಗ್ಲಂಡಿನಲ್ಲಿ ಹದಿನೇಳನೆ ಶತಮಾನದ ವರೆಗೂ ಪಸರಿಸಿಕೊಂಡಿತ್ತು. ಲೇಟಿನ್‌ಭಾಷೆಯು ಪವಿತ್ರ ಭಾಷೆಯಾಗಿರುವ್ರದರಿಂದ ಅದನ್ನು ಮಹಿಳೆಯರು ಯಾರೂ ಓದಕೂಡದೆಂಬ ಅಂಧವಿಶ್ವಾಸವು ಮಹಾಕವಿಯಾದ ಮಿಲ್ಟನ "Milton" ನಲ್ಲಿಯೂ ಇತ್ತು. ಪರಂತು ಆತನು ಕುರುಡನಾಗಿದ್ದ ಕಾರಣ ಆ ಭಾಷೆಯನ್ನು ತನ್ನ ಮಗಳಿಗೆ (ತನ್ನ ಪ್ರಯೋಜನಕ್ಕಾಗಿ) ಓದಲಿಕ್ಕಾಗಿ ಮಾತ್ರ ಕಲಿಸಿದ್ದನು.

ಪ್ರಚಲಿತ ಕಾಲದಲ್ಲಿ ಯೂರೋಪಿನ ಸ್ತ್ರೀಯರಿಗೆ ಬಹಳವಾದ ಮನ್ನಣೆ ದೊರೆಯುತ್ತದೆ. ಆದರೆ ಇದು ಶಾರೀರಿಕ ವಿಷಯಸುಖಾಭಿಲಾಷೆಯ ಪೂರ್ತಿಗೆ ಹೊರತು ಧಾರ್ಮಿಕ, ಸಾಮಾಜಿಕ ಗೌರವದ ವೃದ್ಧಿಯ ಹೇತು ಬಹಳ ವಿರಳ. (ಈ ಕುರಿತು ತಿಳಿಯಬೇಕೆಂದಿದ್ದವರು ಅಲ್ಲಹಾಬಾದಿನ ಪಂಡಿತ ಗಂಗಾಪ್ರಸಾದ ಉಪಾಧ್ಯಾಯರಿಂದ ರಚಿತವಾದ "ಇಂಗ್ಲಿಷ ಜನಾಂಗದ ಇತಿಹಾಸ" ಎಂಬ ಪುಸ್ತಕವನ್ನು ಓದಿರಿ.) ಈ ಉದ್ದೇಶದಿಂದಲೇ ಕ್ರಿಕೆಟ್, ಕುದುರೆಸವಾರಿ ಇತ್ಯಾದಿಗಳಲ್ಲಿ ಲಲನೆಯರಿಗೆ ಮುಂದಾಳುತನ ದೊರೆಯಿತು. ಇಂತಹ ಸಮಾರಂಭಗಳಲ್ಲಿ ಗೆದ್ದವನಿಗೆ ಬಹುಮಾನ ಕೊಡುವ ಸಮಾರೋಹಕ್ಕೆ ಅವನು ಯಾರನ್ನು ಪ್ರೀತಿಸುತ್ತಿರುವನೋ ಅವಳನ್ನೆ ಆ ಸಭೆಗೆ ಅಧ್ಯಕ್ಷಳನ್ನಾಗಿ ಮಾಡುತ್ತಿದ್ದರು ಆಂಗ್ಲೇಯರಲ್ಲಿರುವ ಬಾಹ್ಯ ಉದ್ದೇಶವು ಸ್ತ್ರೀಸ್ವಾತಂತ್ರ್ಯದ ಆದರ್ಶತೆಯಾಗಿರುವುದಾದರೂ ಆಂತರಿಕ ಉದ್ದೇಶವು ಕ್ಷಣಿಕ ಸುಖಪೂರ್ತಿಗಾಗಿರುವುದು. ಇದಕ್ಕೂ ಪಾಶ್ಚಾತ್ಯರಲ್ಲಿ ಅನೇಕ ದೃಷ್ಟಾಂತವಿದೆ. ಅಲ್ಲಿಯವರು ಸಮಾರಂಭಕ್ಕೆ ಆರಿಸುವ ಅಧ್ಯಕ್ಷಳಿಗೆ ಸೌಂದರ್ಯದ ರಾಣಿ 'Queen of Beauty' ಎಂದು ಕರೆಯುತ್ತಿದ್ದರು. ಅಲ್ಲಿಯ ಸ್ತ್ರೀಯರು ತಮ್ಮ ರೂಪಲಾವಣ್ಯದಿಂದ ಯಾರಾದರೊಬ್ಬನನ್ನು ಮೆಚ್ಚಿಸಿ ಅವನನ್ನು ಇನ್ನೊಬ್ಬನೊಡನೆ ಕ್ರಿಕೆಟ್ ಇತ್ಯಾದಿ ದ್ವಂದ್ವಕ್ಕೆ ಪ್ರೇರೇಪಿಸಿ ಅವನಿಂದ ಸಾಗದ

ಕೆಲಸಕ್ಕೂ ಆತನನ್ನು ಮುಂದೆ ದೂಡುತ್ತಿದ್ದರು. ಇವರಿಂದ ಮೋಹಿತ ನಾದವನು ತನ್ನ ಮೋಹಾಭಿಲಾಷೆಯ ನಿವೃತ್ತಿಗಾಗಿ ಆಕೆ ಹೇಳಿದಂತೆ ಕುಣಿಯುತ್ತಿರುವನು. ವರ್ತಮಾನಕಾಲದಲ್ಲಿ ಕೂಡಾ ಅಲ್ಲಿಯ ಸ್ತ್ರೀಯರಿಗೆ ಧಾರ್ಮಿಕ ರೀತಿಯಲ್ಲಿ ಉತ್ತಮಸ್ಥಾನವಿಲ್ಲ. ಇದು ಯುರೋಪಿನ ಗತಿ.

ಇನ್ನು ಭಾರತವರ್ಷದ ಪರಿಸ್ಥಿತಿಯನ್ನು ನೋಡೋಣ. ಇಲ್ಲಿಯ ಮಧ್ಯಕಾಲೀನ ಇತಿಹಾಸವು ಕೂಡಾ ಅಲ್ಲಿಗಿಂತ ಒಳ್ಳೆಯ ರೀತಿಯಲ್ಲಿ ಇರಲಿಲ್ಲ. ಇಲ್ಲಿಯ ಸ್ತ್ರೀಯು ಸಹ ಪರರ ಮನೆಯ ಕಸ ಉಡುಗು ವವಳು, ಪುರುಷನ ಸೇವಕಳು ಇತ್ಯಾದಿ ನಿಕೃಷ್ಟಪದವಿಯಲ್ಲಿರುತ್ತಿದ್ದ ಳಲ್ಲದೆ ಬಹು ವಿಧದ ಅತ್ಯಾಚಾರವು ಅವಳ ಮೇಲೆ ಆಗುತಿತ್ತು. ಒಂದು ಪಂಗಡದವರು ಸ್ತ್ರೀಯರನ್ನು ಬಟ್ಟೆಯ ಮುಸುಕಿನಲ್ಲಿ ಇಡ ತೊಡಗಿದರು. ಮತ್ತೆ ಕೆಲವರು ಹೆಣ್ಣು ಶಿಶುವು ಹುಟ್ಟುತ್ತಲೆ ಕೊಂದುಹಾಕಲು ಪ್ರಾರಂಭಿಸಿದರು; ಪರಂತು ಈ ಪದ್ಧತಿಗೆ ಹಿಂದೂ ಸಮಾಜದ ಸಾಮಾಜಿಕ ನಿರ್ಬಲತೆಯೂ, ಧರ್ಮದ ಹೆಸರಲ್ಲಿಟ್ಟ ಅಂಧ ವಿಶ್ವಾಸವೂ ಮುಖ್ಯ ಕಾರಣವಾಗಿದೆ. ಇದರಿಂದಾಗಿ ಇಲ್ಲಿಯ ಮಹಿಳಾ ಸಮಾಜವು ವಿದೇಶೀ ಮತ್ತು ವಿಧರ್ಮಿಯರಿಂದ ಬಹು ವಿಧದ ಯಾತನೆಗಳನ್ನು ಪದೇ ಪದೇ ಸಹಿಸಬೇಕಾಯಿತು. ಇದಕ್ಕಾಗಿ ಬೇರೆ ಉಪಾಯಕಾಣದೆಯೂ, ಹಿಂದೂಸಮಾಜದ ಪ್ರಾಚೀನ ಸಭ್ಯತೆ ಯನ್ನು ಪುನರುಜ್ಜೀವನಗೊಳಿಸದೆ ಹೋದುದರಿಂದ ಸ್ತ್ರೀಯರನ್ನು ಪರದಾ ಪದ್ಧತಿಯಲ್ಲಿಡತೊಡಗಿದರು. ಹಿಂದೂಗಳಲ್ಲಿದ್ದ ಬಾಹುಬಲದ ನ್ಯೂನತೆಯಿಂದಾಗಿ ಸ್ತ್ರೀಯರ ತಾತ್ಕಾಲಿಕ ಸಂರಕ್ಷಣೆಗಾಗಿ ಮಾಡಿದ ಇದೊಂದು ಪದ್ಧತಿಯು ಕೊನೆಗೆ ಒಂದು ವಿಶೇಷ ತರದ ಅಂಧರೂಢಿ ಯಲ್ಲಿ ಬಿದ್ದು ಭಾರತೀಯ ಮಹಿಳಾ ಸಮಾಜವನ್ನು ಅತ್ಯಂತ ಅಧಃ ಪತನದ ಕಡೆಗೆ ಒಯ್ದಿತು. ಪರಂತು ಪ್ರಾಚೀನಕಾಲದ ಭಾರತೀಯ ಮಹಿಳೆಯರು ಯುರೋಪಿನವರ ಹಾಗೆ ಪದದಲಿತರಾಗಿದ್ದಿಲ್ಲ. ಸ್ತ್ರೀ

ಪುರುಷರಿಗೆ ಸಮಾನಾಧಿಕಾರವೂ ಸಮಾನಶಿಕ್ಷಣವೂ ದೊರೆಯು ತ್ತಿತ್ತು. ಹೆಣ್ಣುಶಿಶುಗಳು ಹುಟ್ಟಿದಾಗ ಅತ್ಯಾನಂದೋತ್ಸವಗಳು ಜರಗುತ್ತಿದ್ದವು. ಬಾಲಕರಂತೆ ಬಾಲಕಿಯರಿಗೂ ಗುರುಕುಲವಾಸವು ದೊರೆಯುತ್ತಿತ್ತು. ಈ ಕುರಿತು ಪರಮಪವಿತ್ರವಾದ ವೇದವೇ ಪ್ರಬಲ ವಾದ ಪ್ರಮಾಣವನ್ನು ಎಲ್ಲರ ಮುಂದಿಟ್ಟಿದೆ.

ಬ್ರಹ್ಮಚರ್ಯೇಣ ಕನ್ಯಾ ಯುವಾನಂ ವಿಂದತೇ ಪತಿಮ್ ॥

ಅಥರ್ವ ಕಾಂ. 11, ಸೂ. 5, ಮಂ. 18.

"ಬ್ರಹ್ಮಚರ್ಯವ್ರತವನ್ನು ಸಂಪೂರ್ಣ ಮಾಡಿದ ಅನಂತರ ಕನ್ಯೆಯು ಯುವಾವಸ್ಥೆಯ ಪತಿಯನ್ನು ಹೊಂದಬೇಕು."

ಇಲ್ಲಿ ಬ್ರಹ್ಮಚರ್ಯ ಎಂದರೆ ಬರೀ ಪುರುಷಸಂಯೋಗದಿಂದ ರಹಿತವಾಗಿರುವುದಲ್ಲ ಇದರಲ್ಲಿ ಇಂದ್ರಿಯನಿಗ್ರಹ, ವೇದಾಧ್ಯಯನ, ಪರಮಾತ್ಮನ ಸಂಪೂರ್ಣ ಜ್ಞಾನದ ಪ್ರಾಪ್ತಿ ಎಲ್ಲವೂ ಸೇರಿಕೊಂಡಿವೆ. ಇಂದ್ರಿಯನಿಗ್ರಹವು ಬ್ರಹ್ಮಚರ್ಯೆಯ ಅಂಗವಾಗಿರುತ್ತದೆ ಬರೇ ಜಿತೇಂದ್ರಿಯ ವ್ರತದಿಂದ ಬ್ರಹ್ಮಚರ್ಯವ್ರತವು ಪೂರ್ತಿಯಾಗಲಾರದು. ಬ್ರಹ್ಮಚರ್ಯವ್ರತ ಪಾಲನೆಯ ಅನಂತರ ವಿವಾಹದ ಸಮಯದಲ್ಲಿ ಸಹ ಸ್ತ್ರೀಯರಿಗೆ ಸಂಪೂರ್ಣ ಸ್ವಾತಂತ್ರ್ಯವಿತ್ತು. ಪ್ರಾಚೀನಕಾಲ ಗಳಲ್ಲಿ ನಡೆಯುತ್ತಿದ್ದ ಸ್ವಯಂವರ ವಿವಾಹಗಳೇ ಇದಕ್ಕೆ ಸಾಕಷ್ಟು ಪ್ರಮಾಣಗಳಾಗಿವೆ. ಇದು ಹೊರತು ಭಾರತವರ್ಷದಲ್ಲಿ ಹಿಂದೂ ಗಳಲ್ಲಿರುವ ವೈದಿಕವಿವಾಹ ಸಂಸ್ಕಾರ ಪದ್ಧತಿಯೂ ಅದರಲ್ಲಡಕ ವಾಗಿರುವ ವಿಧಿಗಳೂ ನಮ್ಮ ಮಹಿಳೆಯರ ಗೌರವ ಅಥವಾ ಸ್ವತಂತ್ರತೆಯನ್ನು ಪ್ರಕಾಶಪಡಿಸುತ್ತವೆ. ಆ ಕಾಲದಲ್ಲಿ ವಿವಾಹವು ಲಜ್ಜಾಜನಕವಾಗಿದ್ದಿಲ್ಲ; ಮಾನವ ಜಾತಿಯ ಮತ್ತು ಸಮಾಜದ ಅಭಿವೃದ್ಧಿಯೆ ಅದರ ನಿಜೋದ್ದೇಶವಾಗಿತ್ತು ಯಾವ ಕಾರ್ಯದಲ್ಲಿ ಜನಾಂಗದ ಉನ್ನತಿಗೆ ಬೇಕಾದ ಸಮಸ್ತ ವಿಧಿಗಳೂ ಅಂತರ್ಗತವಾಗಿ ವೆಯೋ ಅಂತಹ ಕಾರ್ಯವು ಲಜ್ಜಾಸ್ಪದವೆಂದು ಹೇಗಾಗುವುದು? ಆದುದರಿಂದಲೇ ಹದಿನಾರು ಸಂಸ್ಕಾರಗಳಲ್ಲಿ ವಿವಾಹವು ಒಂದು

ಪವಿತ್ರಸಂಸ್ಕಾರವೆನ್ನಲ್ಪಡುತ್ತಿತ್ತು. ಆಗಿನ ವಿವಾಹ ಸಂಸ್ಕಾರಗಳಲ್ಲಿ ಉತ್ತಮ ಸಂತಾನೋತ್ಪತ್ತಿ, ಆದರ್ಶ ಗೃಹಸ್ಥಜೀವನ ಮುಂತಾದ ಮಹತ್ವಗಳಿಂದ ತುಂಬಿದ್ದ ಆ ಸಂಸ್ಕಾರದ ಮಂತ್ರಗಳನ್ನು ಸ್ತ್ರೀಯರೇ ನಿಸ್ಸಂಕೋಚವಾಗಿಯೂ ಸ್ಪಷ್ಟವಾಗಿಯೂ ಉಚ್ಚರಿಸುತ್ತಿದ್ದರು. ಆದರೆ ಈಗಿನಕಾಲದಲ್ಲಿ ಜರಗುವ ವಿವಾಹಸಂಸ್ಕಾರಗಳಲ್ಲಿ ವಧೂವರರು ಹೇಳಬೇಕಾಗಿದ್ದ ಎಲ್ಲಾ ಮಂತ್ರಗಳನ್ನೂ ದಕ್ಷಿಣೆಗೆ ಕೈ ನೀಡುವ ಪುರೋಹಿತರೇ ಅರ್ಧಕ್ಕರ್ಧ ಉಚ್ಚರಿಸಿ ವಧೂವರರಿಂದ "ಮಮ" ಎಂದು ಹೇಳಿಸಿಬಿಡುತ್ತಾರೆ. ಪಾಪ! ಈಗಿನ ವಧೂವರರಿಗೆ ವಿವಾಹವೆಂದರೇನೆಂಬುವುದು ಗೊತ್ತಿಲ್ಲದ ಮೇಲೆ ಅದರ ಸಂಸ್ಕಾರದ ಮಂತ್ರಗಳನ್ನು ಹೇಳುವುದು ಹೇಗೆ ತಾನೆ? ಅಷ್ಟರ ಮಟ್ಟಿನ ಅವಿದ್ಯೆಯು ಹಿಂದೂಸಮಾಜದಲ್ಲಿ ಬೇರೂರಿ ಹೋಗಿದೆ.

ಪ್ರಾಚೀನ ಭಾರತವು ಸ್ತ್ರೀಯರನ್ನು ಪುರುಷರ ಅರ್ಧಾಂಗಿನಿಯರೆಂದು ಕರೆಯುತ್ತಿತ್ತು. ಅಂದರೆ ಗೃಹಸ್ಥಾಶ್ರಮವೆಂಬ ರಥಕ್ಕೆ ಸ್ತ್ರೀ ಪುರುಷರು ಎರಡು ಗಾಲಿಗಳೆಂದಿದ್ದರು.* ಆ ಕಾಲದಲ್ಲಿ ಸ್ತ್ರೀಯರನ್ನು ನೀಚದೃಷ್ಟಿಯಿಂದ ಯಾರೂ ನೋಡುತ್ತಿದ್ದಿಲ್ಲ. ಅವರಿಗೆ ಸದಾ ಸಮಯ ಎಲ್ಲಾ ಕಾರ್ಯಗಳಲ್ಲಿ ಸಮಾನತೆ ದೊರೆಯುತ್ತಿತ್ತು. ಪ್ರತಿಯೊಂದು ಯಜ್ಞದಲ್ಲಿ ಪತಿಯೊಂದಿಗೆ ಸ್ತ್ರೀಯು ಭಾಗಿಯಾಗುತ್ತಿದ್ದಳು. ಅವಳು ಸೇರದೆ ಯಾವ ಯಜ್ಞವೂ ಗೃಹಸ್ಥಾಶ್ರಮದ ಯಾವ ಕಾರ್ಯವೂ ಆಗುತ್ತಿದ್ದಿಲ್ಲ.

**"ಪ್ರೇಷಾ ಯಜ್ಞೇ ನಿವಿದಃ ಸ್ವಾಹಾಶಿಷ್ಟಾಃ ಪತ್ನೀ ಭಿರ್ವಹತೇಹ ಯುಕ್ತಾಃ।"** **ಅಥರ್ವ, ಕಾಂ. 5, ಸೂ. 26, ಮಂ. 4.**

ಸ್ತ್ರೀಯ ಜನ್ಮವು ಪುರುಷನಿಂದಾಯಿತೆಂದೂ, ಆದಮನ ಪಕ್ಕೆಲುಬಿನಿಂದ ಆಯಿತೆಂದೂ ಪ್ರಾಚೀನ ಭಾರತೀಯರು ನಂಬುತ್ತಿದ್ದಿಲ್ಲ. ಯಾಕಂದರೆ ಇದು ಸೃಷ್ಟಿನಿಯಮ ಮತ್ತು ಯುಕ್ತಿಸಂಗತವಾದ ಮಾತಲ್ಲ. ಈ ಕುರಿತು ಪಾಶ್ಚಾತ್ಯ ವಿದನ್ಮಣಿಗಳಾದ ಮೋಕ್ಸ್‌ಮುಲ್ಲರರು 'Introduction to the Science of Religion' ಎಂಬ ಪುಸ್ತ

ಕದ 46ನೇ ಪುಟದಲ್ಲಿ 'Bone, seemed a telling expression for what we should call the innermost essence In the ancient hymns of the Veda too, a poet asks 'Who has seen the first-born, when, he who had on bones, i. e, no form, bore him that has bones, i e, when that which was formless assumed form or it may be, when that which had no essence, received on essence' ಎಂದು ಬರೆದಿರುವರು. ಆದಿ ಮನುಷ್ಯರ ಉತ್ಪತ್ತಿಯ ವಿಷಯವನ್ನು ಮೆಕ್ಸ್‌ಮುಲ್ಲರರ ಮೇಲಿನ ಅಭಿಪ್ರಾಯದಿಂದಲೇ ನಾವು ತಿಳಿದುಕೊಳ್ಳಬಹುದು. ಅಂತೂ ಸ್ತ್ರೀಪುರುಷರಿಬ್ಬರು ಸ್ವತಂತ್ರರೀತಿಯಿಂದ ಹುಟ್ಟಿದರೆಂಬುವುದೂ, ಸಂತಾನವೃದ್ಧಿಗೆ ಇವರೀರ್ವರೂ ಅತ್ಯಾವಶ್ಯಕವೆಂಬುವುದೂ ಮೇಲಿನ ಎಲ್ಲಾ ಅಭಿಪ್ರಾಯಗಳಿಂದ ಸಿದ್ಧವಾಗುತ್ತಿದೆ. ಮಧ್ಯಕಾಲೀನ ಭಾರತವರ್ಷದಲ್ಲಿ ಸ್ತ್ರೀಯರು ಪುರುಷರ ಭೋಗವಿಲಾಸದ ಒಂದು ಸಾಧನಮಾತ್ರರೆಂಬ ವಾಡಿಕೆಯಿತ್ತು. ಪ್ರಸಿದ್ಧ ಹಿಂದೀ ಕವಿಗಳಾದ ತುಲಸೀದಾಸರು ಸಹ ಸ್ತ್ರೀಯರನ್ನು ಭೋಗವಿಲಾಸದ ಒಂದು ಸಾಧನೆಯೆಂಬದಾಗಿ ಅವರು ಬರೆದಿರುವ ರಾಮಾಯಣದಲ್ಲಿ ಅಯೋಧ್ಯಾಕಾಂಡ 215ನೇ ಪದ್ಯದ ನಾಲ್ಕನೆ ಚರಣದಲ್ಲಿ ವರ್ಣಿಸಿರುವರು. ಇಂತಹ ಅಭಿಪ್ರಾಯವೂ ಇದರಿಂದಾಗುವ ಪರಿಣಾಮವೂ, ನಾವು ಮೊದಲು ವಿವರಿಸಿದಂತೆ ಕಾಡುಸಿವಾಸಿಗಳಲ್ಲಿರುವಂಥ ಅಸಭ್ಯಾಚರಣೆಯನ್ನೂ ಅತ್ಯಾಚಾರವನ್ನೂ ಮಹಿಳೆಯರ ಮೇಲೆ ಪ್ರಯೋಗಿಸುವುದು; ಸ್ತ್ರೀಪುರುಷರು ಸರ್ವವಿಧದಲ್ಲಿ ಪರಸ್ಪರ ಸಮಾನಾಧಿಕಾರಿಗಳಾಗಿಯೇ ಇರಬೇಕು. ಆವಳು ಆವನ ಪದದಲಿತ ದಾಸಿಯಾಗಿದ್ದು ಅವನಿಂದ ಅತ್ಯಾಚಾರವನ್ನು ಸಹಿಸಿಕೊಳ್ಳುತ್ತಿರುವುದು ಎಷ್ಟಕ್ಕೂ ಸರಿಯಲ್ಲ. ಈ ತರದ ಸ್ವೇಚ್ಛಾಧಿಕಾರವು ಪುರುಷನಿಗಿಲ್ಲ. ಸ್ತ್ರೀಪುರುಷರು ಒಬ್ಬರಿನ್ನೊಬ್ಬರ ಅಧೀನವಿರದೆ ಪರಸ್ಪರ ಸಮಾನಾಧಿಕಾರದಿಂದ ಕೂಡಿಕೊಂಡು ಉತ್ತಮೋತ್ತಮ ನಿಯಮಗಳಿಂದ ಕೂಡಿದ ಸಮಾಜದ ಅಧೀನದಲ್ಲಿರುವುದೇ ಲೇಸು. ಇನ್ನುಳಿದ ನಾಲ್ಕು ಪ್ರಶ್ನೆಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸುವೆವು.

---

## ೪. ಸ್ತ್ರೀಪುರುಷರ ಕರ್ತವ್ಯ.

ಈ ಅಧ್ಯಾಯದಲ್ಲಿ ಮೂರು ಮತ್ತು ನಾಲ್ಕನೆಯ ಪ್ರಶ್ನೆಯ ಕುರಿತು ವಿವರಿಸುವೆವು. ಒಬ್ಬಳು ಜೀವಂತಳಾಗಿರುವಲ್ಲಿ ಪತಿಯು ಇನ್ನೊಬ್ಬಳನ್ನು ವಿವಾಹಮಾಡಿಕೊಳ್ಳಬಹುದೋ? ಅಥವಾ ಒಬ್ಬನು ಒಂದೇ ಕಾಲದಲ್ಲಿ ಅನೇಕ ಸ್ತ್ರೀಯರೊಡನೆ ವಿವಾಹಮಾಡಿಕೊಳ್ಳಬಹುದೋ? ಇನ್ನೊಂದು ರೀತಿಯಲ್ಲಿ ಕೇಳುವುದಾದರೆ ಪತ್ನಿಯ ಮರಣಾನಂತರ ಪತಿಯು ಪುನರ್ವಿವಾಹ ಮಾಡಿಕೊಳ್ಳಬಹುದೋ? ಈ ಪ್ರಶ್ನೆಗಳಿಗೆ ಎರಡು ವಿಧದಲ್ಲಿ ಉತ್ತರಿಸಬಹುದು. ಯುಕ್ತಿವಾದ ಮತ್ತು ಶಾಸ್ತ್ರೀಯ ಸಿದ್ಧಾಂತ ಇದರ ಕುರಿತು ಒಂದೊಂದು ಜಾತಿಯಲ್ಲಿ ಒಂದೊಂದು ವಿಧದ ಪದ್ಧತಿಯಿದೆ. ಕ್ರೈಸ್ತರಲ್ಲಿ ಒಬ್ಬ ಪುರುಷನು ಒಂದುಸಾರಿ ಒಬ್ಬಳನ್ನೇ ವಿವಾಹಮಾಡಿಕೊಳ್ಳುವ ನಿಯಮವಿದೆ. ಆಕೆ ಜೀವಿಸಿರುತ್ತಾ ಇನ್ನೊಬ್ಬಳನ್ನು ವರಿಸಲಾರನು. ಮಹಮ್ಮದೀಯ ಮತದನುಸಾರ ಉತ್ತಮರಲ್ಲಿ ಉತ್ತಮರಾದವರು ಒಬ್ಬೊಬ್ಬರು ನಾಲ್ಕು ಮಂದಿ ಸ್ತ್ರೀಯರನ್ನು ವಿವಾಹಮಾಡಿಕೊಳ್ಳುವ ಅಧಿಕಾರವಿದೆ. ಇದು ಹೊರತು ಅನ್ಯಸ್ತ್ರೀಯೊಡನೆ ವಿವಾಹವಾಗದೇನೆ ಸಂಬಂಧ ಬೆಳೆಸಿಕೊಂಡರೂ ಅನ್ಯಾಯವಾಗುವುದಿಲ್ಲ. ಬರ್ಮಾದೇಶದ ಪುರುಷರಲ್ಲಿಯೂ ಬಹು ವಿವಾಹಪದ್ಧತಿ ಇದೆ. ಪರ್ವತಪ್ರಾಂತ್ಯದ ಜನರು ಒಬ್ಬನಿಗೆ ಬಹುಮಂದಿ ಹೆಂಡಿರು ಅತ್ಯಾವಶ್ಯಕವೆಂದು ನಿಶ್ಚಯಿಸಿಕೊಂಡಿರುವರು. ಅಲ್ಲಿಯವರು ಸ್ತ್ರೀಯರ ಸಂಪಾದನೆಯಿಂದಲೇ ತಮ್ಮ ಹೊಟ್ಟೆ ಹೊರಕೊಳ್ಳುತ್ತಿದ್ದಾರೆ. ಹಿಂದೂ ಸಮಾಜದಲ್ಲಿ ಬಹು ವಿವಾಹದ ವಿಧಿಯು ಇಲ್ಲ. ಪರಂತು ಯಾರಾದರೊಬ್ಬನು ತನ್ನಾಕೆ ಇರುತ್ತಾ ಇನ್ನೊಬ್ಬಳನ್ನು ವರಿಸಿಕೊಂಡರೆ ಅದು ಅಧರ್ಮವೆಂದು ಹೇಳುವವರು ಪ್ರಚಲಿತಕಾಲದಲ್ಲಿ ಯಾರೂ ಇಲ್ಲ. ಸರ್ವಸಾಧಾರಣವಾಗಿ ಇಲ್ಲಿಯ ರಾಜಮಹಾರಾಜರುಗಳು ಮಾಡಿಕೊಳ್ಳುವಂತಹ ಲೆಕ್ಕವಿಲ್ಲದ ಬಹಿರಂಗ ಮದುವೆಯನ್ನೂ ಮನ

ಬಂದಂತೆ ಮಾಡಿಕೊಳ್ಳುವ ಅಂತರಂಗ ಮದುವೆಯನ್ನೂ ಕೇಳುವವರೇ ಇಲ್ಲ. ಬಹುವಿವಾಹ ಪದ್ಧತಿಯು ಗೌರವಾರ್ಹವೆಂಬ ಒಂದು ವಿಚಿತ್ರ ತರದ ಅಭಿಪ್ರಾಯವು ಬಂಗಾಲದ ಕುಲೀನ ಬ್ರಾಹ್ಮಣರಲ್ಲಿದೆ. ಅಲ್ಲಿ ಒಬ್ಬ ಪುರುಷನು ತನ್ನ ಜೀವನದಲ್ಲಿ ಅನೇಕ ಸ್ತ್ರೀಯರಿಗೆ ಕೈಕೊಡು ತ್ತಾನೆ. ಅವರೆಲ್ಲರೂ ಗಂಡನ ಮನೆಗೆ ಹೋಗದೆ ಅವರವರ ತವರುಮನೆ ಯಲ್ಲಿಯೇ ಇರುತ್ತಾರೆ ಎಲ್ಲರೂ ಗಂಡನ ಮನೆಯನ್ನು ಸೇರಿದರೆ ಅಲ್ಲಿದ್ದವರಿಗೆ ಕುಳಿತುಕೊಳ್ಳಲು ಮನೆಯೇ ಬೇರೆ ಬೇಕು. ಬಹು ಪತ್ನಿಯರಿರುವಲ್ಲಿ ಗಂಡಹೆಂಡಿರೊಳಗೆ ಯಾವ ತರದ ವ್ಯವಹಾರಗಳು ನಡೆಯುವವೆಂಬುದನ್ನು ವಾಚಕರೇ ತಿಳಿದುಕೊಳ್ಳಲಿ. ಅನೇಕ ಸ್ತ್ರೀಯರಿಗೆ ತಮ್ಮ ವಿವಾಹದ ಅನಂತರ ಪತಿಯ ಮುಖಸಂದರ್ಶನವೇ ದೊರೆಯುವುದಿಲ್ಲ ಕಾರಣವೇನೆಂದರೆ ಆತನು ಇತರರೊಡನೆ ಮದುವೆ ಯಾಗುತ್ತಾ ವರದಕ್ಷಿಣೆಯ ಮೂಲಕ ಧನಸಂಗ್ರಹಮಾಡುವುದರಲ್ಲೇ ಮಗ್ನನಾಗಿರುತ್ತಾನೆ.

ಬಹುಸ್ತ್ರೀಯರನ್ನು ವಿವಾಹ ಮಾಡಿಕೊಳ್ಳಬಹುದೆಂದೂ ಪುರು ಷನು ಅನೇಕ ಸ್ತ್ರೀಯರಲ್ಲಿ ಗರ್ಭಾದಾನವನ್ನು ಮಾಡಬಲ್ಲನು. ಪರಂತು ಸ್ತ್ರೀಯು ಗರ್ಭವತಿಯಾದ ಮೇಲೆ ಪ್ರಸವಿಸುವ ವರೆಗೆ ಇನ್ನೊಮ್ಮೆ ವೀರ್ಯಧಾರಣೆ ಮಾಡಲಾರಳೆಂದೂ ಅನೇಕರ ಅಭಿ ಪ್ರಾಯ. ಇಂತಹ ವಿಚಾರದವರು ಗೃಹಸ್ಥ ಧರ್ಮದಲ್ಲಿ ನಿಜವಾದ ವ್ಯವಹಾರವು ಹೇಗಿರಬೇಕಂಬುದನ್ನು ಏನೂ ತಿಳಿದುಕೊಂಡಿಲ್ಲ. ಸ್ತ್ರೀಪುರುಷರೆಂದರೆ ಮಕ್ಕಳನ್ನು ಹುಟ್ಟಿಸುವ ಒಂದು ಯಂತ್ರವೆಂಬು ದಾಗಿ ಮಾತ್ರ ತಿಳಿದುಕೊಂಡಿರುವರು. ಇದು ಪಶುಸ್ವಭಾವಕ್ಕೆ ಸಮಾನವಾಗಿರುವುದು. ಒಂದು ಗಂಡುಪಶುವು ತನ್ನ ಜಾತಿಯ ಹೆಣ್ಣುಪಶುವಿನೊಡನೆ ಸಂಭೋಗದ ಸಂಬಂಧವನ್ನು ಮಾತ್ರ ಇಟ್ಟು ಕೊಂಡಿರುತ್ತದೆ. ಹೆಣ್ಣುಪಶುವು ಗರ್ಭಧರಿಸಿದ ಮೇಲೆ ಹೆರುವ ವರೆಗೆ ಸಂಸರ್ಗಮಾಡುವುದಿಲ್ಲ. ಆದರೆ ಅದರ ಜತೆಯಲ್ಲಿದ್ದ ಗಂಡುಪಶುವು ಇನ್ನೊಂದರೊಡನೆ ಸಂಭೋಗ ಮಾಡುತ್ತದೆ. ಮನುಷ್ಯರಾದ ನಾವು

ಸಹ ಈ ವ್ಯವಹಾರವನ್ನೇ ಆದರ್ಶವೆಂದು ಒಪ್ಪುವುದಾದರೆ ಒಬ್ಬ ಪುರುಷನಿಗೆ ಮುನ್ನೂರ ಅರುವತ್ತು ಮಂದಿ ಸ್ತ್ರೀಯರನ್ನು ವಿವಾಹ ಮಾಡಿಕೊಡಬೇಕಾಗುವುದು. ಇದರಿಂದ ಆತನು ಪ್ರತಿದಿನ ವೀರ್ಯ ದಾನಮಾಡಿ ಮಹಾ ಪುಣ್ಯಶಾಲಿಯಾಗಬಹುದು. ಆದರೆ ಮಾನವ ಜನ್ಮವು ಈ ಉದ್ದೇಶಕ್ಕಾಗಿ ದೊರೆಯುವುದಿಲ್ಲ; ಮತ್ತು ಈ ರೀತಿ ಮಾಡಲಿಕ್ಕೆ ಸಾಧ್ಯವೂ ಇಲ್ಲ.

ವೀರ್ಯದಿಂದ ಮುಖ್ಯವಾಗಿ ಎರಡು ವಿಧದ ಪ್ರಯೋಜನ ಗಳಿವೆ. ಸಂತಾನೋತ್ಪತ್ತಿ ಮತ್ತು ಬುದ್ಧಿಶಕ್ತಿಯ ಜೋಪಾಸನೆ. ಸಂತಾನೋತ್ಪತ್ತಿಯಲ್ಲಿ ವೀರ್ಯದ ಎಷ್ಟಂಶವು ವ್ಯಯವಾಗುತ್ತದೋ ಅಷ್ಟೇ ಅಂಶದಲ್ಲಿ ಬುದ್ಧಿಶಕ್ತಿಯು ಕ್ಷೀಣಿಸುತ್ತದೆ. ಆದುದರಿಂದಲೇ ಮೇರೆತಪ್ಪಿ ಸ್ತ್ರೀಪುರುಷರು ಸಂಸರ್ಗ ಮಾಡಕೂಡದೆಂಬ ನಿಯಮ ವನ್ನು ಪ್ರಾಚೀನ ಕಾಲದವರೇ ನಿರ್ಧರಿಸಿರುವರು. ಇಂತಹ ನಿಯಮ ವನ್ನು ಮೀರಿ ಸ್ವೇಚ್ಛಾಪ್ರವರ್ತಿಯಾಗಿ ಸಂಸರ್ಗ ಮಾಡುವವರು ತಮ್ಮ ಬುದ್ಧಿ ಬಲವನ್ನು ಕೆಡಿಸಿಕೊಳ್ಳುತ್ತಾರಲ್ಲದೆ ಅಧಿಕತರವಾಗಿ ಸಂತಾನ ಹೀನರಾಗುತ್ತಾರೆ. ಅಳಿದುಳಿದ ಒಂದೆರಡು ಮಕ್ಕಳು ಕೂಡಾ ಗಾಳಿಯ ಸ್ಪರ್ಶದಿಂದಲೇ ಅಲುಗಾಡುವಷ್ಟು ನಿರ್ಬಲಾವಸ್ಥೆಯಲ್ಲಿರು ವರು. ಅತ್ಯಂತ ದುರ್ಬಲ ಶರೀರದಿಂದ ಹೊರಡುವ ವೀರ್ಯವು ನಿರರ್ಥಕವಾಗಿರುತ್ತದೆ. ಸಂತಾನೋತ್ಪತ್ತಿ ಮತ್ತು ಸ್ತ್ರೀಸಂಸರ್ಗಕ್ಕೂ ಇಂದ್ರಿಯ ನಿಗ್ರಹದ ಅಭ್ಯಾಸವು ಅತ್ಯಾವಶ್ಯಕ. ಯಾವ ಪುರುಷನು ಅನುದಿನವೂ ವಿಷಯಸುಖವನ್ನು ಇಚ್ಛಿಸುತ್ತಾನೋ ಅವನು ನಿತ್ಯ ಸಂಸರ್ಗಮಾಡಲು ತೀರಾ ಅಸಮರ್ಥನಿರುತ್ತಾನೆ. ಕಾಮಚೇಷ್ಟೆ ಯನ್ನು ಸ್ತ್ರಮಿತ ರೀತಿಯಲ್ಲಿಡುವುದೇ ದಂಪತಿಗಳಾಚರಿಸತಕ್ಕ ಇಂದ್ರಿಯ ನಿಗ್ರಹ. ಯಾವ ದೇಶದ ಜನರು ಬಹು ಸ್ತ್ರೀಯರನ್ನು ವಿವಾಹಮಾಡಿಕೊಳ್ಳುತ್ತಾರೋ ಆ ದೇಶದ ಜನಸಂಖ್ಯೆಯು ಪ್ರತಿ ವರ್ಷ ಕಡಿಮೆಯಾಗುವುದಲ್ಲದೆ ವೃದ್ಧಿಯಾಗುವುದಿಲ್ಲ. ಇದುಹೊರತು ಪುರುಷರ ಬಹುವಿವಾಹಕ್ಕೆ ಬೇಕಾಗಿ ಪುರುಷರಿಗಿಂತ ಸ್ತ್ರೀಯರನ್ನೇ ಪರಮಾತ್ಮನು ಹೆಚ್ಚು ನಿರ್ಮಿಸುವುದಿಲ್ಲ.

ಪ್ರೇಮವೇ ಗೃಹಸ್ಥಾಶ್ರಮದ ಆಧಾರಸ್ತಂಭವಾಗಿರುತ್ತದೆ. ಕಾಗದಗಳನ್ನು ಒಂದಕ್ಕೊಂದು ಗಟ್ಟಿಯಾಗಿ ಅಂಟಿಸಬೇಕಾದರೆ ಪ್ರಬಲವಾದ ಒಂದು ಅಂಟುಪದಾರ್ಥವು ಅತ್ಯಗತ್ಯ. ಇದೇ ಪ್ರಕಾರ ಸ್ತ್ರೀಪುರುಷರ ಸ್ಥಾಯಿಸಂಬಂಧ ಮತ್ತು ಯುಕ್ತಸಂಭೋಗಕ್ಕೆ ವಾಸ್ತವಿಕಪ್ರೇಮವು ಅತ್ಯಾವಶ್ಯಕ. ಇಂತಹ ದಾಂಪತ್ಯಪ್ರೇಮವು ಒಬ್ಬ ಸ್ತ್ರೀ ಮತ್ತು ಒಬ್ಬ ಪುರುಷನಲ್ಲಿಯೇ ನಿಲ್ಲುತ್ತದೆ. ಒಬ್ಬನಿಗೆ ಬಹುಮಂದಿ ಸ್ತ್ರೀಯರಿದ್ದರೆ ಆತನ ಪ್ರೇಮವು ಎಲ್ಲರೊಡನೆ ಏಕಪ್ರಕಾರ ವಾಗಿರುವುದಿಲ್ಲ. ಅಂತಹ ಗೃಹಗಳಲ್ಲಿ ನಿತ್ಯ ಯುದ್ಧಗಳಾಗುತ್ತಿರುವುವು. ತನ್ನ ಪತಿಯು ತನ್ನಲ್ಲಿ ನಿಜವಾದ ಪ್ರೇಮವನ್ನಿಡುವುದಿಲ್ಲವೆಂದು ಆಕೆಗೆ ತಿಳಿದೊಡನೆ ಅವಳಲ್ಲಿ ಅವನ ಪ್ರತಿಯಾಗಿ ಒಂದುತರದ ಕ್ರೋಧವೂ ತಿರಸ್ಕಾರತನವೂ ಉಂಟಾಗುತ್ತದೆ. ಇದು ಮತ್ತೂ ಮುಂದುವರಿಸಿದರೆ ಮತ್ತವಳು ಅಶಿಕ್ಷಿತಳಾಗಿದ್ದು ಮರ್ಯಾದೆಯ ಮೇರೆಯನ್ನು ಅರಿಯದವಳಾಗಿದ್ದರೆ ತನ್ನ ಇಚ್ಛಾಪೂರ್ತಿಗಾಗಿ ರಹಸ್ಯವಾಗಿಯಾಗಲೀ, ಧೈರ್ಯ ಮುಂದುವರಿದಲ್ಲಿ ಬಹಿರಂಗವಾಗಿಯಾಗಲೀ ಅನ್ಯಪುರುಷನ ಸಹಾಯವನ್ನು ಸಂಪಾದಿಸುತ್ತಾಳೆ. ಇಂತಹ ಕುತ್ಸಿತ ವ್ಯವಹಾರಗಳು ಜನರಲ್ಲಿ ಇರದಂತೆ ಒಬ್ಬ ಪುರುಷನು ಒಬ್ಬಾಕೆಯನ್ನೇ ವಿವಾಹವಾಗಬೇಕೆಂಬ ವಿಧಿಯನ್ನು ಧರ್ಮಶಾಸ್ತ್ರದಲ್ಲಿ ವಿಧಿಪೂರ್ವಕವಾಗಿ ವಿಧಿಸಿರುವರು.

"ಅಭಿತ್ವಾಮನುಜಾತೇನ ದಧಾಮಿ ಮಮ ವಾಸಸಾ ।
ಯಥಾಸೋಮಮ ಕೇವಲೋ ನಾನ್ಯಾಸಾಂ
ಕೀರ್ತಯಾಶ್ಚನ" ॥

ಅಥರ್ವ. ಕಾಂ. ೭, ಸೂ ೩೭, ಮಂ. ೧.

ತಾತ್ಪರ್ಯ—"ನಾನು ನಿಮ್ಮನ್ನು ಈ ವಸ್ತ್ರಬಂಧನದ ಮೂಲಕ ಪತಿಯಾಗಿ ಸ್ವೀಕರಿಸುತ್ತೇನೆ. ನೀವು ನನ್ನ ಪತಿಯಾಗಿಯೇ ಇರಬೇಕಲ್ಲದೆ ಅನ್ಯರ ಕಡೆಗೆ ಮನಸ್ಸನ್ನು ಇಡಕೂಡದು." *

* ವಿವಾಹಕಾಲದಲ್ಲಿ ಅಗ್ನಿಪ್ರದಕ್ಷಿಣೆಗೈಯ್ಯುವಾಗ ವಧೂವರರ ಬಟ್ಟೆಯ ತುದಿಗೆ ಒಂದು ಗಂಟು ಹಾಕುತ್ತಾರೆ ಇದೇ ದಂಪತಿಗಳ ಸ್ಥಾಯಿ ಸಂಬಂಧದ ಚಿನ್ಹೆಯಾಗಿರುತ್ತದೆ.

ಈ ಪ್ರಮಾಣದಿಂದ ಒಬ್ಬನಿಗೆ ಒಬ್ಬಳೇ ಪತ್ನಿಯೆಂಬುದು ಸಿದ್ಧವಾಗುತ್ತದೆ. ಪ್ರಾಚೀನಕಾಲದಲ್ಲಿ ಸಹ ಒಬ್ಬನು ಬಹುವಿವಾಹ ವನ್ನು ಮಾಡಿಕೊಂಡಿದ್ದರೂ ಆತನು ಸುಖಿಯಾಗಿರಲಿಲ್ಲ. ದಶರಥನ ಬಹುವಿವಾಹದ ದೆಸೆಯಿಂದಲೇ ಶ್ರೀರಾಮನಿಗೆ ವನವಾಸವಾಯಿತು. ರಾವಣನ ವಿಷಯಲೋಲುಪ್ತತೆಯಿಂದಲೇ ಪೌಲಸ್ತ್ಯ ವಂಶದ ಸರ್ವ ನಾಶವಾಯಿತು. ಸವತೀ ಮಾತ್ಸರ್ಯದ ದೆಸೆಯಿಂದಾಗಿ ದಶರಥನು ತನ್ನ ಮರಣಕಾಲದಲ್ಲಿ ಒಬ್ಬ ಮಗನನ್ನಾದರೂ ತನ್ನ ಸಮೀಪದಲ್ಲಿ ಇಟ್ಟುಕೊಳ್ಳಲಾರದೆ ಹೋದನು. ಪರಂತು ಆವನ ಮಗನಾದ ಶ್ರೀರಾಮನು ಕಾಡಿನಲ್ಲಿರುತ್ತಾ ಸೀತೆಯು ರಾವಣನ ಕೈಸೇರಿದರೂ ಆಕೆಯ ಹೊರತು ಅನ್ಯಸ್ತ್ರೀಯನ್ನು ಇಚ್ಛಿಸಲಿಲ್ಲ. ಆದುದರಿಂದಲೇ ಅವನು ಆದರ್ಶ ಪುರುಷನಾದನು. ಯಾವ ರಾಷ್ಟ್ರದಲ್ಲಿ ಬಹು ವಿವಾಹ ಪದ್ಧತಿಯಿರುತ್ತದೋ ಅಲ್ಲಿಯ ಪುರುಷರ ಆಂತರಿಕ ಜೀವನವೂ ಸಾಮಾಜಿಕ ವ್ಯವಹಾರವೂ ಅತ್ಯಂತ ನೀಚತರಗತಿಯಲ್ಲಿರು ತ್ತದೆ. ಸ್ತ್ರೀಯರಲ್ಲಿಯೂ ಯಾವ ತರದ ಶಾಂತಿಯೂ ಇರುವುದಿಲ್ಲ. ಬ್ರಹ್ಮಚರ್ಯೆಯು ನಾಶವಾಗುತ್ತದೆ. ಮೊದಲಿನ ಹೆಂಡತಿಯ ಮಕ್ಕಳನ್ನು ಎರಡನೆಯವಳು ಬಹಳವಾಗಿ ದ್ವೇಷಿಸುವಳು. ಒಂದು ವೇಳೆ ಪ್ರಥಮ ಪತ್ನಿಯು ಮೃತಪಟ್ಟಿದ್ದು ಅವಳ ಒಂದೆರಡು ಮಕ್ಕಳು ಜೀವಿಸಿದ್ದರೆ ಮಲತಾಯಿಯಿಂದ ಅವರು ಅನುಭವಿಸುವ ಕಷ್ಟಪರಂ ಪರೆಗಳ ಪರಾಕಾಷ್ಠತೆಯನ್ನು ನಾನು ಪ್ರತ್ಯೇಕ ವರ್ಣಿಸುವುದಿಲ್ಲ. (ಇದರ ಅನುಭವವನ್ನು ಪಡೆಯುವ ಸೌಭಾಗ್ಯವು ಬಾಲ್ಯದಲ್ಲಿ ನನಗೇನೇ ಲಭಿಸಿರುವುದು—ಲೇಖಕ.) ಈ ರೀತಿ ಸವತಿ ತಾಯಿ ಯಿಂದ ದುಃಖಿತರಾದ ಮಕ್ಕಳಿಗೆ ತಂದೆಯ ಮೇಲೆ ಸರಿಯಾದ ಪ್ರೀತಿ ಇರುವುದಿಲ್ಲ. ಕಾರಣವೇನೆಂದರೆ ಈ ಮಕ್ಕಳ ತಂದೆಯು ದ್ವಿತೀಯ ಪತ್ನಿಯ ವ್ಯಾಮೋಹದಲ್ಲಿ ಸಿಕ್ಕಿಬಿದ್ದಿರುತ್ತಾನೆ. ಈ ಮಧ್ಯೆ ಆತನು ಮೊದಲಿನ ಮಕ್ಕಳ ಪಕ್ಷವನ್ನು ವಹಿಸಿದರೆ ಮತ್ತು ದ್ವಿತೀಯ ಪತ್ನಿಯು ಅಶಿಕ್ಷಿತಳಾಗಿದ್ದರೆ ಗಂಡಹೆಂಡಿರೊಳಗೆ ಜಗಳವಾಗಿ

ಒಂದೊಂದು ವೇಳೆ ಆ ಮನೆಯಲ್ಲಿ ಏಕಾದಶಿ ವೃತವಾಗುವುದೂ ಉಂಟು. ಈ ಎಲ್ಲಾ ಕಾರಣಗಳಿಂದ ಪುರುಷನ ಬಹುವಿವಾಹ ಪದ್ಧತಿಯು ತ್ಯಾಜ್ಯವಾಗಿರುವುದು. ಇದುವರೆಗೆ ಪುರುಷನು ಒಬ್ಬಾಕೆ ಇರುತ್ತಾ ಇನ್ನೊಬ್ಬಳನ್ನು ವರಿಸುವ ಕುರಿತು ವಿವರಿಸಿದ್ದಾಯಿತು. ಮುಂದಕ್ಕೆ ಪತ್ನಿ ಸತ್ತ ಮೇಲೆ ವಿಧುರನು ಪುನರ್ವಿವಾಹವನ್ನು ಮಾಡಿಕೊಳ್ಳಬಹುದೋ ಎಂಬುದನ್ನು ವಿವರಿಸುವೆವು.

ಒಬ್ಬನ ಪತ್ನಿಯು ಸತ್ತಳೆಂದರೆ ಇನ್ನೊಬ್ಬಳನ್ನೂ ಆಕೆಯ ನಂತರ ಮತ್ತೊಬ್ಬಳನ್ನೂ ಕೊನೆಗೆ ಮೂರನೆಯವಳನ್ನೂ ಹೀಗೆಯೇ ಅತ್ತ ಸತ್ತಂತೆ ಇತ್ತ ಎತ್ತುತ್ತಾ ಬರಬಹುದು; ಎಂಬ ಅಭಿಪ್ರಾಯವು ವರ್ತಮಾನ ಕಾಲದ ಎಲ್ಲಾ ಜಾತಿಗಳಲ್ಲಿಯೂ ಬಲವಾಗಿ ಅಂಟಿ ಕೊಂಡಿದೆ. ಕೆಲವರು ಇದನ್ನು ಸಿದ್ಧಾಂತವೆಂದು ನಂಬಿಕೊಂಡು ವ್ಯವಹಾರದಲ್ಲಿ ತಂದಿರುತ್ತಾರೆ ಪುರುಷರ ಪುನರ್ವಿವಾಹವು ಆಪದ್ಧರ್ಮವಾಗಿರುವುದೆಂಬುದನ್ನು ಯಾರೂ ತಿಳಿದುಕೊಂಡಿಲ್ಲ. ಒಬ್ಬನ ಪತ್ನಿಯು ಪ್ರಾಣಾಂತಿಕ ಸಂಕಟದಲ್ಲಿರುವಾಗಲೇ ಆತನಿಗೆ ಇನ್ನೊಬ್ಬಳ ಕುರಿತು ನೆಂಟಸ್ತಿಕೆಯಾಗುವ ಪದ್ಧತಿಯನ್ನು ನಾವು ಹಿಂದೂ ಸಮಾಜದಲ್ಲಿ ನೋಡುತ್ತಿದ್ದೇವೆ. ಪ್ರಥಮ ಪತ್ನಿಯ ಚಿತಾಗ್ನಿಯು ತಣ್ಣಗಾಗುವ ಮೊದಲೇ ಮಹಾರಾಯರಿಗೆ ದ್ವಿತೀಯ ಸಂಬಂಧವು ಗಟ್ಟಿಯಾಗುತ್ತದೆ. ಹಳೆ ಪತ್ನಿ ಸತ್ತ ಒಂದು ವರ್ಷ ದೊಳಗಾಗಿ ಹೊಸ ರಾಣಿಯು ಬರುವಂಥಾದ್ದು ಸಾಧಾರಣ ಮಾತಾಗಿದೆ. ಇದನ್ನು ಯಾರೂ ಲಕ್ಷ್ಯಕ್ಕೆ ತರುವುದಿಲ್ಲ.

ಮೊದಲಿನ ಪತ್ನಿಯಲ್ಲಿ ಬೇಕಾದಷ್ಟು ಮಕ್ಕಳಾದ ಮೇಲೆ ಆತನಿಗೆ ಪುನರ್ವಿವಾಹವು ಅಗತ್ಯವೆಂಬುವುದು ನ್ಯಾಯಯುಕ್ತವಾದ ಅಭಿಪ್ರಾಯವಾಗಲಾರದು. ಇದುಹೊರತು ನಾವು ಮೊದಲು ವಿವರಿಸಿದಂತೆ ದ್ವಿತೀಯ ಪತ್ನಿ ಬಂದಮೇಲೆ ಅವಳ ನವಯೌವನದ ಬೆಡಗು ವೈಯ್ಯಾರಗಳ ಮುಂದೆ ಪಾಪ! ಇವನ ಪ್ರೀತಿಯು ಪ್ರಥಮ ಸಂಬಂಧದ ಮಕ್ಕಳ ಮೇಲೆ ಬೀಳುವುದು ದುರ್ಲಭ! ಒಂದು ವೇಳೆ ಬಿದ್ದರೂ ಕೂಡಾ ಎರಡನೆಯವಳಿಗೆ ಒಂದೆರಡು ಮರಿಗಳು ಹುಟ್ಟುವ ವರೆಗೆ

ಮಾತ್ರ. ಪರಂತು ಒಬ್ಬನು ಸಂತಾನಹೀನನೂ ಯುವಾವಯಸ್ಕನೂ ಆಗಿರುತ್ತಾ ಆತನ ಪತ್ನಿ ಸತ್ತರೆ ಆತನು ತನ್ನ ವಂಶವೃದ್ಧಿಗೂ ಜೀವನವು ಹಾಳಾಗದಂತೆಯೂ ಪುನರ್ವಿವಾಹವನ್ನು ಮಾಡಿಕೊಳ್ಳುವುದರಲ್ಲಿ ದೋಷವಿಲ್ಲ. ಇಲ್ಲಿ ವಿಚಾರಾರ್ಹವಾದ ಒಂದು ಪ್ರಶ್ನೆಯೇನೆಂದರೆ—ವಿಧುರನು ಪುನರ್ವಿವಾಹವನ್ನು ಯಾವ ಸ್ತ್ರೀಯೊಡನೆ ಮಾಡಿಕೊಳ್ಳಬೇಕೆಂಬುವುದು. ಆದರೆ ವಿವಾಹದ ಕುರಿತು ಸ್ತ್ರೀಪುರುಷರ ವಯಸ್ಸನ್ನು ಶಾಸ್ತ್ರಗಳೂ ಅನೇಕ ವೈದ್ಯರೂ ನಿಶ್ಚಯಮಾಡಿರುತ್ತಾರೆ. ಇದನ್ನು ಮುರಿದರೆ ಮಾತ್ರ ಪತಿ ಯಾ ಪತ್ನಿಯರು ಅಧ್ರಾಯುವಿನಲ್ಲೇ ಸಾಯುವರು. ಇಬ್ಬರಲ್ಲಿ ಒಬ್ಬರುಳಿದು ಸಂತಾನಹೀನರಾಗಿದ್ದು ಜಿತೇಂದ್ರಿಯರಾಗಲಿಕ್ಕೆ ಸಾಧ್ಯವಾಗದೆ ಹೋದಲ್ಲಿ ಗೌಣ ರೀತಿಯಲ್ಲಿ ವ್ಯಭಿಚಾರಾದಿ ದುರ್ಗುಣಗಳಿಗೆ ಬಲಿಬೀಳುತ್ತಾರೆ. ದೃಷ್ಟಾಂತವಾಗಿ ಮೂವತ್ತೈದು ವರ್ಷ ಪ್ರಾಯದ ಒಬ್ಬನ ಇಪ್ಪತ್ತು ಯಾ ಇಪ್ಪತ್ತೈದು ವರ್ಷದ ಪತ್ನಿಯು ಮೃತಪಟ್ಟಳೆಂದು ಭಾವಿಸೋಣ. ಈಗಿನ ಸಂಪ್ರದಾಯವಾದಿಗಳಂತೆ ಕನ್ಯೆಯರಿಗೆ ಬಾಲ್ಯದಲ್ಲೇ ವಿವಾಹವಾಗಿರಬೇಕಾಗುವುದರಿಂದ ಉಪರ್ಯುಕ್ತ ವಿಧುರನಿಗೆ ಹದಿನೈದು ಯಾ ಹದಿನಾರು ವರ್ಷಗಳ ಪ್ರಾಯದ ಕನ್ಯೆಯನ್ನು ಪುನರ್ವಿವಾಹ ಮಾಡಿಕೊಟ್ಟಿತೆಂದು ಭಾವಿಸಿರಿ. ಹೀಗಾದರೆ ಪ್ರಥಮತಃ ಅವರಿಬ್ಬರ ಶಾರೀರಿಕ ಶಕ್ತಿಯು ಪರಸ್ಪರ ಸರಿಬೀಳಲಿಕ್ಕಿಲ್ಲ. ಎರಡನೆಯದಾಗಿ ಆತನು ಪ್ರಾಯ ಮೀರಿದವನಾಗಿದ್ದು ಹೆಚ್ಚಿನ ಶಕ್ತಿಯನ್ನು ಮೊದಲೇ ವ್ಯಯ ಮಾಡಿದವನಾದುದರಿಂದ ಯುವತಿಯಾದ ಎರಡನೆಯವಳ ಮನಸ್ಸಿನ ಇಚ್ಛೆಯನ್ನು ಸರಿಯಾಗಿ ತೃಪ್ತಿಪಡಿಸಲಾರನು. ಒಂದುವೇಳೆ ಇಪ್ಪತ್ತಾರು ಅಥವಾ ಇಪ್ಪತ್ತೇಳು ವರ್ಷ ಪ್ರಾಯದ ಬ್ರಹ್ಮಚಾರಿಣಿಯನ್ನು ಆತನು ಪುನರ್ವಿವಾಹವನ್ನು ಮಾಡಿಕೊಳ್ಳಲಿಕ್ಕೆ ಇಚ್ಛಿಸಿದರೂ ಕೂಡ ಅದು ಆಗುವಂತಿಲ್ಲ. ಏತಕ್ಕೆಂದರೆ ಕ್ಷತವೀರ್ಯ ಪುರುಷನಿಗೆ ಅಕ್ಷತಯೋನಿ ಸ್ತ್ರೀಯೊಡನೆ ವಿವಾಹವಾಗುವುದು ಉಚಿತವಲ್ಲ. ಈಗಿನ ಕಾಲದಲ್ಲಿ ಅರುವತ್ತು ವರ್ಷ ಪ್ರಾಯದಲ್ಲಿದ್ದು ವೈಕುಂಠಯಾತ್ರೆಗೂ ಸಿದ್ಧರಾಗಿದ್ದವರು

ಸಹಾ ಎಂಟೆಂಟು ವರ್ಷ ಪ್ರಾಯದ ಕನ್ಯೆಯರನ್ನು ಮದುವೆಮಾಡಿ ಕೊಳ್ಳುವ ಪದ್ಧತಿಯಿದೆ. ಇದು ಕನ್ಯೆಯರ ಭವಿಷ್ಯದ ಜೀವನವನ್ನು ಯಮಪಾಶಕ್ಕೆ ಒಪ್ಪಿಸಿಕೊಡುವಂತಹ ರಾಕ್ಷಸೀಯ ಪದ್ಧತಿಯಾಗಿರುತ್ತದೆ. ಧನಮದಾಂಧತೆ, ಮಗಳನ್ನು ಮಾರಿ ಅಳಿಯನಿಂದ ರೂಪಾಯಿಯ ಚೀಲವನ್ನು ಇಲ್ಲವೆ ಮಗನ ಮುಖಾಂತರ ವಧುವಿನ ಕಡೆಯಿಂದ ಹಣದ ಬೊಕ್ಕಸವನ್ನು ಸುಲಿದುಕೊಳ್ಳುವ—ಇನ್ನೊಂದು ವಿಧದಲ್ಲಿ ವಿವರಿಸುವುದಾದರೆ ದುಡ್ಡಿನ ಪ್ರಲೋಭನದಿಂದಾಗಿ ಮಗಳನ್ನು ನಿತ್ಯ ದುಃಖಾಗ್ನಿಗೆ ದೊಬ್ಬುವ ಧನಪಿಶಾಚಿಗಳ ಪೈಶಾಚಿಕ ವೃತ್ತಿಯೆಂದರೆ ಇದೇ ತಾನೆ? ಇಂತಹ ಸಂಬಂಧವೆಂದರೆ ಬೆಕ್ಕನ್ನು ಒಂಟೆಗೆ ಕೊಟ್ಟು ಮದುವೆ ಮಾಡಿದಂತೆಯೇ ಸರಿ. (ಧನಲೋಲುಪ್ತತೆಯಿಂದ ನಡೆಯುವ ವಿವಾಹಗಳ ವಿಚಾರವನ್ನು "ವರದಕ್ಷಿಣೆಯ ಘೋರಪದ್ಧತಿ" ಎಂಬ ನಮ್ಮ ಇನ್ನೊಂದು ಪುಸ್ತಕದಲ್ಲಿ ಸವಿಸ್ತಾರವಾಗಿ ವಿವರಿಸುವೆನು.—ಲೇಖಕ)

ಯುರೋಪಿನಲ್ಲಿ ಕನ್ಯೆಯರು ತಮ್ಮ ಸ್ವಂತ ಇಚ್ಛೆಯಿಂದಲೇ ವೃದ್ಧರನ್ನು ವರಿಸಿಕೊಳ್ಳುತ್ತಾರೆ. ಆದರೆ ಇದರ ಉದ್ದೇಶವು ಅವನಲ್ಲಿದ್ದ ಧನಸಂಪತ್ತನ್ನು ಲುಟಾಯಿಸುವುದು ಮಾತ್ರ. ಆತನು ಸತ್ತ ಮೇಲೆ ಅವನ ಸರ್ವ ಸಂಪತ್ತಿಗೆ ತಾನೇ ಅಧಿಕಾರಿಣಿಯಾಗುವೆನೆಂದೂ ಆ ಮೇಲೆ ಇನ್ನೊಬ್ಬನನ್ನು ವರಿಸಿಕೊಳ್ಳುವೆನೆಂದೂ ಅಲ್ಲಿಯವರು ನಿರ್ಧರಿಸಿಕೊಳ್ಳುತ್ತಾರೆ

ಭಾರತ ವರ್ಷದಲ್ಲಿ ಪುರುಷರು ಅರುವತ್ತು ವರ್ಷ ಪ್ರಾಯದಲ್ಲಿಯೂ, ಎಳೆ ಪ್ರಾಯದ ಕನ್ಯೆಯರನ್ನು ವರಿಸಿ ಒಂದೆರಡು ವರ್ಷಗಳೊಳಗಾಗಿ ಯಮಪುರಿಯನ್ನೈದಿ ಆ ಪತ್ನಿಯರನ್ನು ವೈಧವ್ಯವೆಂಬ ಮಹಾ ದುಃಖಾಗ್ನಿಯಲ್ಲಿ ದೊಬ್ಬಿಬಿಡುತ್ತಾರೆ. ಆ ಸಮಯದಲ್ಲಿ ಈ ಕನ್ಯೆಯರ ಪರಿಸ್ಥಿತಿಯು ದುಃಖಕರವಾಗಿರುತ್ತದೆ. ತನ್ನ ಶರೀರ ಮತ್ತು ಜೀವನವು ಅಪಮಾನಿತವಾಗದೆ ಯಾವ ರೀತಿಯಲ್ಲಿ ಉಳಿಯಬಹುದು ಎಂಬ ಒಂದೇ ಚಿಂತೆಯು ಅವರ ಮನಸ್ಸನ್ನು ಬೇಯಿಸುತ್ತಿರುವುದು. ಇದಕ್ಕೆ ಬೇಕಾದಂತೆ ಜಾಗ್ರತೆಯಲ್ಲಿರುವಷ್ಟು

ವ್ಯವಸ್ಥೆಯೂ ಅವಳಿಗೆ ಮನೆಯಲ್ಲಿ ದೊರೆಯುವುದಿಲ್ಲ. ಅವಳು ವಿಧವೆಯಾಗುವುದೇ ಅವಮಾನವೆಂದೆಣಿಸಲಾಗಿದೆ. ಅನೇಕ ಯುವತಿ ವಿಧವೆಯರು ತಮ್ಮ ವೃದ್ಧ ಯಜಮಾನರು ವೈಕುಂಠಕ್ಕೆ ತೆರಳಿದ ಮೇಲೆ ಅತ್ತೆಮಾವಂದಿರ ಅತ್ಯಾಚಾರವನ್ನು ಸಹಿಸಲಾರದೆ ಬೇರೇನೂ ಉಪಾಯವಿಲ್ಲದೆ ಲಜ್ಜೆಯನ್ನು ತೊರೆದು ತಮ್ಮ ಜೀವನವನ್ನು ಬಹಳ ಅಧೋಗತಿಗಿಳಿಸಿಕೊಳ್ಳುತ್ತಾರೆ. ಇನ್ನು ಕೆಲವು ಕಡೆಗಳಲ್ಲಿ ವೃದ್ಧ ಪತಿಯು ಇರುವಾಗಲೆ ಆತನಿಗೆ ತಿಳಿಯದಂತೆಯೇ ಅನ್ಯಪುರುಷ ನೊಡನೆ ತನ್ನ ಮಾನಸಿಕ ಇಚ್ಛೆಯನ್ನು ಪೂರ್ತಿಗೊಳಿಸುತ್ತಾರೆ. ಕಾರಣವೇನೆಂದರೆ ಆತನು ತನ್ನ ಕಡು ವೃದ್ಧಾಪ್ಯದ ದೆಸೆಯಿಂದ ಪತ್ನಿ ಯನ್ನು ಸುಖಿಯಾಗಿಡಲಾರದವನಾಗಿರುತ್ತಾನೆ. ಇಂತಹ ವಿವಾಹ ದಿಂದ ಮಾನವಜಾತಿಗೆ ಒಂದು ಭಯಂಕರವಾದ ಕಲಂಕವಲ್ಲದೆ ಮತ್ತೇನು? ಧರ್ಮ ಮತ್ತು ಶಾಸ್ತ್ರದ ಹೆಸರಲ್ಲಿಯೇ ಈ ವಿಧದ ವಿವಾಹಗಳು ಆಗುವುದಾದರೆ ಅಂತಹ ಶಾಸ್ತ್ರೀಯ ವಿಧಿಗಳನ್ನು ಸರ್ವತ್ರವೂ ಬಹಿಷ್ಕರಿಸತಕ್ಕದ್ದು. ಇದಕ್ಕೂ ಈಗಿನ ಸಂಪ್ರದಾಯ ವಾದಿಗಳು ಎಷ್ಟಕ್ಕೂ ಒಪ್ಪದಿದ್ದಲ್ಲಿ ಇಂತಹ ವಿವಾಹಗಳನ್ನು ಮಾಡಿ ಕೊಳ್ಳುವ ವೃದ್ಧರಿಗೂ, ಕನ್ಯೆಯರನ್ನು ಕೊಡುವ ಮಾತಾಪಿತೃಗಳಿಗೂ ಕಠಿಣ ದಂಡನೆಯನ್ನು ಕೊಡುವಂತಹ ಒಂದು ಯೋಗ್ಯಶಾಸನವನ್ನು ಮಾಡುವುದೇ ಪರಮ ಲೇಸು.

ವಿಧುರರು ಅನಿವಾರ್ಯ ರೂಪದಲ್ಲಿ ಪುನರ್ವಿವಾಹ ಮಾಡಿ ಕೊಳ್ಳಬಹುದೆಂದೂ ಎಳೆಪ್ರಾಯದ ಕನ್ಯೆಯರನ್ನು ದ್ವಿತೀಯ ಪತ್ನಿ ಯರನ್ನಾಗಿ ಮಾಡಿಕೊಳ್ಳಕೂಡದೆಂದೂ ಇಷ್ಟರಲ್ಲಿಯೇ ಸಿದ್ಧವಾಗು ತ್ತದೆ. ಇನ್ನುಳಿದ ಪ್ರಶ್ನೆಯೆಂದರೆ ವಿಧುರರ ವಿವಾಹವು ವಿಧವೆಯ ರೊಡನೆಯೇ ಆಗಬೇಕೋ? ಹೀಗಾಗಬೇಕಾದರೆ ಸ್ತ್ರೀಯರ ಪುನರ್ವಿ ವಾಹವು ಧರ್ಮಶಾಸ್ತ್ರಾನುಕೂಲವೋ ಎಂಬುವುದು. ಇದರ ಉತ್ತರವನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸುವೆವು.

---

# ೫. ವಿಧವಾವಿವಾಹದ ನೈತಿಕತೆ.

ಆಹಾರ, ನಿದ್ರೆ ಇತ್ಯಾದಿ ಎಲ್ಲಾ ತರದ ಪ್ರಾಕೃತಿಕ ವೇಗವು ಅಂದರೆ ಸಮಸ್ತ ಇಂದ್ರಿಯಗಳ ವಿಷಯ ಭೋಗ, ಶೀತೋಷ್ಣ ಸುಖದುಃಖಾದಿ ಅವಸ್ಥೆಗಳು ಪ್ರತಿಯೊಂದು ಶರೀರ ಧಾರಿಯ ಸ್ವಾಭಾವಿಕ ಧರ್ಮವಾಗಿರುತ್ತದೆ. ಇವುಗಳನ್ನು ಶಾಂತಗೊಳಿಸುವುದು ಅನಿವಾರ್ಯವಾಗಿರುತ್ತದೆ. ಈ ವಿಷಯವು ಸರ್ವಸಮ್ಮತವಾದುದು. ಸೃಷ್ಟಿಯಾದಿಯಿಂದ ಇದುವರೆಗಿನ ಪರಿಸ್ಥಿತಿಗಳನ್ನು ನೋಡಿದರೆ ಕೆಲವೇ ಮಂದಿ ಈ ವೇಗಗಳಿಂದ ತಪ್ಪಿರುವರೆಂದು ಕಂಡು ಬರುತ್ತಿದೆ. ಕೆಲವರೇ ಮಹಾಪುರುಷರೆನಿಸಿದರು. ಇಂತಹವರು ಮಾನವ ಸಮಾಜದಲ್ಲಿ ಉತ್ತಮ ವರ್ಗಕ್ಕೆ ಸೇರಿ ಒಂದು ವಿಧದ ಪ್ರತ್ಯೇಕ ಶಕ್ತಿಶಾಲಿಗಳೆನ್ನಲ್ಪಟ್ಟರು. ನಾವು ಜನಸಾಮಾನ್ಯರ ಕುರಿತು ವಿಚಾರಮಾಡುವಲ್ಲಿ ಅವರಿಗೆ, ಜಗತ್ತಿನಲ್ಲಿರುವ ವರೆಗೆ ಪ್ರಕೃತಿಗೆ ಅನುಕೂಲವಾದ ಎಲ್ಲಾ ವಸ್ತುಗಳನ್ನೂ ಉಪಯೋಗಿಸಬೇಕಾಗುತ್ತದೆಂಬುದು ಕಂಡುಬರುತ್ತದೆ. ಮನುಷ್ಯ ವರ್ಗವು ಇತರ ಪ್ರಾಣಿಗಳಿಗಿಂತ ಶ್ರೇಷ್ಠತರಗತಿಯದ್ದೆಂಬುದಕ್ಕೆ ಸಂದೇಹವಿಲ್ಲ. ಏಕೆಂದರೆ ಬುದ್ಧಿಯ ವಿಕಾಸತೆಗೆ ತಕ್ಕದಾದ ಆತ್ಮಜ್ಞಾನದ ಯೋಗ್ಯತೆಯು ಮನುಷ್ಯರಾದ ನಮ್ಮಲ್ಲಿದೆ. ಆದರೆ ಮೇಲೆ ವಿವರಿಸಿದ ಪ್ರಕೃತಿ ವೇಗಗಳಿಂದ ಪೀಡಿತವಾಗಿರುವ ವರೆಗೆ ಅದು ಗುಪ್ತವಾಗಿರುತ್ತದೆ. ಅರ್ಥಾತ್—ತಾತ್ವಿಕ ವಿಷಯಗಳ ಕಡೆಗೆ ಗಮನಕೊಡುವುದಿಲ್ಲ. ಆದುದರಿಂದ ಪ್ರಾಕೃತಿಕ ವೇಗವನ್ನು ಶಾಂತಗೊಳಿಸುವ ಬಗ್ಗೆ ಯೋಗ್ಯವಾದ ಸಾಧನವು ಬೇಕಾಗುತ್ತದೆ. ಪರಂತು ಆ ಸಾಧನಗಳನ್ನು ಪಶುಪಕ್ಷಿಗಳಂತೆ ಉಚ್ಛೃಂಖಲತೆಯಿಂದ ಉಪಯೋಗಿಸದೆ ವಿಷಯಸುಖಗಳಲ್ಲಿಯೇ ಲೀನವಾಗಿ ದೇಹ ಮತ್ತು ಜೀವನ ಸರ್ವಸ್ವ

ವನ್ನು ನಷ್ಟಗೊಳಿಸದೆ ಅತ್ಯಂತ ವಿಚಾರ ಪೂರ್ವಕವಾಗಿ ಉಪಯೋಗಿಸುತ್ತಾ ಆತ್ಮೋನ್ನತಿಗೆ ತಕ್ಕ ಮಾರ್ಗವನ್ನಿಟ್ಟುಕೊಂಡಿರಬೇಕು. ಇದೇ ನಿಜವಾದ ಮನುಷ್ಯತ್ವ.

ಒಂದುವೇಳೆ ಪ್ರಕೃತಿ ವೇಗವನ್ನು ಸಮೂಲವಾಗಿ ನಾಶ ಮಾಡುವ ಪ್ರಯತ್ನವನ್ನು ಕೈಕೊಂಡರೆ ಅದರಿಂದಲೇ ಸಫಲತೆ ಉಂಟಾಗಲಾರದು. ಕಾರಣವೇನೆಂದರೆ—ಶರೀರವು ಪ್ರಕೃತಿಯ ಕಾರ್ಯರೂಪವಾಗಿರುವುದು. ಇದು ಒಂದೇ ಸಾರಿ ಪ್ರಕೃತಿಯಿಂದ ಪ್ರತ್ಯೇಕವಾಗುವುದು ಕಠಿಣವೇ ಸರಿ. ಆದುದರಿಂದಲೇ ಶರೀರವು ತರತರದ ವಿಷಯಸುಖಗಳ ಕಡೆಗೆ ಹೋಗುತ್ತದೆ. ಈ ತರದ ವಿಷಯ ವೇಗಗಳ ಶಾಂತತೆಗಾಗಿ ನಮ್ಮ ಎಲ್ಲಾ ಇಂದ್ರಿಯಗಳನ್ನೂ ನಿಯಮದಲ್ಲಿಟ್ಟು ಜೀವನವನ್ನು ಒಳ್ಳೇ ರೀತಿಯಲ್ಲಿ ವ್ಯಯಿಸಿ ಆತ್ಮೋನ್ನತಿಯ ಪಥದಲ್ಲಿ ಅಗ್ರೇಸರರಾಗುವುದೇ ಮಾನವರ ನಿಜವಾದ ಧರ್ಮವೆನ್ನಲ್ಪಡುವುದು. ಈ ಸಿದ್ಧಾಂತಕ್ಕನುಸರಿಸಿ ಶರೀರದ ಸಮಸ್ತ ವ್ಯವಹಾರಗಳನ್ನು ದೇಶ ಕಾಲ ಮತ್ತು ವ್ಯಕ್ತಿಗಳ ಆವಶ್ಯಕತೆ ಮತ್ತು ಪರಿಸ್ಥಿತಿಗಳಿಗನುಸಾರವಾಗಿ ಸಮಯ ಸಮಯದಲ್ಲಿ ಮರ್ಯಾದಿತ ಸ್ಥಿತಿಯಲ್ಲಿ ನಿಯಮಿಸಲಾಗುತ್ತದೆ. ಇದನ್ನೇ ನೀತಿ ನ್ಯಾಯ ಅಥವಾ ಆದರ್ಶವೆನ್ನುವರು. ಪ್ರಕೃತಿ ತತ್ವವನ್ನು ವಿವೇಕಪೂರ್ವಕವಾಗಿ ಉಪಯೋಗಮಾಡಿಕೊಳ್ಳಲು ಸ್ತ್ರೀಪುರುಷರಿಗೆ ಆಗುವ ವಿವಾಹವು ಕೂಡಾ ಮೇಲೆ ಹೇಳಿದ ಆದರ್ಶಗಳಲ್ಲಿ ಒಂದಾಗಿರುತ್ತದೆ. ಈ ಆದರ್ಶವು ಒಬ್ಬ ಪುರುಷನಿಗೆ ಒಬ್ಬಳೇ ಸ್ತ್ರೀ ಎನ್ನುವ ನಿರ್ಧಾರವನ್ನು ನಮ್ಮ ಮುಂದಿಟ್ಟಿರುತ್ತದೆ. ಇಂತಹ ನಿರ್ಧಾರದಿಂದಲೇ ಸ್ತ್ರೀಪುರುಷರು ಮರ್ಯಾದಿತ ರೀತಿಯಲ್ಲಿ ಗೃಹಸ್ಥ ಧರ್ಮವನ್ನು ಆಚರಿಸಿ ಪರಸ್ಪರ ಶಾರೀರಿಕ, ಮಾನಸಿಕ ಮತ್ತು ಆತ್ಮಿಕ ಆವಶ್ಯಕತೆಗಳನ್ನು ಪೂರ್ತಿಗೊಳಿಸುತ್ತಾ ತಮ್ಮ ತಮ್ಮ ಆತ್ಮೋನ್ನತಿಯಲ್ಲಿ ಒಬ್ಬರಿಗೊಬ್ಬರು ಸಹಾಯಕರಾಗಿ "ಸಂಸಾರ"ವೆಂಬ ರಂಗಭೂಮಿಯಲ್ಲಿ "ಮಾನವ

ಜೀವನ"ವೆಂಬ ನಾಟ್ಯವನ್ನು ಪೂರೈಸಿ ಜೀವನ್ಮುಕ್ತಿಯನ್ನು ಪಡೆಯುತ್ತಾರೆ. ಈ ರೀತಿಯಲ್ಲಿ ಜೀವನ ನಡಿಸುವವರಿಗಾಗಿಯೆ ಜಗತ್ತಿನಲ್ಲಿ ಲೌಕಿಕ ವ್ಯವಹಾರವು ನಡೆದುಬಂದಿರುವುದು.

ಸರ್ವಸಾಧಾರಣವಾಗಿ ಜಗತ್ತಿನಲ್ಲಿ ಸ್ತ್ರೀಪುರುಷರ ಸಂಖ್ಯೆಯು ಸರಿಸಮಾನವಾಗಿ ಕಂಡುಬರುತ್ತಿದೆ. ಒಬ್ಬಾಕೆಗೆ ಒಬ್ಬನೇ ಪತಿಯಾಗಿದ್ದು ಜೀವನವನ್ನು ಒಳ್ಳೇ ವಿಧದಲ್ಲಿ ನಡಿಸುವುದು ಸಮಾಜದಲ್ಲಿ ಶ್ರೇಷ್ಟವಾಗಿರುವುದು. ಪರಂತು ಕೆಲವು ಸಂದಿಗ್ಧ ಪರಿಸ್ಥಿತಿಗಳಲ್ಲಿ ಈ ನಿಯಮಗಳನ್ನು ವ್ಯತ್ಯಾಸಗೊಳಿಸಬೇಕಾಗುತ್ತದೆ. ಇಂತಹ ಪರಿಸ್ಥಿತಿಗಳು ಬಾರದಂತೆ ಮೊದಲಿನಿಂದಲೇ ಎಚ್ಚರಿಕೆಯಿಂದಿರುವುದು ಅತ್ಯಂತ ಆದರ್ಶನೀಯವು. ವಿಷಯಸುಖವನ್ನು ನಿಯಮಿತದಲ್ಲಿಡುವುದೇ ನೀತಿಯ ಆದರ್ಶತೆ. ಇಂತಹ ಆದರ್ಶಗಳನ್ನು ಹಾಳುಮಾಡುವುದು ಅಧರ್ಮವಾಗಿರುತ್ತದೆ. ಆದುದರಿಂದ ವಿಷಯಸುಖಾಭಿಲಾಷೆಗಳನ್ನು ಪ್ರಕೃತಿ ತತ್ವಕ್ಕನುಸರಿಸಿ ಸ್ತಿಮಿತ ರೀತಿಯಲ್ಲಿಡುವುದೇ ನಿಜವಾದ ಮಾನವ ಧರ್ಮವು

ಹಸಿವು, ಬಾಯಾರಿಕೆ, ಶೀತೋಷ್ಣ, ಸುಖದುಃಖ, ಮಾನಾಪಮಾನ ಇತ್ಯಾದಿ ಅವಸ್ಥೆಗಳು ಜಗತ್ತಿನಲ್ಲಿರುವ ಪ್ರತಿಯೊಂದು ಪ್ರಾಣಿಗಳಲ್ಲಿಯೂ ಕಂಡುಬರುತ್ತದೆಂಬುದನ್ನು ಪ್ರಾರಂಭದಲ್ಲಿಯೇ ವಿವರಿಸಿದೆವಷ್ಟೆ. ಅದೇ ಪ್ರಕಾರ ಒಂದು ಪ್ರಾಣಿಯು ಮತ್ತೊಂದನ್ನು ಹಿಂಸಿಸುವಾಗ ಹಿಂಸಿಸಲ್ಪಡುವ ಪ್ರಾಣಿಯು ತನ್ನಿಂದ ಸಾಧ್ಯವಾದ ರೀತಿಯಲ್ಲಿ ಆ ಹಿಂಸೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಮಾಡುತ್ತದೆ. ಇಂತಹ ವ್ಯವಹಾರವು ಮನುಷ್ಯರಲ್ಲಿ ಬಹಳವಾಗಿ ತುಂಬಿಕೊಂಡಿರುವುದು. "ಅಹಿಂಸಾ ಪರಮೋಧರ್ಮ" ಎಂಬ ತತ್ವವು ನಮ್ಮೆಲ್ಲವರಿಗೂ ಗೊತ್ತೇ ಇದೆ. ಆದರೆ ಈಗ ಮಾತ್ರ ನಾವು ಧರ್ಮದ ಹೆಸರಲ್ಲಿ ಎಲ್ಲಾ ತರದ ಹಿಂಸೆಯನ್ನೂ ಮಾಡುತ್ತಿದ್ದೇವೆ. ಬರಬರುತ್ತಾ ಈ ಹಿಂಸಾಕಾರ್ಯವು ಸ್ತ್ರೀಯರ ಮೇಲೆಯೂ ಆಗತೊಡಗಿತು.

ಪರಿಣಾಮರೂಪವಾಗಿ ಭಾರತೀಯ ಮಹಿಳೆಯರಲ್ಲಿ ಸಾವಿರಾರು ಮಂದಿಯನ್ನು ವೈಧವ್ಯಧೀಕ್ಷೆಗೆ ಒಪ್ಪಿಸಿ ಘೋರವಾದ ದುಃಖವನ್ನು ಅನುಭವಿಸುವಂತೆ ಮಾಡಿತು.

ಒಂದು ಕುಟುಂಬದಲ್ಲಿ ಪತಿಯೊಡನೆ ಪ್ರೇಮದಿಂದಿದ್ದು ಮರ್ಯಾದಿತ ರೀತಿಯಲ್ಲಿ ಸಂತಾನೋತ್ಪಾದನೆ ಮಾಡಿ, ಭೋಜನ, ಛಾದನ ಇತ್ಯಾದಿ ಗೃಹವ್ಯವಸ್ಥೆಗಳನ್ನು ಸುವ್ಯವಸ್ಥಿತ ರೀತಿಯಲ್ಲಿಡುವ ಸ್ತ್ರೀಯು ಇದ್ದರೆ ಆ ದಂಪತಿಗಳೇ ಆದರ್ಶ ಮತ್ತು ಸುಖಿ ದಂಪತಿ ಗಳೆನ್ನಲ್ಪಡುವರು. ಆದರೆ ನವಯೌವನ ಮತ್ತು ಅತ್ಯಂತ ರೂಪವತಿ ಯಾದ ವಿಧವೆಯು ಮನೆಯೊಳಗಿದ್ದು ಅವಳಿಗೆ ಪುನರ್ವಿವಾಹ ಮಾಡಿಕೊಡದಿದ್ದರೆ ಅದರಿಂದಾಗುವ ದುಷ್ಪರಿಣಾಮವು ಆ ಮನೆಗೆ ಮಾತ್ರವಲ್ಲ, ಇಡೀ ಸಮಾಜದ ಮೇಲೆ ಆವರಿಸುತ್ತದೆ. ಇದರಿಂದ ಸಮಾಜದ ಅಸ್ತಿತ್ವವೇ ನಾಶವಾಗುತ್ತದೆ. ಪ್ರಚಲಿತಕಾಲದಲ್ಲಿರು ವವರಲ್ಲಿ ಕೆಲವರು ರೂಢಿಯ ದಾಸರಾಗಿರುವುದರಿಂದ ಸ್ತ್ರೀ ಪುರುಷರು ಒಂದುಬಾರಿ ಪರಸ್ಪರ ಕೈಹಿಡಿಯುವುದನ್ನೇ ಪರಮಾದರ್ಶವೆಂದು ಹೇಳುತ್ತಾರೆ. ಇವರ ಈ ಹೇಳಿಕೆಯು ನ್ಯಾಯವಾದುದೆಂಬುದನ್ನು ನಾವೂ ಒಪ್ಪುತ್ತೇವೆ. ಪರಂತು ಬಾಲ್ಯದಲ್ಲಿಯೇ ವೈಧವ್ಯವನ್ನು ಹೊಂದಿ ಯೌವನಾವಸ್ಥೆಗೆ ಬಂದಾಗ ತಮ್ಮ ಮುಂದೆ ಕಣ್ಣೀರು ಸುರಿಸುತ್ತಿರುವ ತಮ್ಮ ಕುಮಾರಿಯರಿಗೆ ಪುನರ್ವಿವಾಹವನ್ನು ಮಾಡಿ ಜೀವನಸ್ವಾತಂತ್ರ್ಯವನ್ನು ಕೊಟ್ಟು ಅವರ ಆತ್ಮೀಯ ಸುಖವನ್ನು ಶಾಂತಗೊಳಿಸುವುದು ಆದರ್ಶವೆಂದು ತಿಳಿದುಕೊಳ್ಳುವುದಿಲ್ಲ. ಹೀಗೆ ಮಾಡಿದರೆ ಅವರು ಕೂತಿರುವ ಸನಾತನ ಧರ್ಮವೆಂಬ ಪೊಳ್ಳು ಹಡಗವು ಮುಳುಗಿಹೋಗುವುದಂತೆ. ಇದೇ ಸನಾತನ ಧರ್ಮಾನು ಯಾಯಿಗಳಲ್ಲಿ ಒಬ್ಬನು ತನ್ನ ಕೈಹಿಡಿದಾಕೆಯು ಸತ್ತುಹೋದರೆ ತನಗೆ ಅರುವತ್ತು ವರ್ಷ ದಾಟಿದರೂ ಅಪರಿಮಿತವಾಗಿ ಹಣವನ್ನು ವೆಚ್ಚ ಮಾಡಿ ಇನ್ನೊಬ್ಬ ತರುಣಿಯನ್ನು ಕೂಡಲೇ ವರಿಸುವನು. ಆಗ

ಮಾತ್ರ ಇವರ ಸನಾತನ ಧರ್ಮವು ನಾಶವಾಗುವುದಿಲ್ಲ. ಇಂತಹವರನ್ನು ರೂಢಿಯ ಗುಲಾಮರೆಂದರೆ ತಪ್ಪಾಗುವುದೇ? ಎಂದಿನ ವರೆಗೆ ನಾವು ದುಃಖಿತರಾದ ವಿಧವೆಯರಿಗೆ ಪುನರ್ವಿವಾಹದ ಸ್ವಾತಂತ್ರ್ಯವನ್ನು ಕೊಡಲಾರೆವೋ ಅಂದಿನ ವರೆಗೆ ನಮ್ಮ ಸಮಾಜವು ಉನ್ನತಿಯನ್ನೈದಲಾರದು. ಕಾರಣವೇನೆಂದರೆ ಸ್ತ್ರೀಯರೇ ಜನಾಂಗದ ಅಥವಾ ಸಮಾಜದ ಆಧಾರಸ್ತಂಭಗಳು! ಅಂತಹವರು ಬಹುಸಂಖ್ಯೆಯಲ್ಲಿ ಪ್ರಕೃತಿತತ್ವ ಸಂಬಂಧವಾದ, ಆತ್ಮಿಕ ಮತ್ತು ಮಾನಸಿಕ ಪೀಡೆಗಳಿಗೆ ಒಳಗಾದಲ್ಲಿ ಜನಾಂಗವು ನಿರ್ಬಲವಾಗುವುದು. ಈ ತರದ ನಿರ್ವೀರ್ಯ ಜನಾಂಗದಿಂದ ದೇಶಕ್ಕೆ ಯಾವ ತರದ ಪ್ರಯೋಜನವೂ ದೊರೆಯಲಿಕ್ಕಿಲ್ಲ. ಯಾವ ಕಾಲದಿಂದ ಭಾರತೀಯರು ಅಧ್ಯಾತ್ಮಿಕ ದೃಷ್ಟಿಯಿಂದ ಜಗತ್ತಿನ ವ್ಯವಹಾರಗಳನ್ನು ಬಿಟ್ಟು ಕೇವಲ ಆದಿಭೌತಿಕ ತತ್ವವನ್ನೇ ತಮ್ಮ ಧ್ಯೇಯವನ್ನಾಗಿ ಇಟ್ಟುಕೊಂಡರೋ ಆ ಕಾಲದಿಂದ ಈ ದೇಶದ ಅಧಃಪತನವಾಗುತ್ತಾ ಬಂತು. ನಮ್ಮಲ್ಲಿರುವ ಈಗಿನ ಸಂಪ್ರದಾಯವಾದಿಗಳು ತಮ್ಮಲ್ಲಿರುವ ರೂಢಿಯ ಬೇರುಗಳನ್ನು ಕಿತ್ತೊಗೆದು ಸಾರ್ವಭೌಮವಾದ ವೈದಿಕತತ್ವಗಳ ಕಡೆಗೆ ಗಮನ ಕೊಟ್ಟು ಹಿಂದೂ ಸಮಾಜಕ್ಕೆ ಭಯಂಕರವಾದ ಕಲಂಕವನ್ನು ತಂದೊಡ್ಡುತ್ತಿರುವ ಅಸಂಖ್ಯ ವಿಧವೆಯರ ಅಶ್ರುಧಾರೆಗಳನ್ನು ನಿಲ್ಲಿಸಿ ಅವರಿಗೆ ಸರ್ವಸ್ವಾತಂತ್ರ್ಯವನ್ನು ಕೊಟ್ಟು ಭಾವೀಸಂತಾನವನ್ನು ಉದ್ಧರಿಸಲು ಎಂದಿಗೆ ಮುಂದೆ ಬರುವರೋ ಅಂದಿಗೆ ನಮ್ಮ ಧರ್ಮವೂ ಸಮಾಜವೂ ಸ್ಥಿರವಾಗಿ ಉಳಿಯುವುದು.

ವಿಧವೆಯರ ವಿಷಯವು ಸಿಡುಬುರೋಗದಂತಹ ಭಯಂಕರವಾದ ಪ್ರಸಂಗವಾಗಿರುವುದೆಂದು ಕೆಲವರು ಹೇಳುತ್ತಾರೆ. ನಿರ್ಭಾಗಿನಿಯರಾದ ವಿಧವೆಯರ ಉದ್ಧಾರಕ್ಕಾಗಿ ಯಾರಾದರೂ ವಾದಿಸಿದರೆ ಇವರು ಆರ್ಯಸಮಾಜಕ್ಕೆ ಸೇರಿದವರು ಎಂದು ಹೇಳಿಬಿಡುತ್ತಾರೆ. ಶತಮಾನಗಳಿಂದ ಭಾರತೀಯರಾದ ನಾವು ಪರಕೀಯರಿಂದ ಬಂಧಿಸಲ್ಪಟ್ಟಿರುವುದರಿಂದ ನಮ್ಮ ಆತ್ಮೀಯಬಲವು ದಿನೇದಿನೇ ಕುಂದುತ್ತಾ

ಬಂತು. ಆದುದರಿಂದಲೇ ಪ್ರತಿಯೊಬ್ಬರಲ್ಲಿಯೂ ಈ ತರಹದ ಸಂಕುಚಿತ ಭಾವನೆಗಳು ಬೇರೂರಿವೆ. ಇಂದಿಗೆ ಇಡೀ ಭಾರತೀಯ ಜನಾಂಗವು ಮೃತ್ಯುಶಯ್ಯೆಯಲ್ಲಿ ಪವಡಿಸಿ ಮರಣವನ್ನು ಕಾಯುತ್ತಿದೆ. ಜನಸಾಮಾನ್ಯರ ಮಾತಂತಿರಲಿ. ದೊಡ್ಡದೊಡ್ಡ "ಜಾತೀಯ" ಮುಖಂಡರು ಸಹಾ ಹಿಂದೂ ವಿಧವೆಯರ ಕುರಿತು ಬಹಳ ಉದಾಸೀನತೆಯಿಂದಿದ್ದಾರೆ.

ಅವರ ಮೇಲೆ ಒದಗುತ್ತಿರುವ ಘೋರವಾದ ಅನ್ಯಾಯಗಳನ್ನು ದೂರಮಾಡಿ ಸಮಾಜೋಚಿತ ಕಾರ್ಯಗಳನ್ನು ಮಾಡುವಂತಹ ನೈತಿಕ ಬಲವು ನಮ್ಮಲ್ಲಿಲ್ಲ. ಅನೇಕ ಸಂವತ್ಸರಗಳಿಂದ ಅಂಧಃಪರಂಪರೆಗಳೆಂಬ ಅತೀ ದೊಡ್ಡ ಕೂಪಗಳಲ್ಲಿ ಬಿದ್ದು ಕೊಳೆಯುತ್ತಾ ಕಡೆಗೆ ಬಹು ಪ್ರಯಾಸದಿಂದ ಅಲ್ಲಿಂದೆದ್ದು ಸ್ವಾರ್ಥಸಿದ್ಧಿಗೋಸ್ಕರ ಕೇರಿಕೇರಿಗಳಲ್ಲಿ ಕೆಲವು ದೇವಸ್ಥಾನ ಮಠಗಳನ್ನು ಸ್ಥಾಪಿಸಿ ಅಶಿಕ್ಷಿತರನ್ನು ಮೋಸಗೊಳಿಸುವ ವಿಷಯವಾಸನಾಲೋಲುಪ್ತ ಮತ್ತು ಧನಪಿಪಾಸಕರಾದ ಕೆಲವು ಸಮಾಜದ ಮುಖಂಡರುಗಳಿಂದಲೂ, ಧರ್ಮಗುರುಗಳೆಂದು ಹೇಳಿಸಿಕೊಳ್ಳುವ ಈಗಿನ ಕೆಲವು ಮಠಾಧಿಪತಿ ಅಥವಾ ಸನ್ಯಾಸಿಗಳಿಂದಲೂ ಹಿಂದೂಗಳಲ್ಲಿರುವ ಸಮಾಜಸಂಘಟನೆಯು ಸಂಪೂರ್ಣ ನಾಶವಾಗಿ ಎಲ್ಲಾ ತರಹದ ಉದಾಸೀನತೆಯು ಇಡೀ ಸಮಾಜವನ್ನಾವರಿಸಿಕೊಂಡಿತು.

## ರಾಷ್ಟ್ರದ ಪ್ರಶ್ನೆ.

ರಾಷ್ಟ್ರದ ಉನ್ನತಿಗೆ ಸಮಾಜ ಸಂಘಟನೆಯ ಪ್ರಶ್ನೆಯು ಎಷ್ಟು ಅಗತ್ಯವಿದೆಯೋ ಅದಕ್ಕಿಂತಲೂ ಇಮ್ಮಡಿಯಾಗಿ ವಿಧವೆಯರ ಪ್ರಶ್ನೆಯು ಇಡೀ ರಾಷ್ಟ್ರದ ಪ್ರಶ್ನೆಯಾಗಿರುತ್ತದೆ. ಇತ್ತೀಚೆಗೆ ಇವರ ಜೀವನವು ಅತ್ಯಂತ ಭಯಂಕರ ಪರಿಸ್ಥಿತಿಗೆ ಮುಟ್ಟಿರುವುದೆಂಬುದನ್ನು ನಾವಿಲ್ಲಿ ಪ್ರತ್ಯೇಕ ವಿವರಿಸಬೇಕಾಗಿಲ್ಲ. ಬಾಲ್ಯ ಮತ್ತು ಪ್ರೌಢ ವಿಧವೆಯರ ವಿವಾಹವನ್ನು ಬಾಯಿತುಂಬಾ ಸಮರ್ಥಿಸುತ್ತಾರೆ.

ಪರಂತು ಅದರಂತೆ ವರ್ತಿಸುವರೆ ನೂರು ಮೂರು ಹಿಂದೆ ಸರಿಯು ತ್ತಾರೆ. ವಿಧವಾವಿವಾಹದ ಚಳವಳದಲ್ಲಿ ಮುಂದೆ ಬಂದರೆ ತಮಗೆ ಸಮಾಜದಿಂದ ಬಹಿಷ್ಕಾರಪದವಿಯು ದೊರೆಯುವದೆಂಬ ಹೆದರಿಕೆಯು ಸಾಮಾನ್ಯ ಜನರಲ್ಲಿಯೂ ತಮ್ಮ ಮುಂದಾಳುತನಕ್ಕೆ ಇತಿಶ್ರೀ ಯಾದೀತೆಂಬ ಭಯವು ಕೆಲವು ಸಮಾಜ ಮುಖಂಡರಲ್ಲಿಯೂ, ತಮ್ಮಲ್ಲಿನ ಉಚ್ಚವರ್ಗದ ಮೂಗು ಸವೆದುಹೋದೀತೆಂಬ ಅನು ತಾಪವು ಅಲ್ಪ ಸ್ವಲ್ಪ ಮಂದಿ ಸ್ತ್ರೀಯರಲ್ಲಿಯೂ ತುಂಬಿಹೋಗಿರು ವುದರಿಂದ ಸಮಾಜ ಸುಧಾರಣೆಯ ಕಾರ್ಯವು ಬಹಳ ಕಷ್ಟತರ ದ್ದೆಂದು ಕಂಡುಬರುತ್ತದೆ. ಇಂತಹ ಭಯ ಮತ್ತು ಕಷ್ಟದಿಂದ ನಾವು ತಪ್ಪಬೇಕಾದರೆ ನಮ್ಮಲ್ಲಿನ ಬಹುವಿಧದ ಅಂಧರೂಢಿಗಳ ಬಂಧನದಿಂದ ನಾವು ಮುಕ್ತರಾಗಬೇಕು. ಎಂದಿನ ವರೆಗೆ ನಾವು ಈ ಬಂಧನೆಯಲ್ಲಿರುವೆವೋ ಅಂದಿನ ವರೆಗೆ ದೇಶದ, ಸಮಾಜದ ಅಥವಾ ಇನ್ನಿತರ ಯಾವ ಉನ್ನತಿಯ ಕಾರ್ಯವನ್ನೂ ಮಾಡಲಾರೆವು. ಹಿಂದೂಸಮಾಜದ ರೂಢಿಯ ಆಚರಣೆಯ ಕುರಿತು ಅಲಹಾಬಾದಿನ ಪ್ರಸಿದ್ಧ ಹಿಂದೀಪತ್ರಿಕೆಯಾದ "ಚಾಂದ್" ಎಂಬುದರ ವಿಧವಾ ಅಂಕದಲ್ಲಿ ಪ್ರಕಟವಾದ ಆದೊಂದು ಲೇಖನದ ಸಾರಾಂಶವನ್ನು ಇಲ್ಲಿ ವಾಚಕರ ಮುಂದಿಡುತ್ತೇವೆ.

"ಪ್ರಚಲಿತಕಾಲದಲ್ಲಿ ಹಿಂದೂ ಸಮಾಜಕ್ಕೆ ಅಂಟಿಕೊಂಡಿರುವ ರೂಢಿಯ ಆಚರಣೆಯಿಂದ ಸಮಾಜಕ್ಕೆ ಯಾವ ಪ್ರಯೋಜನವೂ ಇಲ್ಲ. ಇದರಿಂದ ಪರಸ್ಪರ ಹಿತಸಾಧನೆಯು ಹೆಚ್ಚುತ್ತದಲ್ಲದೆ ಮಾನವ ಜೀವನದ ವೃದ್ಧಿಯ ಸಾಹಸವು ನಾಶವಾಗುತ್ತದೆ. ಇದರಿಂದ ಒಂದೊಂದು ವೇಳೆ ಮರಣವು ಸಂಭವಿಸುವುದುಂಟು. ರೂಢಿಯನ್ನಾ ಚರಿಸುವುದರಲ್ಲಿ ಪಾಶ್ಚಾತ್ಯರೇ ಅಗ್ರಗಣ್ಯರೆಂದು ಹೇಳಲ್ಪಡುತ್ತಿದ್ದಾರೆ. ಪರಂತು ಭಾರತವರ್ಷದ ಪರಿಸ್ಥಿತಿಯನ್ನು ನೋಡಿದರೆ ರೂಢಿಯನ್ನಾ ಚರಿಸುವುದರಲ್ಲಿ ಅವರಿಗೂ ನಮಗೂ ಬಹಳ ವ್ಯತ್ಯಾಸ ಕಂಡುಬರು

ತ್ರದೆ. ಫ್ರಾನ್ಸಿನವರು ರಾಷ್ಟ್ರೀಯ ಸ್ವತಂತ್ರತೆ, ಸಮತಾವಾದ ಮುಂತಾದ ಎಲ್ಲಾ ಸಂಸ್ಥೆಗಳನ್ನು ಅಡಿಮೇಲುಮಾಡಿ ರಾಜನೀತಿಯ ಪ್ರಾಚೀನ ಮರ್ಯಾದೆಯನ್ನು ಸಂಪೂರ್ಣ ನಾಶಗೊಳಿಸಿದರು. ರಾಜನನ್ನೂ ರಾಜಸತ್ತೆಯನ್ನೂ ನದೆಬಡಿದು ಅಧಿಕಾರದಿಂದ ತಳ್ಳಿದರು. ಪರಂತು ಬ್ರಿಟಿಷರು ಅನೇಕ ರೂಢಿಗಳನ್ನು ಪಾಲಿಸಿಕೊಂಡಿದ್ದರೂ ಈ ವಿಧದ ಉತ್ಪಾತಗಳನ್ನು ಮಾಡಲಿಲ್ಲ. ತಮ್ಮಲ್ಲಿದ್ದ ರಾಜಕೀಯ ಸಂಸ್ಥೆಗಳನ್ನು ಇದ್ದಂತೆಯೇ ಇರಗೊಡಿಸಿದರು. ಸ್ವತಂತ್ರತೆ, ಸಮಾನತೆ ಮುಂತಾದುವುಗಳಲ್ಲಿ ಮಾತ್ರ ಫ್ರಾನ್ಸಿನವರಿಗಿಂತಲೂ ಹೆಚ್ಚಿನ ಪರಿವರ್ತನೆಯನ್ನು ಮಾಡಿ ಬಹಳ ಪ್ರಯೋಜನವನ್ನು ಹೊಂದಿದರು. ಇವರ ರಾಜನೂ, ರಾಜಸತ್ತೆಯೂ ಇಂದಿನವರೆಗೆ ಸ್ಥಿರವಾಗಿ ನಿಂತಿದೆ. ಇವರು ಫ್ರಾನ್ಸಿನವರಿಗಿಂತ ಕನಿಷ್ಠರೀತಿಯಲ್ಲಿಲ್ಲ. ಪ್ರಜಾವಾದವು (Democracy) ಫ್ರಾನ್ಸಿಗಿಂತಲೂ ಇಂಗ್ಲೆಂಡಿನಲ್ಲಿ ಅತ್ಯಧಿಕವಾಗಿದೆ.

ಈ ಪ್ರಕಾರ ರೂಢಿಯ ಆಚರಣೆಯು ಇಂಗ್ಲೆಂಡಿನಲ್ಲಿದೆಯಾದರೂ ಅಲ್ಲಿಯವರ ಬುದ್ಧಿ ಮತ್ತು ಸಾಹಸವು ಕಡಿಮೆಯಾಗಿಲ್ಲ. ಯಾವದಾದರೊಂದು ವಿಷಯದ ನಿಜವಾದ ತತ್ವದಲ್ಲಿ ಯೋಗ್ಯವಾದ ಸಫಲತೆ ದೊರೆಯುವುದೆಂದು ಅವರಿಗೆ ಸಂಪೂರ್ಣ ವಿಶ್ವಾಸವಾದರೆ ಅದನ್ನು ಸ್ವೀಕರಿಸುವುದರಲ್ಲಿಯೂ ಇದಕ್ಕೆ ಪ್ರತಿಕೂಲವಾಗಿದ್ದಲ್ಲಿ ಕೂಡಲೆ ತ್ಯಜಿಸುವುದರಲ್ಲಿಯೂ ಅವರು ಸಾಹಸಪಡುತ್ತಾರೆ. ಕೆಲವು ವೇಳೆ ದುಷ್ಪರಿಣಾಮಕಾರಿಗಳಾದ ಕೆಲವು ಪದ್ಧತಿಗಳನ್ನು ಬಾಹ್ಯರೂಪದಿಂದ ಇಟ್ಟುಕೊಂಡಿದ್ದರೂ ಅದರ ಆಂತರಿಕ ಬಲವನ್ನು ಅವರು ನಾಶಗೊಳಿಸದೆ ಇರುವುದಿಲ್ಲ. ದೃಷ್ಟಾಂತವಾಗಿ ಸರ್ಪವನ್ನು ಕೊಲ್ಲದಿದ್ದರೂ ಅದರ ವಿಷದಂತವನ್ನು ತೆಗೆದುಬಿಡುವರು. ಇಂತಹ ಬುದ್ಧಿಚಾತುರ್ಯವು ಇಂಗ್ಲೀಷರಲ್ಲಿ ತುಂಬಿಹೋಗಿರುವುದರಿಂದಲೇ ಆರ್ಯಾವರ್ತವನ್ನು ತಮ್ಮ ಶಾಸನದಲ್ಲಿ ಇದುವರೆಗೂ ಇಟ್ಟುಕೊಂಡಿದ್ದಾರೆ.

ಭಾರತ ವರ್ಷದಲ್ಲಿ ಇಂತಹ ಪದ್ಧತಿಯು ಭಿನ್ನಭಿನ್ನ ರೀತಿಯಲ್ಲಿದೆ. ಸಾಧಾರಣ ಮೂರು ಸಾವಿರ ವರ್ಷಗಳಿಂದ ನಿರ್ಭಾಗ್ಯಶಾಲಿಯಾದ ಹಿಂದೂಜಾತಿಯು ಧಾರ್ಮಿಕ, ಸಾಮಾಜಿಕ ನೈತಿಕ ಮುಂತಾದ ಯಾವ ವಿಷಯಗಳಲ್ಲಿಯೂ ಮನಸ್ಸನ್ನಿಡದೆ ತನ್ನ ಕಿವಿಗಳಿಗೆ ಬಲವಾದ ಬೀಗಮುದ್ರೆಯನ್ನು ಮಾಡಿಕೊಂಡು ಆಲಸ್ಯದಿಂದ ಸುಖವಾಗಿ ನಿದ್ರಿಸಿತು. ಇಂದಿಗೆ ಸುಮಾರು ಎರಡು ಸಾವಿರ ವರ್ಷಗಳ ಮೊದಲಿನ ಭಾರತೀಯರು ಜೀವಾತ್ಮ ಪರಮಾತ್ಮ ಪ್ರಕೃತಿ ಮುಂತಾದ ಅಗಾಧ ತತ್ವಗಳನ್ನು ಮಥನೆ ಮಾಡಿ, ಅವುಗಳ ನಿಜವಾದ ಜ್ಞಾನವನ್ನು ಜಗತ್ತಿನ ಮುಂದೆ ಪ್ರಕಾಶಪಡಿಸುತ್ತಿದ್ದರು. ಆ ಕಾಲದಲ್ಲಿ ಪಾಶ್ಚಾತ್ಯ ಜನರು ಕಾಡುಗುಡ್ಡಗಳಲ್ಲಿ ವಾಸಿಸುತ್ತಾ ದುರ್ಗಂಧಯುಕ್ತವಾದ ಚರ್ಮವನ್ನು ಹೊದ್ದುಕೊಳ್ಳುತ್ತಿದ್ದರು. ಪರಂತು ಇದೇ ಜನಾಂಗವು ಇಂದಿಗೆ ನಮ್ಮ ಮುಂದೆ ಭವ್ಯವಾದ ಭವನಗಳಲ್ಲಿ ವಾಸಿಸುತ್ತಾ ಸುಂದರವಾದ ವಿಮಾನಗಳಲ್ಲಿಯೂ ನೌಕೆಗಳಲ್ಲಿಯೂ ಕುಳಿತುಕೊಂಡು ಸಂಚರಿಸುತ್ತಾ ಸಾಗರದ ಆ ದಡದಲ್ಲಿ ಶಾಸನವನ್ನು ಮಾಡುತ್ತಿದ್ದಾರೆ. ಭಾರತೀಯರು ಸಹ ಇದೇ ರೀತಿಯ ಪರಿವರ್ತನೆಗೀಡಾಗಿ ಅಂದಿನಂತೆ ಈಗಿರದೆ 'ತಿರಿದುಂಒಗೆ ಒಪ್ಪೊತ್ತಿಗಿಲ್ಲ' ಎಂಬಂತೆ ಜೀವನದಲ್ಲಿ ಜಿಗುಪ್ಸೆಯನ್ನು ತಾಳಿಕೊಂಡಿದ್ದಾರೆ. ಇತಿಹಾಸಗಳನ್ನು ಸರಿಯಾಗಿ ಮನನ ಮಾಡಿದಲ್ಲಿ ನಮಗೆ ಬಹಳವಾದ ಲಜ್ಜೆಯುಂಟಾಗುತ್ತದೆ. ಯಾವ ಕಾಲದಲ್ಲಿ ಯಾರು ಉನ್ನತಿಯ ಸ್ಥೈದಬೇಕಾಗಿತ್ತೋ ಅವರೆಲ್ಲರೂ ಅಧಃಪತನದಲ್ಲಿ ಬಿದ್ದಿರುವರು. ಇತರರು ಜಗತ್ತಿಗೇ ದೊಡ್ಡ ಸಭ್ಯ ಜನಾಂಗವೆಂದು ಹೇಳಿಸಿಕೊಳ್ಳುತ್ತಿದ್ದಾರೆ.

ಯಾವ ಸಮಯದಲ್ಲಿ ಆಂಗ್ಲೇಯರು ಬುದ್ಧಿಚತುರತೆಯಿಂದ ತಮ್ಮಲ್ಲಿನ ಸಾಮಾಜಿಕ ನಿರ್ಬಲತೆಯನ್ನು ದೂರಮಾಡಿಕೊಳ್ಳುತ್ತಿದ್ದರೋ ಅದೇ ಸಮಯದಲ್ಲಿ ಹಿಂದೂಗಳು ತಮ್ಮ ಮಕ್ಕಳನ್ನು ಗಂಗಾನದಿಯಲ್ಲಿ ಬಿಸುಟು ಗಂಗೆಯನ್ನು ಪ್ರಸನ್ನಗೊಳಿಸುತ್ತಿದ್ದರು.

ವಿಧವೆಯರನ್ನು ಅವರ ಮೃತಪತಿಯ ಕಾಷ್ಟದಲ್ಲಿಟ್ಟು ಜೀವಸಹಿತ ಸುಡುತ್ತಿದ್ದರು. ಶಿಶುಗಳು ಗರ್ಭದಲ್ಲಿದ್ದಾಗಲೆ ಅವುಗಳಿಗೆ ಪಾಣಿ ಗ್ರಹಣವಾಗುತ್ತಿತ್ತು. ವರಶುಲ್ಕ ಅಥವಾ ಕನ್ಯಾಶುಲ್ಕವೆಂಬ ಅದೊಂದು ಪದ್ಧತಿಯಿಂದ ಒಬ್ಬೊಬ್ಬರು ಹತ್ತರಂತೆ ವಿವಾಹವನ್ನು ಮಾಡಿಕೊಳ್ಳುತ್ತಿದ್ದರು. ಈ ಎಲ್ಲಾ ಕಾರಣಗಳಿಂದ ಇಂಗ್ಲೆಂಡು ಮತ್ತು ನಮ್ಮಲ್ಲಿನ ರೂಢಿಯ ಆಚರಣೆಯಲ್ಲಿ ಬಹಳ ತಾರತಮ್ಯವಿದೆ. ಪರಸ್ಪರ ಸಹಾಯಶೂನ್ಯತೆ, ಬುದ್ಧಿಶೂನ್ಯತೆ, ವೈಯಕ್ತಿಕ ಸ್ವಾರ್ಥ ಪರಾಯಣತೆ ಮುಂತಾದ ದುರ್ಗುಣಗಳೇ ನಮ್ಮ ರೂಢಿಯ ಆಚರ ಣೆಗೆ ಮುಖ್ಯ ಸಾಧನಗಳಾಗಿವೆ. ಇವುಗಳಿಂದಲೇ ನಾವು ನಿಸ್ತೇಜ ರಾಗಿದ್ದೇವೆ. ಹಿಂದೂ ಸಮಾಜಕ್ಕೆ ಯಾವ ರೋಗವು ತಗಲಿರುತ್ತದೆ ಎಂಬುದನ್ನಾದರೂ ತಿಳಿದುಕೊಳ್ಳುವಷ್ಟು ಬುದ್ಧಿಶಕ್ತಿಯು ಪ್ರಕೃತ ನಮ್ಮಲ್ಲಿಲ್ಲ. ಅಲ್ಪ ಸ್ವಲ್ಪ ಅನುಭವಕ್ಕೆ ಬಂದರೂ ಅದನ್ನು ನಿವಾರಿಸು ವಂತಹ ಸಾಹಸವು ಎಳ್ಳಷ್ಟೂ ಇಲ್ಲ. ಹಿಂದೂಗಳಲ್ಲಿ ಹೆಚ್ಚಿನವರು ವಿಧವೆಯರ ಯಾತನಾತೀತವಾದ ಸಮಸ್ಯೆಯನ್ನು ತಿಳಿದುಕೊಳ್ಳು ವಷ್ಟು ವಿಶಾಲಬುದ್ಧಿಯುಳ್ಳವರಾಗಿಲ್ಲ. ಕೆಲವರಲ್ಲಿ ಅದು ಅಲ್ಪಸ್ವಲ್ಪ ವಾಗಿದ್ದರೂ ಅವರೆಲ್ಲರೂ ಬಲವಾದ ಅಂಧಃಶ್ರದ್ಧೆಯಲ್ಲಿರುವುದರಿಂದ ವಿಧವೆಯರನ್ನು ಕಣ್ಣೆತ್ತಿ ನೋಡಲೂ ಕೂಡ ಅಸಮರ್ಥರಾಗಿರುವರು. ಮತ್ತೆ ಕೆಲವರು ಅವರ ಕಷ್ಟವನ್ನು ತಿಳಿದು ದಯೆಯುಳ್ಳವರಾಗಿ "ವಿಧವೆಯರ ಕಾರಣದಿಂದಲೇ ಹಿಂದೂ ಸಮಾಜವು ದುರ್ಬಲಾವಸ್ಥೆ ಯಲ್ಲಿ ಬಿದ್ದಿದೆ—! ಪ್ರಚಲಿತ ಕಾಲದಲ್ಲಿರುವ ಸಂಪ್ರದಾಯಗಳೇ ಇವರ ಮೇಲೆ ಅತ್ಯಾಚಾರವನ್ನೆಸಗುತ್ತಿವೆ;" ಎನ್ನುವರೇ ಹೊರತು ಮುಂದೆ ಬಂದು ಇದರ ಕಾರ್ಯಕ್ರಮದಲ್ಲಿ ಕೈಹಾಕಲು ಪ್ರಯತ್ನ ಪಡುವುದಿಲ್ಲ. ಆದುದರಿಂದಲೇ ಹಿಂದೂಸಮಾಜದ ಆಂತರಿಕ ಸ್ಥಿತಿ ಗತಿಯು ಸಂಪೂರ್ಣವಾಗಿ ಸುಧಾರಿಸಿಲ್ಲ. ಒಂದು ವಿಧದಲ್ಲಿ ನಮ್ಮ ಸಮಾಜವು 'ಸತ್ತುಬಿದ್ದ ಬೆಕ್ಕಿ'ನಂತೆ ಸಹಾಯಶೂನ್ಯತೆಯಲ್ಲಿದೆ ಎಂದರೂ ತಪ್ಪಾಗದು.

ವಿಧವೆಯರ ಕುರಿತು ಸುಧಾರಣಾ ಕಾರ್ಯವನ್ನು ಕೈಕೊಂಡರೆ ನಮ್ಮಲ್ಲಿ ಬಲವಾಗಿ ಅಂಟಿಕೊಂಡಿರುವ ರೂಢಿಯ ಆಚರಣೆಗಳೆಲ್ಲವೂ ನಮಗೆ ಅಡ್ಡಿ ನಿಲ್ಲುತ್ತವೆ. ಒಂದು ಕಾಲದಲ್ಲಿ ಟರ್ಕಿ, ಇರಾಣ, ಚೀನಾ, ಜಪಾನ ಮುಂತಾದ ರಾಷ್ಟ್ರಗಳು ಬಲವಾದ ರೂಢಿಯಲ್ಲಿ ಬಂಧಿಸಲ್ಪಟ್ಟಿದ್ದವು. ಇದನ್ನು ತ್ಯಜಿಸಿದುದರಿಂದಲೇ ಅವೆಲ್ಲವೂ ಉನ್ನತಿಯ ಶಿಖರವನ್ನೇರಿದವು. ಹಿಂದೂಸ್ಥಾನವು ಮಾತ್ರ ಇನ್ನೂ ಅನ್ಯರ ಪಾದಾಕ್ರಾಂತದಲ್ಲಿದೆ. ಜಗತ್ತಿನ ಒಂದೊಂದೇ ರಾಷ್ಟ್ರಗಳನ್ನು ನಾವು ನೋಡಿದರೆ ಪ್ರತಿಯೊಂದು ರಾಷ್ಟ್ರವೂ ಸರಿಯಾಗಿ ಕಣ್ತೆರೆದು ತನ್ನತನ್ನ ಉನ್ನತಿಯನ್ನು ಮಾಡಿಕೊಂಡು ಬರುತ್ತಿರುವುದು ಕಂಡುಬರುತ್ತಿದೆ. ಮುಸ್ತಫಾ ಕಮಾಲ್‌ಪಾಶಾರವರು ತನ್ನ ಪತ್ನಿಯನ್ನು ಪರದೆ (ಘೋಷಾ)ಯಿಂದ ಹೊರತೆಗೆದರು. ಮುಹಮ್ಮದೀಯ ಜನಾಂಗದಲ್ಲಿ ಪ್ರಬಲವಾಗಿ ಅಂಟಿಕೊಂಡಿದ್ದ ಘೋಷಾ ಪದ್ಧತಿಯನ್ನು ಕಿತ್ತೊಗೆದ ಈ ಉದಾಹರಣೆಯು ಅತ್ಯಂತ ಪ್ರಾಮುಖ್ಯವಾಗಿರುತ್ತದೆ. ಪ್ರತಿಯೊಂದು ರಾಷ್ಟ್ರಗಳೂ ಈ ವಿಧದ ಸುಧಾರಣೆಯನ್ನು ಮಾಡಿಕೊಳ್ಳುತ್ತಿವೆಯಾದರೂ ನಾವು ಮಾತ್ರ ಇದ್ದಲ್ಲೇ ಇದ್ದೇವೆ. ಪ್ರಕೃತ ವಿಧವೆಯರ ದಿನನಿತ್ಯದ ದುಃಖಾಗ್ನಿಯೇ ಹಿಂದೂ ಸಮಾಜವನ್ನು ಒಳಗಿಂದೊಳಗೆ ದಹಿಸುತ್ತಿದೆ. ಹಿಂದೂಸ್ಥಾನದಂತೆ ಇತರ ದೇಶಗಳಲ್ಲಿಯೂ ವಿಧವೆಯರಿದ್ದಾರೆ. ಪರಂತು ಇಲ್ಲಿರುವಷ್ಟು ಅಧಿಕ ಸಂಖ್ಯೆಯಲ್ಲಿ ಮತ್ತು ದುಃಸ್ಥಿತಿಯಲ್ಲಿ ಎಲ್ಲಿಯೂ ದೊರೆಯಲಿಕ್ಕಿಲ್ಲ. ಈಗ ನಾವು ಜಗತ್ತಿನಲ್ಲಿರುವ ಸ್ತ್ರೀಯರಲ್ಲಿ ವಿವಾಹಿತ ಮತ್ತು ಅವಿವಾಹಿತರ ಸಂಖ್ಯೆಯನ್ನು ಇಲ್ಲಿ ವಿವರಿಸುತ್ತೇವೆ.



## ೬. ಜಗತ್ತಿನಲ್ಲಿರುವ ಸ್ತ್ರೀಯರ ಸಂಖ್ಯೆ.

15 ಯಾ ಅದಕ್ಕೆ ಮಿಕ್ಕಿದ ಪ್ರಾಯಸ್ಥರು.

| ಸಂಖ್ಯೆ | ದೇಶಗಳ ಹೆಸರು | ಸ್ತ್ರೀಯರ ಒಟ್ಟು ಸಂಖ್ಯೆ | ಪ್ರತಿ ಸಾವಿರದಲ್ಲಿ ಅವಿವಾಹಿತೆಯರ ಸಂಖ್ಯೆ | ಪ್ರತಿ ಸಾವಿರದಲ್ಲಿ ವಿವಾಹಿತೆಯರ ಸಂಖ್ಯೆ |
|---|---|---|---|---|
| 1 | ಇಂಗ್ಲೆಂಡ್ ಮತ್ತು ವೇಲ್ಸ್ | 1,15,18,800 | 395 | 497 |
| 2 | ಸ್ಕೋಟ್ಲೆಂಡ್ | 15,59,200 | 445 | 443 |
| 3 | ಆಯರ್ಲೆಂಡ್ | 15,93,000 | 497 | 371 |
| 4 | ಜರ್ಮನಿ | 1,88,45,800 | 352 | 520 |
| 5 | ಆಸ್ಟ್ರಿಯಾ | 87,99,000 | 262 | 510 |
| 6 | ಹಂಗೇರಿ | 62,48,600 | 233 | 625 |
| 7 | ರಷ್ಯಾ | 3,90,15,400 | 224 | 641 |
| 8 | ಫಿನ್ಲೇಂಡ್ | 9,05,700 | 680 | 501 |
| 9 | ಫ್ರಾನ್ಸ್ | 1,45,28,300 | 286 | 548 |
| 10 | ಇಟೆಲಿ | 1,06,34,800 | 318 | 548 |
| 11 | ಪೋರ್ಚುಗಲ್ | 19,32,900 | 406 | 468 |
| 12 | ಸ್ವಿಸರ್ಲೇಂಡ್ | 11,74 900 | 410 | 459 |

| ಸಂಖ್ಯೆ | ದೇಶಗಳ ಹೆಸರು | ಸ್ತ್ರೀಯರ ಒಟ್ಟು ಸಂಖ್ಯೆ | ಪ್ರತಿ ಸಾವಿರದಲ್ಲಿ ಅವಿವಾಹಿತೆಯರ ಸಂಖ್ಯೆ | ಪ್ರತಿ ಸಾವಿರದಲ್ಲಿ ವಿವಾಹಿತೆಯರ ಸಂಖ್ಯೆ |
|---|---|---|---|---|
| 13 | ನೋರ್ವೆ | 7,67,300 | 414 | 470 |
| 14 | ಸ್ವೀಡನ್ | 18,09,600 | 412 | 468 |
| 15 | ಡೆನ್‌ಮಾರ್ಕ್ | 8,45,000 | 375 | 503 |
| 16 | ಹೊಲ್ಲೆಂಡ್ | 17,01,300 | 399 | 494 |
| 17 | ಬೆಲ್ಜಿಯಮ್ | 23,11,700 | 394 | 495 |
| 18 | ಸರ್ವಿಯಾ | 6,97,000 | 151 | 727 |
| 19 | ರೊಮೇನಿಯಾ | 17,43,900 | 194 | 654 |
| 20 | ಬಲ್ಗೇರಿಯಾ | 10,91,100 | 205 | 687 |
| 21 | ಲಕ್ಸ್ಸ್‌ಬರ್ಗ್ | 80,400 | 280 | 499 |
| 22 | ಯುನೈಟೆಡ್ ಸ್ಟೇಟ್ಸ್ ಅಮೇರಿಕ | 24,22,600 | 312 | 571 |
| 23 | ಜಪಾನ್ | 1,54,11,800 | 466 | 584 |
| 24 | ಹಿಂದುಸ್ಥಾನ | 8,96,78,100 | 45 | 669 |

## ವಿಧವೆಯರ ಸಂಖ್ಯೆ

ಮೇಲೆ ಕಾಣಿಸಿದ ಕ್ರಮದಂತೆ 24 ದೇಶಗಳಲ್ಲಿಯ ಸ್ತ್ರೀಯರಲ್ಲಿ ವಿಧವೆಯರ ಮತ್ತು ವಿವಾಹ ವಿಚ್ಛೇದವಾದವರ ಸಂಖ್ಯೆಯನ್ನೂ ಕೆಳಗೆ ವಿವರಿಸುತ್ತೇವೆ.

| ಸಂಖ್ಯೆ | ವಿಧವೆಯರು ಪ್ರತಿ ಸಾವಿರದಲ್ಲಿ | ವಿವಾಹವಿಚ್ಛೇದವಾದವರು ಪ್ರತಿ ಸಾವಿರದಲ್ಲಿ |
|---|---|---|
| 1 | 108 | .... |
| 2 | 112 | .... |
| 3 | 132 | .... |
| 4 | 125 | 3 |
| 5 | 123 | .... |
| 6 | 140 | 2 |
| 7 | 134 | 1 |
| 8 | 118 | 1 |
| 9 | 166 | .... |
| 10 | 13 | .... |
| 11 | 125 | 1 |
| 12 | 123 | 8 |
| 13 | 115 | 1 |
| 14 | 118 | 2 |
| 15 | 119 | 3 |
| 16 | 105 | 2 |
| 17 | 109 | .... |
| 18 | 119 | 3 |
| 19 | 146 | 6 |
| 20 | 105 | 3 |

| ಸಂಖ್ಯೆ | ವಿಧವೆಯರು ಪ್ರತಿ ಸಾವಿರದಲ್ಲಿ | ವಿವಾಹವಿಚ್ಛೇದವಾದವರು ಪ್ರತಿ ಸಾವಿರದಲ್ಲಿ |
|---|---|---|
| 21 | 120 | 1 |
| 22 | 112 | 5 |
| 23 | . | .... |
| 24 | 286 | .... |

ಜಗತ್ತಿನ ಎಲ್ಲಾ ರಾಷ್ಟ್ರಗಳಿಗಿಂತ ಭಾರತವರ್ಷದಲ್ಲಿ ಹೆಚ್ಚು ಮಂದಿ ವಿಧವೆಯರಿರುತ್ತಾರೆ. ಆ ವಿವರವು ಈ ಕೆಳಗಿನಂತಿದೆ:—

| ದೇಶಗಳ ಹೆಸರು | ಪ್ರತಿ ಸೇಕಡಾ ವಿಧವೆಯರು | ದೇಶಗಳ ಹೆಸರು | ಪ್ರತಿ ಸೇಕಡಾ ವಿಧವೆಯರು |
|---|---|---|---|
| ಯುನೈಟೆಡ್ ಕಿಂಗ್ಡಮ್ | 7 | ಡೆನ್ಮಾರ್ಕ್ | 8 |
| ನೋರ್ವೆ | 8 | ಸ್ವೀಡನ್ | 8 |
| ಫಿನ್ಲೇಂಡ್ | 8 | ಸ್ವಿಸರ್ಲೇಂಡ್ | 8 |
| ಜರ್ಮನಿ | 9 | ಪರ್ಷಿಯಾ | 9 |
| ಬವೇರಿಯಾ | 8 | ಬಟೋರ್ಂಬರ್ | 8 |
| ಹೊಲ್ಲೆಂಡ್ | 7 | ನ್ಯೂಜಿಲೇಂಡ್ | 5 |
| ಕೇಪ್‌ಕೊಲೊನಿ | 5 | ಹಿಂದೂಸ್ಥಾನ | 18 |

ಇನ್ನು ಭಾರತವರ್ಷದ ಪ್ರತಿ ಸಂಸ್ಥಾನದ ಪ್ರತಿಯೊಂದು ಕಡೆಗಳಲ್ಲಿರುವ ವಿಧವೆಯರ ಸಂಖ್ಯೆಯನ್ನು ಅವಲೋಕಿಸಿರಿ. ಇಡೀ ಭಾರತವರ್ಷದಲ್ಲಿ 15ರಿಂದ 40 ವರ್ಷದ ವರೆಗಣ ಪ್ರಾಯದ ವಿಧವೆಯರು ಸೇಕಡಾ 10ರಂತೆ ಎಲ್ಲಾ ಜಾತಿಯಲ್ಲಿದ್ದಾರೆ. ಇದರಲ್ಲಿ ಮುಸಲ್ಮಾನ ವಿಧವೆಯರು ಸೇಕಡಾ 6ರಂತೆಯೂ, ಹಿಂದೂ ವಿಧವೆಯರು ಸೇಕಡಾ 12ರಂತೆಯೂ ಇದ್ದಾರೆ. ಇಲ್ಲಿಯ ವಿಧವೆಯರ ಸಂಖ್ಯೆಯು ಒಂದೊಂದು ಪ್ರಾಂತ್ಯದಲ್ಲಿ ಒಂದೊಂದು ವಿಧದಲ್ಲಿದೆ.

ಉತ್ತರ ಮತ್ತು ಪಶ್ಚಿಮ ಪ್ರಾಂತ್ಯಗಳಲ್ಲಿ ಸೇಕಡಾ 6ರಂತೆಯೂ, ಕಾಶ್ಮೀರದಲ್ಲಿ 7ರಂತೆಯೂ, ಮಧ್ಯಪ್ರಾಂತ್ಯ, ಬಿಹಾರ ಮತ್ತು ಪಂಜಾಬು ಪ್ರಾಂತ್ಯಗಳಲ್ಲಿ 8ರಂತೆಯೂ, ಮುಂಬಯಿ, ಸಂಯುಕ್ತ ಪ್ರಾಂತ್ಯ, ಅವಧ್, ಕೊಚ್ಚಿ, ಮಧ್ಯಹಿಂದುಸ್ಥಾನದ ದೇಶೀಯ ರಾಜ್ಯಗಳಲ್ಲಿ 11ರಂತೆಯೂ, ಮೈಸೂರು ಮತ್ತು ಅಸ್ಸಾಮಿನಲ್ಲಿ 13ರಂತೆಯೂ, ಬಂಗಾಲದಲ್ಲಿ 16ರಂತೆಯೂ ಇದ್ದಾರೆ. ಬಂಗಾಲದ ಹೊರತು ಇತರ ಪ್ರಾಂತ್ಯಗಳ ಉತ್ತಮ ಜಾತಿಯವರಲ್ಲಿ ಹೆಚ್ಚು ಮಂದಿ ವಿಧವೆಯರಿರುತ್ತಾರೆ. ಬಿಹಾರ ಮತ್ತು ಒರಿಸ್ಸಾ ಪ್ರಾಂತ್ಯಗಳ ಬ್ರಾಹ್ಮಣ, ಕಾಯಸ್ಥ, ರಜಪೂತ ಎಂಬ ಜಾತಿಯವರಲ್ಲಿ 20ರಿಂದ 40 ವರ್ಷ ಪ್ರಾಯದ ಸ್ತ್ರೀಯರಲ್ಲಿ ಸೇಕಡಾ 25ರಂತೆ ವಿಧವೆಯರಿದ್ದಾರೆ. ಚಮಾರ್, ಚಾಸರ್, ಧನುಕ, ಅಗಸ, ಗೌಳಿಗ, ಕುಂಬಾರ, ಕೋರಿ, ಕಮ್ಮಾರ, ಮುಸ್ಸೈರಿಯ, ಗಾಣಿಗ— ಈ ಜಾತಿಗಳಲ್ಲಿ ಸೇಕಡಾ 13ರಂತೆ ಇದ್ದಾರೆ. ಮುಂಬೈಯ ಬ್ರಾಹ್ಮಣರಲ್ಲಿ ಸೇಕಡಾ 26·7 ರಂತೆ ಇದ್ದಾರೆ. ಮರಾಠರಲ್ಲಿ ಸೇಕಡಾ 2·60ರಂತೆಯೂ ಇದ್ದಾರೆ. ಮೇಲಿನ ಎಲ್ಲಾ ಸಂಖ್ಯೆಗಳ ಹೆಚ್ಚಿನ ವಿವರಗಳು 'Vide Senses of India-1921. Vol. I, Part II, Page 164"ರಲ್ಲಿ ಕೊಟ್ಟಿದೆ.

**ಬೇರೆ ಬೇರೆ ದೇಶಗಳಲ್ಲಿ ಪ್ರಾಯಭರಿತರಾಗಿದ್ದು ವಿವಾಹವಾಗದೆ ಇರುವ ಸ್ತ್ರೀಯರ ಸಂಖ್ಯೆ:—**

| ದೇಶಗಳ ಹೆಸರು | ಪ್ರತಿ ಸೇಕಡಾ ಅವಿವಾಹಿತೆಯರ ಸಂಖ್ಯೆ | ದೇಶಗಳ ಹೆಸರು | ಪ್ರತಿ ಸೇಕಡಾ ಅವಿವಾಹಿತೆಯರ ಸಂಖ್ಯೆ |
|---|---|---|---|
| ಡೆನ್ಮಾರ್ಕ್ | 58 | ನೋರ್ವೆ | 61 |
| ಸ್ವೀಡನ್ | 60 | ಫಿನ್ಲೇಂಡ್ | 59 |
| ಸ್ವಿಜರ್‌ಲೇಂಡ್ | 59 | ಹಿಂದೂಸ್ಥಾನ | 34 |
| ಯುನೈಟೆಡ್ ಕಿಂಗ್ಡಮ್ | 60 | ಜರ್ಮನಿ | 57 |
| | | ಬವೇರಿಯಾ | 69 |

| ದೇಶಗಳ ಹೆಸರು | ಪ್ರತಿ ಸೇಕಡಾ ಅವಿವಾಹಿತೆಯರ ಸಂಖ್ಯೆ | ದೇಶಗಳ ಹೆಸರು | ಪ್ರತಿ ಸೇಕಡಾ ಅವಿವಾಹಿತೆಯರ ಸಂಖ್ಯೆ |
|---|---|---|---|
| ಪರ್ಷಿಯಾ | 57 | ಏಡನ್ | 59 |
| ಬರ್ಟ್ಯಾಮ್ಬರ್ಗ್ | 59 | ಬೆಲ್ಜಿಯಮ್ | 58 |
| ಹೊಲ್ಲೆಂಡ್ | 60 | ಇಟೆಲಿ | 55 |
| ಫ್ರಾನ್ಸ್ | 47 | ಆಸ್ಟ್ರೇಲಿಯನ್ ಕೊಮನ್‌ವೆಲ್ತ್ | 62 |
| ಸರ್ವಿಯಾ | 51 | | |
| ನ್ಯೂಜಿಲೇಂಡ್ | 62 | ಕೇಪ್ ಕೊಲೊನಿ | 62 |
| ಜಪಾನ್ | 64 | | |

ಈ ಸಂಖ್ಯೆಗಳಿಂದ ಹಿಂದುಸ್ಥಾನದಲ್ಲಿ ಅವಿವಾಹಿತ ಸ್ತ್ರೀಯರು ಇತರ ದೇಶಗಳಿಗಿಂತ ಕಡಿಮೆಯೆಂದು ತಿಳಿದುಬರುತ್ತಿದೆ. ಪರಂತು ವಿಧವೆಯರು ಮಾತ್ರ ಇಲ್ಲಿಯೇ ಹೆಚ್ಚು ಮಂದಿ ಇದ್ದಾರೆ. ಪ್ರತಿ ಹತ್ತು ವರ್ಷ ಪ್ರಾಯದ ಹಿಂದೂ ವಿಧವೆಯರ ಸಂಖ್ಯೆಯನ್ನು ಕೆಳಗೆ ವಿವರಿಸುತ್ತೇವೆ.

| ವಿಧವೆಯರ ಪ್ರಾಯ | ಕ್ರಿ.ಶ.1881 ವಿ. ಸಂಖ್ಯೆ | ಕ್ರಿ.ಶ.1891 ವಿ. ಸಂಖ್ಯೆ | ಕ್ರಿ.ಶ.1901 ವಿ. ಸಂಖ್ಯೆ | ಕ್ರಿ.ಶ.1911 ವಿ ಸಂಖ್ಯೆ | ಕ್ರಿ.ಶ 1921 ವಿ. ಸಂಖ್ಯೆ* |
|---|---|---|---|---|---|
| 0 — 5 | .... | 1 | 1 | 1 | 1 |
| 5 — 10 | 2 | 3 | 5 | 4 | 5 |
| 10 — 15 | 19 | 14 | 18 | 15 | 17 |
| 15 — 20 | 44 | 35 | 44 | 37 | 41 |
| 20 — 30 | 96 | 81 | 82 | 82 | 92 |
| 30 — 40 | 225 | 208 | 214 | 200 | 214 |
| 40 — 60 | 517 | 513 | 503 | 501 | 494 |
| 60 ಮತ್ತು ಅದಕ್ಕೆ ಮಿಕ್ಕಿದವರು | 846 | 849 | 825 | 830 | 814 |

* ವಿ. ಸಂಖ್ಯೆ = ವಿಧವೆಯರ ಸಂಖ್ಯೆ.

15ರಿಂದ 40 ವರ್ಷ ಪ್ರಾಯದ ಸ್ತ್ರೀಯರು ಒಟ್ಟಿಗೆ 6 ಕೋಟಿ 11ಲಕ್ಷ 85 ಸಾವಿರದ 638 ಮಂದಿ ಇದ್ದಾರೆ. ಇವರಲ್ಲಿ 60 ಲಕ್ಷ 71 ಸಾವಿರದ 206 ಮಂದಿ ಉಚ್ಚ ಜಾತಿಯ ವಿಧವೆಯರಾಗಿದ್ದಾರೆ. "Vide Senses of India 1921. Vol. I, Part II, Page 46.

ಹಿಂದೂ ಸಮಾಜ ಸುಧಾರಕರಲ್ಲಿ ಅನೇಕರು ಹಗಲಿರುಳು ಹೋರಾಡಿ ವಿಧವೆಯರ ಸಂಖ್ಯೆಯನ್ನು ಕಡಿಮೆ ಮಾಡುವ ಕಾರ್ಯವನ್ನು ಕೈಕೊಂಡರೂ ಯೋಗ್ಯವಾದ ಪರಿಣಾಮವು ಸಮಾಜದಲ್ಲಿ ಇನ್ನೂ ಉಂಟಾಗಲಿಲ್ಲವೆನ್ನುವುದಕ್ಕೆ ಮೇಲೆ ವಿವರಿಸಿದ ಸಂಖ್ಯೆಗಳೇ ಪ್ರಬಲ ಪ್ರಮಾಣಗಳಾಗಿರುತ್ತವೆ. ಇವುಗಳನ್ನೆಲ್ಲಾ ಚೆನ್ನಾಗಿ ಪರಿಶೀಲಿಸಿ ನೋಡಿದರೆ ಹಿಂದೂಜನರು ತಮ್ಮಲ್ಲಿಯ ರೂಢಿಯ ಆಚರಣೆಯನ್ನೂ ಸಮಾಜ ಸಂಕೀರ್ಣತೆಯನ್ನೂ ಜಗತ್ತಿಗೆ ಹೇಗೆ ಪ್ರಕಾಶಪಡಿಸುತ್ತಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಇಲ್ಲಿಯ ವಿಧವೆಯರ ಸಂಖ್ಯೆಯನ್ನು ನೋಡಿದ ಯಾವನೊಬ್ಬ ಭಾರತೀಯನ ಹೃದಯವೂ ಕಂಪಿಸದಿರಲಿಕ್ಕಿಲ್ಲ. ಇಷ್ಟು ಮಂದಿ ವಿತಂತುಗಳ ಉದ್ಧಾರದ ಬಗೆ ಹೇಗೆ ಎಂಬುದನ್ನು ನಮ್ಮಲ್ಲಿ ಯಾರಾದರೂ ಯೋಚಿಸುತ್ತಾರೆಯೇ? ದುರ್ಭಾಗಿನಿಯರಾದ ವಿಧವೆಯರು ದಿನನಿತ್ಯವೂ ಸುರಿಸುವ ಅಶ್ರುಧಾರೆಯನ್ನು ಹೇಗೆ ನಿಲ್ಲಿಸಬಹುದು? ಇವರ ಸಂಖ್ಯೆಗಳನ್ನು ಹೇಗೆ ಕಡಿಮೆಮಾಡಬಹುದು? ಇತ್ಯಾದಿ ಪ್ರಶ್ನೆಗಳು ನಮ್ಮ ಅಂತಃಕರಣದಲ್ಲಿ ಪ್ರತಿಕ್ಷಣ ಮೂಡುತ್ತಿವೆ! ಈ ಪ್ರಶ್ನೆಗಳೇ ಹಿಂದೂಸಮಾಜಕ್ಕೆ ಪ್ರಾಮುಖ್ಯವಾದುದಾಗಿವೆ. ಬೇಕಾದರೆ ವಿಧವೆಯರಿಗಾಗಿ ನಾವು ತರತರದ ನಿಯಮೋಪನಿಯಮಗಳನ್ನು ವಿಧಿಸೋಣ. ಜನಸಮುದಾಯದ ಮಧ್ಯ ನಿಂತು ಸ್ಫೂರ್ತಿಪರವಾದ ಭಾಷಣವನ್ನು ಕೊಡೋಣ. ಸಾಲದುದಕ್ಕೆ ನವಸುಧಾರಣೆಯ ಈಗಿನ ಪಾಶ್ಚಾತ್ಯ ಶಿಕ್ಷಣದಿಂದ ಅವರನ್ನು ಅಲಂಕರಿಸಿ ಸಭ್ಯ ಮಹಿಳೆಯರೆಂಬ ಅಭಿದಾನಕ್ಕೆ ತರೋಣ! ಪರಂತು ಇದೆಲ್ಲವೂ "ಬರೀಗುಲ್ಲು

ನಿದ್ದೆಗೇಡೆ"ಂಬಂತಾಗುವುದು. ಕಾರಣವೇನೆಂದು ಕೇಳುವಿರಾ? ಎಂದಿನ ವರೆಗೆ ಹಿಂದೂಜನರಲ್ಲಿ ಪ್ರತಿಯೊಬ್ಬರೂ ವ್ಯಕ್ತಿಗತ ರೂಪದಲ್ಲಿ ವಿಧವೆಯರಿಗಾಗಿ ಸುಧಾರಣೆಯ ಕಾರ್ಯವನ್ನು ಕೈಕೊಳ್ಳುವುದಿಲ್ಲವೋ ಅಂದಿನ ವರೆಗೆ ಸಮಾಜ ಸುಧಾರಕರ ಯಾವ ಪ್ರಯತ್ನಗಳೂ ಫಲಕಾರಿಯಾಗಲಿಕ್ಕಿಲ್ಲ! ದೃಷ್ಟಾಂತವಾಗಿ ಒಬ್ಬನ ಮನೆಯಲ್ಲಿ ಒಬ್ಬಾಕೆ ವಿಧವೆಯಾಗಿ ಹೋದರೆ ಕೂಡಲೆ ಅವನು ಆಕೆಗೆ ಬೇಕಾಗಿ ಒಂದು ವಿಧವಾಶ್ರಮವನ್ನು ಹುಡುಕಿ, ಅವಳನ್ನು ಅಲ್ಲಿಗೆ ತಳ್ಳಿಬಿಡುತ್ತಾನೆ. ಇಲ್ಲವಾದರೆ ಮನೆಯಲ್ಲಿಯೆ ಇಟ್ಟುಕೊಂಡು ಬಹುವಿಧದ ಕಷ್ಟಗಳಿಗೆ ಈಡುಮಾಡುತ್ತಾನೆ ಹೊರತು ಆವಳಿಗೆ ಪುನರ್ವಿವಾಹ ಮಾಡಿಕೊಡುವುದೆಂದರೆ ಅವನ ಸನಾತನ ಧರ್ಮವು ನಾಶವಾಗುತ್ತದೆ; ಆದರೆ ಅದೇ ಮನುಷ್ಯನ ಹೆಂಡತಿ ಸತ್ತಳೆಂದರೆ ತಾನು ಯಾವ ವಿಧುರಾಶ್ರಮವನ್ನೂ ಹುಡುಕದೆ, ಯಾವ ಸಂಪ್ರದಾಯದವನಾದರೂ ಸರಿ; ಮರು ತಿಂಗಳಲ್ಲಿಯೆ ಇನ್ನೊಬ್ಬಳಿಗೆ ಕೈಕೊಡುತ್ತಾನೆ. ತನ್ನ ಹೆಂಡತಿ ಸತ್ತರೆ ಪುನಹ ಗೃಹಸ್ಥಾಶ್ರಮ—ಮಗಳ ಗಂಡ ಸತ್ತರೆ ವಿಧವಾಶ್ರಮ! ಕೆಲವು ಕಡೆಗಳಲ್ಲಿ ಅಂಧರೂಢಿಗಳ ಕಗ್ಗತ್ತಲೆಯಲ್ಲಿ ಬಿದ್ದು ಕಣ್ಣುಕಾಣದಂತಹ ಕಡುಮತಾಭಿಮಾನಿಗಳು ವಿಧವೆಯರನ್ನು ವಿಧವಾಶ್ರಮಕ್ಕೂ ಕಳುಹಿಸದೆ ಆತ್ಮೀಪಾವಂದಿರ ಯಮಯಾತನೆಗಳಿಗೆ ಬಲಿಯಾಗಿ ಅರ್ಪಿಸುತ್ತಾರೆ. ಇಂತಹ ಬಾಹ್ಯಕಷ್ಟಗಳಿಂದ ಜರ್ಝರಿತರಾಗಿ ಆಂತರಿಕ ವ್ಯಥೆಗಳಿಂದ ದುಃಖಿತರಾದ ವಿಧವೆಯರು ಅನೇಕರು ವಿಧರ್ಮಿಯರ ಆಶ್ರಯವನ್ನು ಪಡೆಯುತ್ತಾರೆ. ಇದೆಲ್ಲವೂ ಧರ್ಮದ ಹೆಸರಿನಲ್ಲಿ ಆಗುವಂತಹ ವ್ಯವಹಾರಗಳು. ಇಂತಹ ಸನಾತನಧರ್ಮದ ಮಹತ್ವಕ್ಕೆ ನಾವು ಮುಗಿಲುಮುಟ್ಟುವ ಜಯಘೋಷ ಮಾಡಿದರೂ ಸಾಲದು.

**ನಮಗೆ ಹಿಂದೂ ಧರ್ಮದ ಮೇಲೆ ಎಳ್ಳಷ್ಟಾದರೂ ಪ್ರೇಮವಿರುವುದಾದರೆ ಮೊದಲಾಗಿ ನಾವು ವಿಧವೆಯರನ್ನು ಉದ್ಧರಿಸಬೇಕು.**

ಬಾಲ್ಯವಿವಾಹ ಪದ್ಧತಿಯನ್ನು ಸಂಪೂರ್ಣವಾಗಿ ನಿರ್ಮೂಲಿಸಬೇಕು. ವಿಧವೆಯರೊಡನೆ ಮಮತೆಯಿಂದ ವರ್ತಿಸಬೇಕು. ಅವರು ದಿನನಿತ್ಯವೂ ಸುರಿಸುತ್ತಿರುವ ಅಶ್ರುಧಾರೆಯು ಹಿಂದೂವಾಗಿರುವ ಪ್ರತಿಯೊಬ್ಬನ ಪಾದತಲದಲ್ಲಿ ಬೀಳುತ್ತಾ ಇರುತ್ತದೆ. ನಿಷ್ಠುರ ಹೃದಯಿಯಾದ ಪುರುಷಸಮಾಜವು ಇದನ್ನು ಗರ್ವದಿಂದ ತುಳಿಯುತ್ತಾ ಇದೆ. ಪರಂತು ವಾಚಕರೇ ನೆನಪಿರಲಿ! ಇದೇ ಕಂಬನಿಯು ಒಂದಾನೊಂದು ದಿನ ಮಹತ್ತಾದ ಪ್ರವಾಹರೂಪವನ್ನು ತಾಳಿ ಹರಿಯತೊಡಗುವುದು. ಆಗ ಆ ಪ್ರವಾಹದೊಂದಿಗೆ ಇದೇ ಪುರುಷ ಸಮಾಜವು ಕೊಚ್ಚಿ ಕೊಂಡು ಹೋಗುವುದು. "ಯತ್ರನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ।" ಎಂಬ ಉಚ್ಚ ತತ್ವವನ್ನು ಆಗ ಮಾತ್ರ ಪುರುಷ ಸಮಾಜವು ನೆನಪಿಗೆ ತರುವುದು. ಪರಂತು ಆ ಭಯಂಕರ ಪರಿಸ್ಥಿತಿ ಯಲ್ಲಿ "ಮಾಡಿದ್ದುಣ್ಣೋ ಮಹರಾಯ" ಎಂಬ ಗಾದೆಯೇ ನೆರವೇರುವು ದಲ್ಲದೆ ಬೇರೇನೂ ಪ್ರಯೋಜನವಾಗಲಿಕ್ಕಿಲ್ಲ. ಹೀಗಾಗದಂತೆ ಈಗಲೇ ನಾವು ಪ್ರಯತ್ನಮಾಡುವುದು ನಮ್ಮಲ್ಲಿನ ಪ್ರತಿಯೊಬ್ಬರ ಕರ್ತವ್ಯ ವಾಗಿರುತ್ತದೆ. ಸ್ತ್ರೀಯರ ಸತೀತ್ವವನ್ನು ರಕ್ಷಿಸಿ, ಅವರಿಗೆ ಧಾರ್ಮಿಕ, ಸಾಮಾಜಿಕ ಮತ್ತು ಕೌಟುಂಬಿಕ ಶಿಕ್ಷಣಗಳನ್ನು ಕೊಟ್ಟು ಅವರನ್ನು ವೀರಮಾತೆಯರನ್ನಾಗಿ ಮಾಡಬೇಕು. ಇದರಿಂದ ಅವರಲ್ಲಿ ವೀರ ಪುತ್ರರು ಜನಿಸುವರು; ಹಿಂದೂಜನಾಂಗವು ಬಲಶಾಲಿಯಾಗುವುದು. ಹೀಗೆ ಮಾಡುವುದರಿಂದ ಯಾವನೊಬ್ಬನಿಗೂ ಯಾವ ಹಾನಿಯೂ ಒದಗಲಿಕ್ಕಿಲ್ಲ. ಈ ಕಾರ್ಯದಲ್ಲಿ ತತ್ಪರರಾಗುವವರು ಮಾನವ ಸಮಾಜದಲ್ಲಿ ಶ್ರೇಷ್ಠರೆನ್ನಲ್ಪಡುವರು.

ಪ್ರತಿಯೊಂದು ಧರ್ಮ ಅಥವಾ ಆಚಾರವಿಚಾರಗಳು ಆಯಾಯ ಧರ್ಮಸ್ಥಾಪಕರ ಸಿದ್ಧಾಂತ ಮಾತ್ರವಾಗಿರುತ್ತದೆ. ಮಹಮ್ಮದೀಯ ಮತಸ್ಥಾಪಕರಾದ ಮಹಮ್ಮದ ಸಾಹೇಬರಿಗೆ ಯಾವುದರ ಮೇಲೆ ಬಲವಾದ ವಿಶ್ವಾಸವಿತ್ತೋ ಅದನ್ನೇ ಎಲ್ಲಾ ಮುಸಲ್ಮಾನರೂ ಆಚರಿಸಿ ಕೊಂಡು ಬಂದಿದ್ದಾರೆ. ಅದರಂತೆ ಯೇಸುಕ್ರಿಸ್ತರು ಯಾವ ವಿಷಯ

ವನ್ನು ಆಧಾರವಾಗಿಟ್ಟುಕೊಂಡರೋ ಅದನ್ನೇ ಎಲ್ಲಾ ಕ್ರೈಸ್ತರೂ ಅನುಸರಿಸುತ್ತಿದ್ದಾರೆ. ಇದೇ ಪ್ರಕಾರ ಬೌದ್ಧ ಮತ್ತು ಜೈನ ಮತ—ಪರಂತು ಈ ಎಲ್ಲಾ ಮತಗಳೂ ವೈಯಕ್ತಿಕರೂಪವನ್ನು ತಾಳಿಕೊಂಡಿವೆ. ಗುರು ಮಹಮ್ಮದ್, ಯೇಸುಕ್ರಿಸ್ತ, ಬುದ್ಧ ಮುಂತಾದವರುಗಳ ಮೇಲೆ ಜನರಿಗಿರುವ ವಿಶ್ವಾಸವು ಇಂದಿಗೆ ತಪ್ಪಿಹೋಯಿತೆಂದರೆ ಈ ಧರ್ಮದ ಅಸ್ತಿವಾರಗಳೆಲ್ಲವೂ ಅಡಿಮೇಲಾಗುವುವು. ಅಖಂಡ ಬ್ರಹ್ಮಚಾರಿಗಳೂ ಆದರ್ಶ ಸನ್ಯಾಸಿಗಳೂ ಆಗಿದ್ದ ಯೋಗಿವರ್ಯ ಶ್ರೀಮದ್ದಯಾನಂದ ಸರಸ್ವತಿಯವರು ವೇದೋಕ್ತವಾದ ಯಾವ ಸೂತ್ರಗಳನ್ನು ಜನರ ಮುಂದಿಟ್ಟು ಆರ್ಯ ಸಮಾಜವನ್ನು ತೆರೆದರೋ ಅದನ್ನು ಪ್ರತಿಯೊಬ್ಬ ಆರ್ಯರೂ ನಂಬಿಕೊಂಡು ಬಂದಿದ್ದಾರೆ. ಆದರೆ ಇದುವರೆಗೆ ಯಾರೊಬ್ಬರೂ ಆರ್ಯಸಮಾಜಕ್ಕೆ ದಯಾನಂದರ ವೈಯಕ್ತಿಕ ಹೆಸರನ್ನು ಕೊಡಲಿಲ್ಲ. ಎಲ್ಲರೂ ಇದನ್ನು ಆರ್ಯಸಮಾಜ ಅಥವಾ ವೈದಿಕಧರ್ಮವೆಂದು ಹೇಳುತ್ತಾರಲ್ಲದೆ ದಯಾನಂದ ಸಮಾಜ ಇಲ್ಲವೆ ದಯಾನಂದ ಧರ್ಮವೆಂದು ಹೇಳುವುದಿಲ್ಲ. ಋಷಿ ದಯಾನಂದರು ಬರೆದಿರುವ ಮತ್ತು ಹೇಳಿರುವ ವಾಕ್ಯಗಳೇ ವೇದವಾಕ್ಯಗಳೆಂದು ಆರ್ಯಸಮಾಜದವರು ತೆಗೆದುಕೊಳ್ಳದೆ ಪ್ರತಿಯೊಂದು ವಿಷಯದಲ್ಲಿಯೂ ಬುದ್ಧಿಯನ್ನುಪಯೋಗಿಸಿ ವೇದಗಳೇ ಸ್ವತಃ ಪ್ರಮಾಣಗಳೆಂಬುದನ್ನು ತಿಳಿದುಕೊಂಡು ಅವುಗಳಿಗೆ ಅನುಕೂಲವಾಗಿ ಬರೆದಿರುವ ಮತ್ತು ಬೋಧಿಸಿರುವವುಗಳನ್ನೇ ಸ್ವೀಕರಿಸುತ್ತಾರೆ. ಇದುಹೊರತು ವೇದಾನುಕೂಲವಾದ ಯಾವ ಅಭಿಪ್ರಾಯಗಳೇ ಇರಲಿ, ಮತ್ತದನ್ನು ಯಾರು ಬೇಕಾದರೂ ಬೋಧಿಸಲಿ. ಅದನ್ನು ನಿಷ್ಪಕ್ಷಪಾತ ಬುದ್ಧಿಯಿಂದ ಆರ್ಯಸಮಾಜದವರು ಸ್ವೀಕರಿಸುತ್ತಾರೆ. ಈ ವಿಧದ ಧರ್ಮವಿಶಾಲತೆಯು ಪ್ರಚಲಿತಕಾಲದಲ್ಲಿರುವ ಧಾರ್ಮಿಕ ಸಂಸ್ಥೆಗಳ ಪೈಕಿ ಆರ್ಯಸಮಾಜದಲ್ಲಿಯೆ ಕಂಡುಬರುತ್ತದೆಂಬುವುದು ಅತಿಶಯೋಕ್ತಿಯಲ್ಲ. ಪ್ರತಿಯೊಂದು ಸಮಯದಲ್ಲಿ ಜಗತ್ತು ತರತರದ ಪರಿವರ್ತನೆಗಳಿಗೀಡಾಗುತ್ತದೆ.

ಒಂದೊಂದು ವೇಳೆ ಇಂತಹ ಪರಿವರ್ತನೆಯಿಂದ ಅತ್ಯಂತ ಭಯಂಕರಾವಸ್ಥೆಯು ಸಂಭವಿಸುವುದೂ ಉಂಟು! ಅಂತಹ ದುಸ್ಥಿತಿಗಳನ್ನು ಹೋಗಲಾಡಿಸಿ ಜನರಲ್ಲಿ ಶಾಂತಿಯನ್ನು ಸ್ಥಾಪಿಸಲಿಕ್ಕೆಂದು ಒಬ್ಬೊಬ್ಬ ಮಹಾಪುರುಷರು ಆಗಿಂದಾಗ ಜನ್ಮವೆತ್ತುತ್ತಾರೆ. ಇಂತಹ ಮಹಾತ್ಮರುಗಳು ಪುಣ್ಯಭೂಮಿಯಾದ ಭಾರತವರ್ಷದಲ್ಲಿಯೇ ಪದೇ ಪದೇ ಪ್ರಕಾಶಿಸುತ್ತಾ ಜನತಾಸೇವೆ ಮಾಡುತ್ತಿರುವುದನ್ನು ನಾವು ಕಣ್ಣಾರೆ ನೋಡುತ್ತಿದ್ದೇವೆ. ಅವರಲ್ಲಿ ಪರಮಪೂಜ್ಯರಾದ ಮಹಾತ್ಮಾ ಗಾಂಧಿಯವರು ಒಬ್ಬರಾಗಿರುವರು. ಇವರು ಸಹಾ ವಿಧವಾವಿವಾಹದ ಕುರಿತು ಅಂದಿನಿಂದ ಇದುವರೆಗೂ ಕಂಠಶೋಷಣೆಯನ್ನು ಮಾಡುತ್ತಾ ಹೇಳುತ್ತಿದ್ದಾರೆ. ಆದರೂ ಹಿಂದೂಸಮಾಜವು ವಿಧವೆಯರ ಸುಧಾರಣೆಗಾಗಿ ಇನ್ನೂ ಸಾಕಷ್ಟು ಪ್ರಯತ್ನಮಾಡಲು ಸಿದ್ಧವಾಗಿಲ್ಲ. ಇಂದಿಗೆ ಮಹಾತ್ಮರನ್ನು ಹೊಗಳದವರು ಒಬ್ಬರೂ ಇಲ್ಲವು! ಪರಂತು, ಅವರ ಕಾರ್ಯದಲ್ಲಿ ಕ್ರಿಯಾತ್ಮಕ ರೂಪವಾಗಿ ಭಾಗತೆಗೆದುಕೊಳ್ಳುವವರು ಕೆಲವೇ ಮಂದಿ ದೊರೆಯುವರು. ವೈಯಕ್ತಿಕ ರೂಪದಿಂದ ಅವರನ್ನು ಪ್ರತಿಯೊಬ್ಬರೂ ಗೌರವಿಸುತ್ತಿದ್ದಾರೆ. ಈ ಪ್ರಕಾರ ಎಲ್ಲಾ ಪರಿಸ್ಥಿತಿಗಳನ್ನೂ ಸರಿಯಾಗಿ ಪರಿಶೀಲಿಸಿದ್ದಲ್ಲಿ ಪ್ರತಿಯೊಂದು ಧರ್ಮವೂ ಪಂಗಡವೂ ವ್ಯಕ್ತಿವಿಶೇಷತೆಯನ್ನು ತಾಳಿಕೊಂಡಿದೆ ಎಂಬುವುದು ಕಂಡುಬರುತ್ತದೆ. ಇಂದಿಗೂ ಪ್ರತಿಯೊಬ್ಬ ಸಂಪ್ರದಾಯವಾದಿಯು ತನ್ನ ವೈಯಕ್ತಿಕ ಸಿದ್ಧಾಂತವನ್ನು ಪ್ರಚುರಗೊಳಿಸುವ ಧ್ಯೇಯವನ್ನೇ ಮುಖ್ಯವಾಗಿ ಇಟ್ಟುಕೊಂಡಿರುತ್ತಾನೆ. ದೇಶ, ಕಾಲ, ಪರಿಸ್ಥಿತಿ ಹೇಗೂ ಇರಲಿ. ವರ್ತಮಾನಕಾಲದ ಸಂಪ್ರದಾಯವಾದಿಗಳು ತಮ್ಮ ರೂಢಿಯ ಆಚರಣೆಯನ್ನು ಸ್ವಲ್ಪ ಮಾತ್ರವೂ ಪರಿವರ್ತನಗೊಳಿಸುವುದಿಲ್ಲ. ಇವರು ತಮ್ಮ ಎಲ್ಲಾ ಆಚರಣೆಗಳನ್ನೂ ಸನಾತನ ಧರ್ಮದ ಹೆಸರಲ್ಲಿಯೇ ಆಚರಿಸುತ್ತಾ ಬರುತ್ತಿದ್ದಾರೆ. ಇಂತಹವರಿಂದಲೇ ಹಿಂದೂಸಮಾಜವು ದಿನದಿಂದ ದಿನಕ್ಕೆ ಜರ್ಝರಿತವಾಗುತ್ತಾ ಬರುತ್ತಿದೆ.

ನಮ್ಮಲ್ಲಿ ಹುಟ್ಟಿದ ವೀರಪುರುಷರನ್ನು ದೇವತೆಗಳ ಸಮಾನಕ್ಕೆಣಿಸುವ ಜನಾಂಗವು ಪ್ರಕೃತ ಜಗತ್ತಿನಲ್ಲಿ ಇಲ್ಲವೆನ್ನಬಹುದು. ಪ್ರತಿಯೊಂದು ಪ್ರಾಣಿಗಳೂ ತಮಗೆ ಬಲಶಾಲಿಯಾದ ಪ್ರಾಣಿಗಳ ಎದುರಿಗೆ ತಮ್ಮ ತಲೆಯನ್ನು ಬಗ್ಗಿಸುತ್ತವೆ. ಇದೇ ಪ್ರಕಾರ ಮನುಷ್ಯರು ಸಹಾ ತಮಗಿಂತ ಶಕ್ತಿಶಾಲಿ ಮತ್ತು ಬುದ್ಧಿವಂತರಾದವರನ್ನು ನೋಡಿದ್ದಲ್ಲಿ ತಾವಾಗಿಯೇ ತಲೆಬಾಗಿಸುವರಲ್ಲದೆ ಕ್ರಮೇಣ ಅವರ ಮನಸ್ಸು ಕೂಡಾ ಆ ಮಹಾಪುರುಷನ ಕಡೆಗೆ ಆಕರ್ಷಿತವಾಗುವುವು. ಇಂತಹ ಮಹಾಪುರುಷರೇ ಅವತಾರಿಗಳೆನ್ನಲ್ಪಡುವರು. ಪರಂತು, ಯಥಾರ್ಥಜ್ಞಾನವಿಲ್ಲದವರು ಅವತಾರದ ಹಾಡನ್ನು ಮಾತ್ರ ಹಾಡುತ್ತಾ ಅವತಾರವೆಂಬ ಶಬ್ದದ ಮೇಲೆಯೇ ಒಂದು ವಿಧದ ಅಂಧಃಶ್ರದ್ಧೆಯನ್ನಿಡುತ್ತಾರೆ ಹೊರತು, ಅವತಾರಿ ಪುರುಷರ ವ್ಯಕ್ತಿ ಜೀವನ, ಉತ್ತಮ ಉಪದೇಶಗಳ ಕಡೆಗೆ ಲಕ್ಷ್ಯಕೊಡುವುದಿಲ್ಲ. ಕೆಲವು ಸಾವಿರ ವರ್ಷಗಳಿಂದ ಈ ವಿಧದ ಅಂಧಃಪರಂಪರಾ ಪದ್ಧತಿಯು ನಮ್ಮ ಹಿಂದೂಸಮಾಜದಲ್ಲಿ ನಡೆದುಕೊಂಡು ಬಂದಿರುವುದರಿಂದ ಸಮಾಜವು ಅತ್ಯಂತ ದುಃಖದಾಯಕವಾದ ಸ್ಥಿತಿಯಲ್ಲಿ ಬಿದ್ದಿದೆ. ಯಾವುದೊಂದು ಆಚಾರವಿಚಾರದ ಬಾಹ್ಯರೂಪವೂ ಸದಾಸಮಯ ಏಕಪ್ರಕಾರವಾಗಿ ಇರಲಾರದು. ತನ್ನ ಮೂಲತತ್ವಕ್ಕೆ ವಿರೋಧವಾಗದ ರೀತಿಯಲ್ಲಿ ಪರಿವರ್ತನೆಯಾಗುತ್ತಾ ಬರುತ್ತದೆ. ಪ್ರಕೃತಿ ನಿಯಮಗಳಿಗಿಂತಲೂ ಹೆಚ್ಚಿನ ವಿವೇಕದಿಂದ ಕಾರ್ಯಗಳನ್ನು ನಡಿಸುವುದರಲ್ಲಿ ಹೆಚ್ಚಿನ ಉನ್ನತಿಯಾಗುತ್ತದೆ. ಹಿಂದೂಗಳಾದರೋ ಅದೃಷ್ಟ ಮತ್ತು ಕಲಿಯುಗದ ಗುಲಾಮರಾಗಿರುತ್ತಾರೆ. ಪ್ರತಿಯೊಂದು ವಿಷಯಗಳಲ್ಲಿಯೂ ನಮ್ಮ ಅದೃಷ್ಟ ಅಥವಾ ಕಲಿಯುಗದ ಮಹಿಮೆ ಎಂದು ಹೇಳುವರೇ ಹೊರತು ಸತ್ಯವನ್ನು ತಿಳಿಯಲು ನಿಜವಾದ ಪ್ರಯತ್ನವನ್ನು ಮಾಡುವುದೇ ಇಲ್ಲ! (ಕಲಿಯುಗದ ಕುರಿತು ಗ್ರಂಥಮಾಲೆಯಲ್ಲಿ ದೊರೆಯುವ "ಕಲಿಯುಗ"ವೆಂಬ ಚಿಕ್ಕ ಪುಸ್ತಕದಲ್ಲಿ ವಿವರಿಸಿರುವೆನು.) ನಾವು ಅದೃಷ್ಟಕ್ಕೆ ಹೊಂದಿಕೊಂಡಿರವೆ

ನಮ್ಮ ವಿವೇಕ ಶಕ್ತಿಯನ್ನು ವಿಕಸಿತಗೊಳಿಸಿ, ಅದರಿಂದ ಪ್ರಾಕೃತಿಕ ತತ್ವಗಳನ್ನು ಮಥಿಸಿ ಅವುಗಳಿಂದ ನಮ್ಮ ಉನ್ನತಿಯ ಮಾರ್ಗವನ್ನು ಹುಡುಕಿ ನಮ್ಮ ಭಾವೀ ಜನಾಂಗಕ್ಕೆ ಪಥಪ್ರದರ್ಶಕರಾಗಲು ನಾವೆಲ್ಲರೂ ಪ್ರಯತ್ನಿಸಿದರೆ ಮಾತ್ರ ಹಿಂದೂಸಮಾಜವು ಉನ್ನತಾವಸ್ಥೆಗೆ ಬರುವುದು.

ನಾವು ಮೊದಲು ವಿವರಿಸಿದಂತೆ ಭಾರತವರ್ಷದಲ್ಲಿ ಎಂದಿನವರೆಗೆ ಲೆಕ್ಕವಿಲ್ಲದ ಜಾತಿಭೇದಗಳಿವೆಯೋ ಅಂದಿನ ವರೆಗೆ ಇಲ್ಲಿ ಒಂದು ಧರ್ಮ, ಒಂದು ಆಚಾರವಿಚಾರ—ಇತ್ಯಾದಿ ಸಮಾಜ ಸಂಘಟಣೆಯನ್ನು ಸ್ಥಾಯಿರೂಪದಲ್ಲಿ ವ್ಯವಹಾರದಲ್ಲಿಡುವುದು ಬಹಳ ಪ್ರಯಾಸವು. ಆದುದರಿಂದಲೇ ಹಿಂದೂಸಮಾಜಸುಧಾರಣೆಗೆಂದು ಇಳಿದ ಅನೇಕ ಮಹನೀಯರಲ್ಲಿ ಹೆಚ್ಚಿನವರು ನಿರುತ್ಸಾಹಿಗಳಾಗಿ ಹೋಗಬೇಕಾಯಿತು. ಒಂದೆರಡು ಪಂಗಡಗಳವರು ಮಾತ್ರ ವಿಧವಾ ವಿವಾಹವನ್ನು ಸಮರ್ಥಿಸಿದ ಮಾತ್ರಕ್ಕೆ ಸಮಾಜಸುಧಾರಣೆಯಾಗಲಿಕ್ಕಿಲ್ಲ. ಪ್ರತಿಯೊಬ್ಬರೂ ಕಾರ್ಯರೂಪದಲ್ಲಿ ತಮ್ಮ ಕುಟುಂಬದಲ್ಲಿಯೂ ಈ ಕುರಿತು ಪ್ರಯತ್ನಿಸುತ್ತಾ ಸಮಯ ದೊರೆತಾಗ ಎಲ್ಲಾ ಕಡೆಗಳಲ್ಲಿಯೂ ಇದಕ್ಕಾಗಿಯೆ ಪ್ರಬಲವಾದ ಕ್ರಾಂತಿಯನ್ನೆಬ್ಬಿಸಬೇಕು.

ಹಿಂದೂ ವಿಧವೆಯರ ಆಪತ್ತುಗಳನ್ನು ನಾವು ನಿವಾರಿಸಬೇಕಾದರೆ, ಪ್ರಥಮತಃ ಅವರನ್ನು ಕೆಲವು ವಿಭಾಗಗಳಾಗಿ ವಿಂಗಡಿಸಿದರೆ ನಮ್ಮ ಕಾರ್ಯವು ಸುಲಭವಾಗಿ ಸಾಗುವುದು. ಈ ಕುರಿತು ನಾವು ಮೊದಲಾಗಿ ಬಾಲವಿಧವೆಯರ ಪರಿಸ್ಥಿತಿ ಹೇಗಿದೆ ಎಂಬುದನ್ನು ಸ್ವಲ್ಪಮಾತ್ರವೆ ತಿಳಿದುಕೊಳ್ಳೋಣ. ಸರಿಯಾಗಿ ನೋಡಿದರೆ ಈಗ ಹಿಂದೂಸ್ಥಾನದಲ್ಲಿ ವಿಧವೆಯರ ಸಂಖ್ಯೆಯು ಮೂರುವರೆ ಕೋಟಿಗೆ ಮಿಕ್ಕಿದೆ. ಇದರಲ್ಲೂ ಬಾಲವಿಧವೆಯರ ಪರಿಸ್ಥಿತಿಯು ಅತ್ಯಂತ ಖೇದಜನಕವಾಗಿರುತ್ತದೆ. ಮಾತೆಯ ಹಾಲನ್ನು ಮರೆಯದಂತಹ

ಹಸುಗೂಸುಗಳು ಸಹಾ ಲಕ್ಷಗಟ್ಟಲೆಯಲ್ಲಿ ವೈಧವ್ಯದೀಕ್ಷೆಯನ್ನು ಪಡೆಕೊಂಡಿವೆ. 5ರಿಂದ 10 ವರ್ಷ ಪ್ರಾಯದವರು ಸಾವಿರಗಟ್ಟಲೆಯಲ್ಲಿ ಇರುತ್ತಾರೆ. ಇದಕ್ಕೆ ಮಿಕ್ಕಿದ ಪ್ರಾಯದವರು ಪಂಜಾಬಿನಲ್ಲಿ 42,456, ಸಂಯುಕ್ತಪ್ರಾಂತ್ಯದಲ್ಲಿ 1,67,431, ಮುಂಬೈಪ್ರಾಂತ್ಯದಲ್ಲಿ 84,140, ಮದರಾಸು ಪ್ರಾಂತ್ಯದಲ್ಲಿ 12,15,922 ಮಂದಿ ವಿಧವೆಯರಿದ್ದಾರೆ. ಈ ರೀತಿಯ ಬಾಲವಿಧವೆಯರ ಸಂಖ್ಯೆಯು ಇಡೀ ಹಿಂದೂಸ್ಥಾನದಲ್ಲಿ ಒಟ್ಟಿಗೆ 14,51,515ಕ್ಕೆ ಮುಟ್ಟಿರುವುದು. ಇಷ್ಟು ವಿಶಾಲ ಸಂಖ್ಯೆಯಲ್ಲಿ ವಿಧವೆಯರು ನಮ್ಮ ಸಮಾಜದಲ್ಲಿದ್ದರೂ ಹಿಂದೂ ಸಮಾಜದ ಬುದ್ಧಿಯು ಇನ್ನೂ ವಿಕಸಿತವಾಗಲಿಲ್ಲ. ಮೇಲೆ ವಿವರಿಸಿದಂತಹ ಬಾಲವಿತಂತುಗಳೆಲ್ಲರೂ ಸದಾಚಾರಿಗಳೂ, ಇಂದ್ರಿಯನಿಗ್ರಹಿಗಳೂ ಆಗಿರುವರೆಂದೂ ತಿಳಿಯಕೂಡದು. ಏತಕ್ಕೆಂದರೆ ಹಾಗಿರತಕ್ಕಷ್ಟು ಶಿಕ್ಷಣವನ್ನಾಗಲೀ, ಅವರಲ್ಲಿ ಅನಾಥರಾದವರಿಗೆ ಆಶ್ರಮಗಳನ್ನಾಗಲೀ, ಇತರ ಅನುಕೂಲತೆಗಳನ್ನಾಗಲೀ ಕಲ್ಪಿಸಿಕೊಡುವಷ್ಟು ಧರ್ಮಾಭಿಮಾನಿಗಳು ಪ್ರಕೃತ ಹಿಂದೂಸಮಾಜದಲ್ಲಿ ಬಹಳ ಅಲ್ಪ ಮಂದಿ ಎಂದರೆ ತಪ್ಪಾಗದು.

ಕುಳಿತುಕೊಳ್ಳಲಿಕ್ಕೆ ಸ್ಥಳವಿಲ್ಲದೆಯೂ, ಉದರಪೋಷಣೆಗೆ ಗತಿ ಇಲ್ಲದೆಯೂ ಇರುವ ವಿತಂತುಗಳು ಧರ್ಮದಿಂದ ಪತಿತರಾಗದೆ ಮತ್ತೇನು ಮಾಡಬಲ್ಲರು? ಪತಿವ್ರತಾ ಧರ್ಮವೆಂದರೇನು? ಯಾವಾಕೆಯು ದಾಂಪತ್ಯಜೀವನದ ನಿಜವಾದ ತತ್ವವನ್ನು ತಿಳಿದುಕೊಂಡಿದ್ದಾಳೋ—ಯಾರಿಗೆ ಪ್ರಾಚೀನ ವಿವಾಹ ಪದ್ಧತಿಯ ಮೇಲೆ ಬಲವಾದ ಶ್ರದ್ಧೆ ಇದೆಯೋ, ವಿವಾಹವೆಂಬುದನ್ನು ಕಾಮವಾಸನೆಯ ತೃಪ್ತಿಗಾಗಿ ಮಾಡಿಟ್ಟ ಒಂದು ಸಾಧನ ಮಾತ್ರವೆಂದು ಯಾರು ತಿಳಿದುಕೊಂಡಿಲ್ಲವೋ—ಯಾವಾಕೆಯು ಲೌಕಿಕದಲ್ಲಿದ್ದುಕೊಂಡು ಪವಿತ್ರವಾದ ಪ್ರೇಮ ಮತ್ತು ಸತ್ಯಧರ್ಮದಿಂದ ಪರಸ್ಪರ ಜೀವನಸುಖವನ್ನನುಭವಿಸುತ್ತಾ ಕೊನೆಗೆ ಮೋಕ್ಷಸಾಧನೆಗಾಗಿ ಎರಡೂ ಆತ್ಮಗಳು ಪ್ರಕೃತಿ ನಿಯಮವನ್ನನುಸರಿಸಿರುವ ಧರ್ಮಾಚರಣೆಯಲ್ಲಿರುವುದೇ

ವಿವಾಹದ ಮುಖ್ಯ ಉದ್ದೇಶವೆಂಬುದನ್ನು ತಿಳಿದಿರುವಳೋ ಆಕೆಯೇ ಪರಮಪಾವನೆಯಾದ ಪತಿವ್ರತಾಶಿರೋಮಣಿ, ಆರ್ಯಮಹಿಳೆ ಎಂಬ ಪ್ರಶಂಸೆಗೆ ಪಾತ್ರಳು! ಇಂತಹ ಸ್ತ್ರೀಯು ಯಾವ ಕುಲದಲ್ಲಿಯೂ ಹುಟ್ಟಲಿ; ಆಕೆಯು ಈಶ್ವರೀಯ ನಿಯಮವನ್ನನುಸರಿಸಿ ಗೃಹಸ್ಥ ಜೀವನದಲ್ಲಿದ್ದುಕೊಂಡು ಮೋಕ್ಷಪ್ರಾಪ್ತಿಗಾಗಿ ನಿತ್ಯ ಪರಿಶ್ರಮವನ್ನು ಗೈಯ್ಯುತ್ತಿರುವುದರಿಂದ ಗೃಹದೇವಿ ಅಥವಾ ಗೃಹಲಕ್ಷ್ಮೀ ಎಂದು ಕರೆಯಲ್ಪಡುವರೆ ಯೋಗ್ಯಳು. (ಮಹಿಳೆಯರ ಕರ್ತವ್ಯದ ಕುರಿತು "ಗೃಹಲಕ್ಷ್ಮೀ" ಎಂಬ ಇನ್ನೊಂದು ಪುಸ್ತಕದಲ್ಲಿ ವಿವರಿಸಿರುವೆವು—ಲೇಖಕ.) ಇಂತಹ ಪವಿತ್ರಾಚರಣೆಯುಳ್ಳ ಸ್ತ್ರೀಯರಲ್ಲಿ ಯಾರಾದರೂ ವಿಧವೆಯರಾಗಿದ್ದರೆ ಅಂತಹವರಿಗೂ ಪುನರ್ವಿವಾಹ ಮಾಡಬೇಕೆಂದು ಬರೆಯಲಿಕ್ಕೆ ನನ್ನ ಲೇಖನವು ಮುಂದರಿಯದು. ಕಾರಣವೇನೆಂದರೆ ಇವರಿಗೆ ಇಂದ್ರಿಯನಿಗ್ರಹ ಮಾಡುವುದು ಪ್ರಯಾಸವಲ್ಲ. ಪತಿವ್ರತಾ ಧರ್ಮವು ಶ್ರೇಷ್ಠವಾಗಿರುತ್ತದೆ. ಮತ್ತು ಪತಿಯ ಮರಣಾನಂತರ ಪುನಹಾ ವಿವಾಹಮಾಡಿಕೊಳ್ಳುವುದು ಅತ್ಯುತ್ತಮ ಕಾರ್ಯವಲ್ಲ ವೆಂಬುದನ್ನು ನಾವು ಒಪ್ಪುತ್ತೇವೆ. ಆದರೆ ದೇಶ ಕಾಲ ಪರಿಸ್ಥಿತಿಗಳ ನ್ನನುಸರಿಸಿ ಆಪದ್ಧರ್ಮವನ್ನು ಕಾಪಾಡಬೇಡವೇ? ಒಂದು ಹುಲಿ ಯನ್ನು ಕೊಂದರೆ ಜೀವಹಿಂಸೆ ಮಾಡಿದ ಪಾಪವು ತಗಲುವುದೆಂಬ ಭಾವನೆಯಿಂದ ಅದನ್ನು ಬಿಟ್ಟುಬಿಟ್ಟರೆ ಅದು ಅನೇಕ ದನಗಳನ್ನು ಕೊಲ್ಲದೆ ಬಿಡಲಿಕ್ಕಿಲ್ಲ! ಇದರಿಂದ ಗೋಹತ್ಯೆಮಾಡಿದ ಮಹಾಪಾಪವು ನಿಜವಾಗಿಯೂ ತಗಲುವುದು. ಇದೇ ಮಾನವ ಸಮಾಜಕ್ಕೆ ಉಪ ಯೋಗವಾಗಿರುವ ಅನೇಕ ದನಗಳ ರಕ್ಷಣೆಗಾಗಿ ಒಂದು ಹುಲಿಯನ್ನು ಕೊಲ್ಲುವ ಪಾಪವು ಪಾಪವಾಗಿ ಪರಿಣಮಿಸಲಿಕ್ಕಿಲ್ಲ. ಇದೇ ಪ್ರಕಾರ ಪಾತಿವ್ರತ್ಯ ಅಥವಾ ಧರ್ಮದ ಹೆಸರಲ್ಲಿ ಲಕ್ಷಗಟ್ಟಲೆ ವಿಧವೆಯರನ್ನು ನಿರ್ಬಂಧದಿಂದ ಬ್ರಹ್ಮಚಾರಿಣಿಯರನ್ನಾಗಿಟ್ಟುಕೊಂಡು ಒಳಗಿಂದೊಳಗೆ ತರತರಹದ ನೀಚಕೃತ್ಯಗಳನ್ನು ಮಾಡಿಸಿಕೊಳ್ಳು ವುದಕ್ಕಿಂತ ಅವರೆಲ್ಲರಿಗೆ ಯೋಗ್ಯರೀತಿಯಲ್ಲಿ ಪುನರ್ವಿವಾಹ ಮಾಡಿ

ಕೊಟ್ಟರೆ ಹಿಂದೂಸಮಾಜದ ಗೌರವವು ಉಳಿಯುವುದು. ಈ ರೀತಿ ಯಲ್ಲಿ ಪ್ರಾಚೀನ ಕಾಲದಿಂದಲೂ ನಡೆದು ಬಂದಿದೆ ಎಂಬುವುದಕ್ಕೆ ನಮಗೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ.

ದುರ್ಯೋಧನನ ದುಷ್ಟತನದ ಅತ್ಯಾಚಾರಗಳನ್ನು ತಡೆಯ ಲಿಕ್ಕಾಗಿ ಅವನ ಸಹಾಯಕನಾದ ಜಯದ್ರಥನನ್ನು ಶ್ರೀಕೃಷ್ಣನು ತನ್ನ ಬುದ್ಧಿಸಾಮರ್ಥ್ಯದಿಂದ ಅರ್ಜುನನ ಮುಖಾಂತರ ಕೊಲ್ಲಿಸಿದನು. ಕೌರವನಂತೆ ಜಯದ್ರಥನು ನ್ಯಾಯನೀತಿಯನ್ನೊಪ್ಪದೆ ಪ್ರಜೆಗಳ ಮೇಲೆ ಅನ್ಯಾಯವನ್ನೆಸಗುತ್ತಿದ್ದುದರಿಂದ ಕೃಷ್ಣನಿಗೆ ಇಂತಹ ನೀತಿ ಯನ್ನು ಅನುಸರಿಸಬೇಕಾಯಿತು; ಇಲ್ಲದಿದ್ದರೆ ಕೌರವಾದಿಗಳಂತಹ ದುರ್ಜನರು ಎಲ್ಲೆಲ್ಲಿಯೂ ಹೆಚ್ಚಿ ಇಡೀ ಜಗತ್ತೇ ಅತ್ಯಾಚಾರದ ರಂಗಭೂಮಿಯಾಗುತ್ತಿತ್ತು.

ಇದೇ ರೀತಿಯ ಆಪದ್ಧರ್ಮ ಸಮಸ್ಯೆಯು ಈಗ ನಮ್ಮೆಲ್ಲರ ಮುಂದೆ ಪ್ರತ್ಯಕ್ಷವಾಗಿ ನಿಂತಿದೆ. ವಿಧವೆಯರ ಅನುದಿನದ ಗೋಳನ್ನು ನಿಲ್ಲಿಸುವುದೂ ಪ್ರಕೃತ ಹಿಂದೂಸಮಾಜಕ್ಕೆ ಬಂದೊದಗಿರುವ ಆಪದ್ಧರ್ಮ ಕರ್ತವ್ಯವಾಗಿರುತ್ತದೆ. ಇದರಿಂದ ಹಿಂದೂಧರ್ಮ ವೆಂದಿಗೂ ಕಳಂಕಿತವಾಗಲಿಕ್ಕಿಲ್ಲ. ಸಾವಿರಾರು ಮಂದಿ ವಿಧವೆಯರು ನಮ್ಮ ಕಣ್ಣಮುಂದೆಯೇ ಅನ್ಯಧರ್ಮಿಯರಿಂದ ವಿಧವಿಧದಲ್ಲಿ ಅಪ ಹರಿಸುತ್ತಲೂ, ವಿಕ್ರಯಿಸಲ್ಪಡುತ್ತಲೂ ಇದ್ದಾರೆ. ಇದೆಲ್ಲವನ್ನೂ ನಾವು ಈಗಿನ ಕಾಲದ ಸ್ವಾರ್ಥಪರವಶದಲ್ಲಿರುವ ಸನಾತನಧರ್ಮ ವೆಂಬ ಒಡಕು ನಾವೆಯಲ್ಲಿ ಕುಳಿತು ನೋಡುತ್ತಿದ್ದೇವ. ಪ್ರತಿದಿನವೂ ವೃದ್ಧಿಯಾಗುತ್ತಿರುವ ಗುಪ್ತವ್ಯಭಿಚಾರ, ಗರ್ಭಪಾತ (ಶಿಶುಹತ್ಯೆ) ಇತ್ಯಾದಿ ಘೋರವಾದ ಕೃತ್ಯಗಳನ್ನು ಯೋಚಿಸುವಾಗ ಮನುಷ್ಯ ನಾದವನಿಗೆ ರೋಮಾಂಚನವಾಗದಿರದು. ದೇಶದ ಅಲ್ಲಲ್ಲಿ ಪ್ರತಿವರ್ಷ ಹೆಚ್ಚುತ್ತಿರುವ ವೇಶ್ಯೆಯರ ಸಂಖ್ಯೆಯನ್ನು ನೋಡುವಾಗ ಶರೀರವೇ ಕಂಪಿಸುತ್ತದೆ.

ಉದಾಸೀನ ಪಾಂಡಿತ್ಯದಲ್ಲಿ ಬಿದ್ದು ಕೊಳೆಯುತ್ತಿರುವ ಆರ್ಯ ಜನಾಂಗವನ್ನು ಚೇತನಗೊಳಿಸಲಿಕ್ಕೆ ಎಷ್ಟೊಂದು ಮಂದಿ ಮಹಾ ಪುರುಷರು ತಮ್ಮ ಜೀವನಸರ್ವಸ್ವವನ್ನು ಅರ್ಪಿಸಲಿಲ್ಲ! ಆದರೂ ಆಲಸ್ಯವು ನಮ್ಮನ್ನು ಇನ್ನೂ ಬಿಟ್ಟುಹೋಗಲಿಲ್ಲ. ನಾನು ಮೊದಲು ವಿವರಿಸಿದಂತೆ (Main–caste) ಜಾತಿಯ ಮೇಲುಕೀಳು ಎಂಬ ಭಾವನೆಯೇ ಇದಕ್ಕೆ ಮುಖ್ಯ ಕಾರಣವಾಗಿದೆ. ಹಿಂದೂಸ್ಥಾನ ದಲ್ಲಿರುವ ಎಲ್ಲಾ ವಿಧವೆಯರಿಗೆ ಪುನರ್ವಿವಾಹವಾಗುವುದಕ್ಕಾಗಿ ಪ್ರಬಲವಾದ ಆಂದೋಲನವನ್ನೆಬ್ಬಿಸಿದರೂ ಹೆಚ್ಚಿನ ಫಲಕಾರಿಯಾಗ ಲಿಕ್ಕಿಲ್ಲ. ಕಾರಣವೇನೆಂದರೆ—ವೈಯಕ್ತಿಕವಾಗಿ ಪ್ರತಿಯೊಬ್ಬರೂ ಈ ಕಾರ್ಯದಲ್ಲಿ ತಡೆಮಾಡುತ್ತಿದ್ದಾರೆ. ಎಂದಿನವರೆಗೆ ಪ್ರತಿಯೊಬ್ಬ ಹಿಂದೂವು ವಿಧವೆಯರ ಆಂತರಿಕ ಜೀವನದ ನಿಜಾಂಶವನ್ನು ತಿಳಿದು ಕೊಂಡು ಅದಕ್ಕೆ ಬೇಕಾಗತಕ್ಕ ಪ್ರಯತ್ನವನ್ನು ಮನಃಪೂರ್ವಕವಾಗಿ ಮಾಡುವುದಿಲ್ಲವೋ ಅಂದಿನವರೆಗೆ ಈ ಅಭಾಗಿನಿಯರು ಸುಖಿಜೀವಿ ಗಳಾಗುವರೆಂಬ ಮಾತು ಸಂದೇಹಾಸ್ಪದ.

ಮಾತೆಯ ಸ್ತನದಿಂದ ಹಾಲನ್ನು ಕುಡಿಯುವ ಶಿಶುಗಳು ಸಹ ವೈಧವ್ಯದೀಕ್ಷೆಯನ್ನು ಪಡೆದು ಕಡೆಗೆ ಜೀವನಸ್ವಾತಂತ್ರ್ಯಕ್ಕಾಗಿ— ಆತ್ಮಿಕ ಸುಖಕ್ಕಾಗಿ ರೋದಿಸುತ್ತಿರುವ ಅವರ ಕರುಣಾಕ್ರಂದನವನ್ನೂ, ಜನನಿಯ ಪ್ರೇಮಮಯವಾದ ಮಡಿಲಲ್ಲಿ ದುರದೃಷ್ಟ ಪೀಡಿತವಾದ ತನ್ನ ಮಸ್ತಕವನ್ನಿಟ್ಟು ತನ್ನ ಸೌಭಾಗ್ಯದೇವತೆಗಾಗಿ ದುಃಖಿಸುತ್ತಿರುವ ಸರ್ವಾಂಗ ಸೌಂದರ್ಯದಿಂದ ತುಂಬಿರುವ ನವತರುಣಿಯರ ಆರ್ತ ನಾದವನ್ನೂ, ಒಮ್ಮೆ ಕೇಳಿದರೆ ಕಲ್ಲೆದೆಯ ಕಟುಕನಿಗೂ ಮನಕರಗಿ ಕಣ್ಣುಗಳಿಂದ ನೀರು ಸುರಿಯದಿರದು; ಆದರೆ ನಿರ್ದಯಶಾಲಿಯಾದ ಹಿಂದೂಸಮಾಜವು ಕೆಲವು ಮಿಥ್ಯ ತಥಾ ಸ್ವಾರ್ಥಪರವಾದ ಗ್ರಂಥಗಳ ಆಧಾರದಿಂದ ಸನಾತನಧರ್ಮವೆಂಬ ಬಣಹೆಮ್ಮೆಯನ್ನು ಕೊಚ್ಚಿ ಕೊಳ್ಳುತ್ತಿದೆಯಲ್ಲದೆ ಇವರ ಕಡೆಗೆ ಕಣ್ಣೆತ್ತಿ ನೋಡುವುದಿಲ್ಲ.

ಈ ತರದ ದುರ್ದೆಸೆಯಲ್ಲಿ ಬಿದ್ದು ನರಳುತ್ತಿರುವ ವಿತಂತುಗಳನ್ನುದ್ಧರಿಸಲಿಕ್ಕೆ ಕೆಳಗೆ ವಿವರಿಸಿದ ಉಪಾಯಗಳನ್ನು ಕೈಕೊಂಡರೆ ಬಹಳ ಶ್ರೇಯಸ್ಕರವೆಂದು ನನ್ನ ಅಭಿಪ್ರಾಯ.

## ಪುನರ್ವಿವಾಹ ಹೇಗಾಗಬೇಕು?

(೧) ಅಕ್ಷತಯೋನಿ ವಿಧವೆಗೆ ಅವಳು ಯಾವ ಜಾತಿಯವಳಾಗಿದ್ದರೂ ಅವಶ್ಯವಾಗಿ ಪುನರ್ವಿವಾಹವನ್ನು ಮಾಡತಕ್ಕದ್ದು. ಪತಿಯ ಪರಿಚಯವು ಸಹಾ ಸರಿಯಾಗಿ ಆಗದ ಮತ್ತು ವಿವಾಹವೆಂದರೇನೆಂಬುವುದು ಸಹ ಗೊತ್ತಿರದ ಕನ್ಯೆಯರೆದುರು ನಾವು ದಾಂಪತ್ಯಜೀವನದ ತತ್ವವನ್ನು ಬೋಧಿಸಿ, ಅಂತಹವರನ್ನು ವೈಧವ್ಯ ದೀಕ್ಷೆಯಲ್ಲಿ ಇಡುವುದರಿಂದ ಪ್ರಯೋಜನವೇನು?

(೨) ಕೆಲವು ಸಮಯಗಳ ವರೆಗೆ ಪತಿಯ ಸಂಸರ್ಗದಲ್ಲಿದ್ದು ಮತ್ತೆ ವಿಧವೆಯಾದವಳು ಪುನರ್ವಿವಾಹವನ್ನು ಇಚ್ಛಿಸಿದರೆ ಅವಳ ಇಚ್ಛೆಗೆ ಅನುಸರಿಸಿ ಅವಳ ಯೋಗ್ಯತಾನುಸಾರವಾದ ರೀತಿಯಲ್ಲಿ ಅವಳಿಗೆ ಪುನರ್ವಿವಾಹವನ್ನು ಮಾಡಬೇಕು.

(೩) ಹಿಂದೂಸ್ಥಾನದ ಕೆಲವು ಕಡೆಗಳಲ್ಲಿ ಸ್ತ್ರೀಯರಿಗಿಂತ ಅವಿವಾಹಿತ ಪುರುಷರು ಹೆಚ್ಚು ಮಂದಿ ಇದ್ದಾರೆ. ಉದಾಹರಣೆಗಾಗಿ ಪಂಜಾಬಿನಲ್ಲಿ "ಐದು ವರ್ಷದ ಮಕ್ಕಳಲ್ಲಿ 24,017 ಮಂದಿ ಬಾಲಿಕೆಯರು ಕಡಿಮೆ. 5ರಿಂದ 10 ವರ್ಷದ ಮಕ್ಕಳಲ್ಲಿ 2,45,690 ಮಂದಿ ಬಾಲಿಕೆಯರು ಕಡಿಮೆ. ಇದೇ ಪ್ರಕಾರ 15ರಿಂದ 20ರ ವರೆಗಣವರಲ್ಲಿ 5,25,711 ಮಂದಿ ಕನ್ಯೆಯರು ಕಡಿಮೆ; ಡಿಲ್ಲಿಯಲ್ಲಿ 29,836; ಮುಲ್ತಾನಿನಲ್ಲಿ 7,743; ರಾವಲ್‌ಪಿಂಡಿಯಲ್ಲಿ 9,058; ಅಂಬಾಲದಲ್ಲಿ 3,850; ಫಿರೋಜ್‌ಪುರದಲ್ಲಿ 6,516 ಮಂದಿ ಸ್ತ್ರೀಯರು ಪುರುಷರಿಗಿಂತ ಕಡಿಮೆ ಇರುತ್ತಾರೆ. ಇಡೀ ಪಂಜಾಬಿನಲ್ಲಿ 1797619 ಮಂದಿ ಅವಿವಾಹಿತ ಪುರುಷರಿದ್ದಾರೆ. 10,62,507 ಮಂದಿ ಅವಿವಾಹಿತ ಕನ್ಯೆಯರಿದ್ದಾರೆ. ಈ ಲೆಕ್ಕ ಪ್ರಕಾರ 7,35,112

ಮಂದಿ ಪುರುಷರು ಅವಿವಾಹಿತರಾಗಿಯೇ ಇರಬೇಕಾಗುವುದು. ಪುನರ್ವಿವಾಹವಾಗಲು ಯೋಗ್ಯವಾಗಿರುವ ವಿಧುರರಲ್ಲಿ 50 ವರ್ಷ ಪ್ರಾಯದ ವರೆಗಣವರು 180874 ಮಂದಿ ಇದ್ದಾರೆ. ಇವರನ್ನು ಅವಿವಾಹಿತರೊಡನೆ ಸೇರಿಸಿದರೆ 9,15,986 ಮಂದಿಗೆ ಕನ್ಯೆಯರೇ ಇಲ್ಲವೆಂದಾಯಿತು. ಇಂತಹವರೆಲ್ಲರೂ ಪುನರ್ವಿವಾಹಕ್ಕಾಗಿ ಹಾ ತೊರೆಯುತ್ತಿರುವ ವಿಧವೆಯರನ್ನೇ ವರಿಸಿಕೊಳ್ಳುವುದು ಉತ್ತಮ.

(೪) ಸ್ತ್ರೀಯರ ಸಂಖ್ಯೆಯು ಕಡಿಮೆಯಾಗಲಿಕ್ಕೆ ಹಿಂದೂ ಸ್ಥಾನದಲ್ಲಿ ರೂಢಿಯಲ್ಲಿರುವ ಬಹುವಿವಾಹ ಪದ್ಧತಿಯು ಒಂದು ಕಾರಣವಾಗಿರುತ್ತದೆ. ಈ ದುಷ್ಟಪದ್ಧತಿಯನ್ನು ಸಂಪೂರ್ಣವಾಗಿ ನಾಶಮಾಡಬೇಕು. ಒಬ್ಬೊಬ್ಬರು ಒಂದಲ್ಲ ಎರಡಲ್ಲ ಹದಿನಾಲ್ಕು ಮಂದಿ ಸ್ತ್ರೀಯರನ್ನು ವರಿಸಿದವರೂ ಹಿಂದೂಸಮಾಜದಲ್ಲಿದ್ದಾರೆ. ಇದೊಂದು ಪದ್ಧತಿಯಲ್ಲಿ ನಾವು ಮಹಮ್ಮದೀಯರನ್ನು ಅನುಕರಣೆ ಮಾಡಿದಂತಾಯಿತು. ಈ ಪದ್ಧತಿಯು ಮಹಿಳಾಸಮಾಜದ ಅಸ್ತಿತ್ವ ವನ್ನೇ ನಾಶಮಾಡುತ್ತದೆ.

ವಿಧುರರು ವಿಧವೆಯರನ್ನೇ ವಿವಾಹವಾಗುವುದು ಬಹಳ ಉತ್ತಮ. ವೇದಶಾಸ್ತ್ರಗಳ ಆಧಾರಗಳನ್ನು ಅಡಿಮೇಲುಮಾಡಿ ವಿಧವಾವಿವಾಹವನ್ನು ವಿರೋಧಿಸುತ್ತಿರುವ ಈಗಿನ ಅನೇಕ ಮಂದಿ ಮಹಾನುಭಾವರು ಪ್ರಾಚೀನ ಇತಿಹಾಸಗಳನ್ನಾಗಲೀ ದೇಶದ ಅಥವಾ ಸಮಾಜದ ಪ್ರಕೃತದ ಪರಿಸ್ಥಿತಿಯನ್ನಾಗಲೀ ಚೆನ್ನಾಗಿ ನೋಡುವುದಿಲ್ಲ. ಹಿಂದಿನ ಕಾಲದಲ್ಲಿ ಬಹುವಿವಾಹ ಪದ್ಧತಿ ಇದ್ದಿಲ್ಲ. ಹಲಕೆಲವು ರಾಜರು ಮಾಡಿಕೊಂಡಿದ್ದರೂ ಅದರಿಂದ ಅನೇಕ ತರದ ಕಷ್ಟಗಳನ್ನನುಭವಿಸಿರುವರೆಂಬುದನ್ನು ರಾಮಾಯಣಾದಿ ಗ್ರಂಥ ಗಳಿಂದ ನಾವು ತಿಳಿದುಕೊಳ್ಳಬಹುದು. ಹೀಗಿರುತ್ತಾ ಸಾಮಾನ್ಯ ಜನರು ಎಂಟು ಹತ್ತು ಮಂದಿ ಕನ್ಯೆಯರನ್ನು ವಿವಾಹವಾದರೆ ಹೇಗೆ ಸುಖಿಜೀವಿಗಳಾಗುವರು? ಇಂತಹವರು ಅಲ್ಪಾಯುವಿನಲ್ಲಿ ತರತರದ

ರೋಗಗಳಿಗೆ ತುತ್ತಾಗಿ ಸಾಯುತ್ತಾರೆ. ಇಂತಹ ಒಬ್ಬನಿಂದ ಎಂಟ್ಹತ್ತು ಮಂದಿ ಸ್ತ್ರೀಯರು ವಿಧವೆಯರಾಗಬೇಕಾಗುತ್ತದೆ. ಇಂತಹ ಅನ್ಯಾಯಕೃತ್ಯವನ್ನು ಸಮೂಲವಾಗಿ ನಾಶಮಾಡಬೇಕು.

(೫) ಬಾಲ್ಯವಿವಾಹ ಪದ್ಧತಿಯನ್ನು ನಿಲ್ಲಿಸಬೇಕು; ಸರಿಯಾದ ರೀತಿಯಲ್ಲಿ ಈ ಪದ್ಧತಿಯು ನಿಂತುಹೋದರೆ ವಿಧವೆಯರ ಸಂಖ್ಯೆಯು ಇಷ್ಟೊಂದು ಬಲದಿಂದ ಹೆಚ್ಚಲಿಕ್ಕಿಲ್ಲ.

(೬) ಎಲ್ಲಾ ಕಡೆಗಳಲ್ಲಿಯೂ ವಿಧವೆಯರ ಸಲುವಾಗಿ ಆಶ್ರಮಗಳನ್ನು ಸ್ಥಾಪಿಸಿ ಅಲ್ಲಿ ಅವರಿಗೆ ಉತ್ತಮ ರೀತಿಯಲ್ಲಿ ಧಾರ್ಮಿಕ, ಸಾಮಾಜಿಕ ಮುಂತಾದ ಸರ್ವಶಿಕ್ಷಣವನ್ನು ಕೊಟ್ಟು ಅವರಲ್ಲಿ ಪವಿತ್ರ ಜೀವನವನ್ನುಂಟುಮಾಡಬೇಕು. ಈ ರೀತಿಯ ವಿಧಾಯಕ ಕಾರ್ಯವನ್ನು ಕೈಕೊಂಡರೆ ಅಲ್ಪಸಮಯದಲ್ಲಿಯೇ ವಿಧವೆಯರು ಹೆಚ್ಚಿನ ಸುಖವನ್ನು ಪಡೆಯುವರು.

## ಪುರುಷ ಸಮಾಜ ಮತ್ತು ವಿಧವೆಯರು.

ಭಾರತವರ್ಷದಲ್ಲಿ ಮಹಿಳೆಯರ ಅದರಲ್ಲೂ ವಿಧವೆಯರ ಉದ್ಧಾರಕ್ಕಾಗಿ ಎಷ್ಟೆಷ್ಟು ಕಾರ್ಯಗಳು ಮಾಡಲ್ಪಡುತ್ತಿವೆಯೋ ಅವೆಲ್ಲವುಗಳಿಗೆ ಪ್ರಬಲವಾದ ಒಂದು ವಿಘ್ನವು ಇದ್ದೇ ಇದೆ. ಅದಾವುದೆಂದರೆ ಪುರುಷಸಮಾಜದ ಆಲಸ್ಯ. ಈಗಿನ ಪುರುಷಸಮಾಜವು ಒಂದು ವಿಧದ ಕೆಟ್ಟ ಸಂಸ್ಕಾರಕ್ಕೆ ಬಲಿಬಿದ್ದಿದೆ. ಆದುದರಿಂದಾಗಿ ಅದು ಯಾವಾಗಲೂ ಮಹಿಳೆಯರನ್ನು ಕುಟಿಲದೃಷ್ಟಿಯಿಂದ ನೋಡುತ್ತಿದೆ. ಇದರಿಂದಾಗಿ ಮಹಿಳೆಯರಲ್ಲಿರುವ ಆತ್ಮಗೌರವವು ಕುಂದುತ್ತಾ ಬಂದದೆ. ಇದರಿಂದಾಗಿಯೇ ಎಷ್ಟೋ ಮಹಿಳೆಯರು ಸಾರ್ವಜನಿಕ ಕಾರ್ಯಗಳಲ್ಲಿ ಭಾಗ ತೆಗೆದುಕೊಳ್ಳಲಿಕ್ಕೂ ಹಿಂಜರಿಯುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಸ್ತ್ರೀಯರ ಉನ್ನತಿ ಹೇಗಾಗುವುದು? ಬಾಲ್ಯವಿವಾಹ ಪದ್ಧತಿಯನ್ನು ನಾಶಮಾಡುವುದಕ್ಕೂ, ವಿಧವಾ ಪುನರ್ವಿವಾಹ ಕ್ರಮವನ್ನು ಪ್ರಚುರಗೊಳಿಸಲಿಕ್ಕೂ ಪ್ರಯತ್ನಿಸಿದಾಗ ಪುರುಷ

ಸಮಾಜದಲ್ಲಿ ಭಯಂಕರವಾದ ಉತ್ಪಾತ ಉಂಟಾಗುತ್ತದೆ. ಅದರಲ್ಲೂ ಉದರಪೋಷಣೆಗಾಗಿ ಹೋರಾಡುವ ಕೆಲವು ಮಠಾಧಿಪತಿಗಳೂ, ಅವರಿಂದ ದೊರೆಯುತ್ತಿರುವ ಭಿಕ್ಷಾನ್ನದ ಸವಿಗೆ ಮರುಳಾಗಿ ಬಿದ್ದಿರುವ ಹಲಕೆಲವು ಶಾಸ್ತ್ರಿಮಹೋದಯರುಗಳೂ ಭೂವ್ಯಾಕಾಶವನ್ನೇ ಒಂದುಮಾಡಿ ಬಿಡುತ್ತಾರೆ. ಇನ್ನು ಕೆಲವು ಮಹನೀಯರು ಜಾತಿ ಬಹಿಷ್ಕಾರದ ಬೆದರಿಕೆಯನ್ನು ಹಾಕುತ್ತಾರೆ. ಈ ರೀತಿಯ ಸ್ವಾರ್ಥಾಂಧತೆಯು ಪುರುಷ ಸಮಾಜದಲ್ಲಿ ಬೇರೂರಿಹೋಗಿರುವುದ ರಿಂದಲೇ ಸಮಾಜಸುಧಾರಣಾಕಾರ್ಯವು ತಡೆಯಲ್ಪಟ್ಟಿದೆ.

ನಮ್ಮ ಭಗಿನಿಯರ ಉದ್ಧಾರವಾಗಬೇಕಾದರೆ, ಅವರ ಗೌರವವು ಉಳಿಯಬೇಕೆಂದಿದ್ದರೆ ಪುರುಷಸಮಾಜದಲ್ಲಿ ಅಂಟಿಕೊಂಡಿರುವ ಸ್ವೇಚ್ಛಾಪರವಾದ ಕುತ್ಸಿತ ವರ್ತನೆಗಳನ್ನೆಲ್ಲಾ ಮೊದಲಾಗಿ ತ್ಯಜಿಸ ಬೇಕು. ಈಗಿನ ಕಾಲದಲ್ಲಿ ಭಾರತವರ್ಷದಲ್ಲಿರುವ ವಿಧವೆಯರ ಆರ್ತನಾದದ ಕಡೆಗೆ ಪ್ರತಿಯೊಬ್ಬ ಹಿಂದೂವಿನ ಸಹಾನುಭೂತಿ ಇರುವುದಾದರೆ ಅಂತಹವರು ತಮ್ಮ ಕಾಯಾ ವಾಚಾ ಮನಸ್ಸನ್ನು ಅತ್ಯಂತ ಉದಾರಗೊಳಿಸತಕ್ಕದ್ದು. ಮಹಿಳೆಯರನ್ನು ಸರ್ವ ವಿಪತ್ತು ಗಳಿಂದ ರಕ್ಷಿಸಿ ಸನ್ಮಾನಿಸುವುದು ಆರ್ಯಜನಾಂಗದ ಪರಮಪುನೀತ ಕರ್ತವ್ಯವಾಗಿರುತ್ತದೆ. ಆಚಾರ ವಿಚಾರದಲ್ಲಿ ಲೌಕಿಕವನ್ನೇ ಪ್ರಾಮುಖ್ಯವಾಗಿಟ್ಟುಕೊಂಡಿರುವಂತಹ ಆಂಗ್ಲೇಯರಷ್ಟು ಸಹಾ ನಾವು ಸ್ತ್ರೀಯರನ್ನು ಗೌರವಿಸುವುದಿಲ್ಲ. ನಾವು ನಮ್ಮ ಸಮಾಜದಲ್ಲಿ ವೇದೋಕ್ತವಾದ ಆ ಉತ್ತಮ ಸಭ್ಯತೆಯನ್ನು ಎಡೆಬಿಡದೆ ಪ್ರಚುರ ಗೊಳಿಸಬೇಕು. ರಾಜಬೀದಿಗಳಲ್ಲಿ ಹಾದುಹೋಗುವ, ಸಭಾಸಮಿತಿ ಗಳಲ್ಲಿ ಭಾಗವಹಿಸುವ ಸ್ತ್ರೀಯರಲ್ಲಿ ಕಟಾಕ್ಷದೃಷ್ಟಿಯನ್ನಿಡುವುದು ಅಲ್ಲಸಲ್ಲದ ಕೆಟ್ಟ ಊಹನೆಗಳನ್ನು ಅವರ ಮೇಲೆ ಹೊರಿಸುವುದು ಇತ್ಯಾದಿ ನಿಕೃಷ್ಟ ವ್ಯವಹಾರಗಳನ್ನು ನಾವು ಮಾಡಬಾರದು. ಇಂತಹ ದುರ್ವರ್ತನೆಗಳು ಅಲ್ಲಲ್ಲಿ ಕಂಡುಬರುವುದರಿಂದಲೇ ಇಂದು ಮಹಿಳಾಸಮಾಜವು ಕರ್ತವ್ಯ ಪರಾಙ್ಮುಖತೆಯಲ್ಲಿ ಬಿದ್ದಿರುತ್ತದೆ.

ಇದರ ಸುಧಾರಣೆಯಾಗದ ಹೊರತು ದುರ್ದೈವಿಗಳಾದ ವಿಧವೆಯರ ಅಹೋರಾತ್ರಿಯ ಕಂಬನಿಯು ನಿಲ್ಲಲಿಕ್ಕಿಲ್ಲ. ಇಲ್ಲಿ ನಾವು ಪುರುಷ ಸಮಾಜವನ್ನೇ ಒತ್ತಿ ಟೀಕಿಸಬೇಕಾಗುತ್ತದೆ. ಏತಕ್ಕೆಂದರೆ—ಪುರುಷ ಸಮಾಜದ ನಿರಂಕುಶ ವರ್ತನೆ ಮತ್ತು ಸ್ವಾರ್ಥಸಾಧನೆಯಿಂದಲೇ ಭಾರತೀಯ ಮಹಿಳಾ ಸಮಾಜದ ಅಧಃಪತನವಾಯಿತು.

ಹಿಂದೂಸಮಾಜದಲ್ಲಿರುವ ಪ್ರತಿಯೊಬ್ಬರೂ ದೀನ ದುಃಖಿಗಳಾದ ವಿತಂತುಗಳ ಯಾತನಾತೀತವಾದ ಅವಸ್ಥೆಯನ್ನೂ ಸಮಾಜಬಂಧನವನ್ನೂ ಹೋಗಲಾಡಿಸುವುದಕ್ಕಾಗಿ ಹಿಂದೂಸಮಾಜದಲ್ಲಿ ಪ್ರಬಲವಾದ ಸಾಮಾಜಿಕ ಕ್ರಾಂತಿಯನ್ನು ಉದ್ವಿಗ್ನಗೊಳಿಸಬೇಕು. ಪತಿಹೀನರಾಗಿ ನಿರ್ಗತಿಯಲ್ಲಿ ಬಿದ್ದು ಹಗಲೂ ರಾತ್ರಿ ಕಣ್ಣೀರನ್ನು ಸುರಿಸುತ್ತಿರುವ ವಿಧವೆಯರ ಅನುದಿನದ ಶಾಪವು ಪುರುಷಸಮಾಜದ ತಲೆಯ ಮೇಲೆ ಬೀಳುತ್ತಿದೆ ಎಂಬುದನ್ನು ಮರೆಯಬಾರದು. ಒಂದು ದಿನ ಈ ಶಾಪದಿಂದಲೇ ಇಡೀ ಸಮಾಜವೇ ಭಸ್ಮವಾಗಲಿಕ್ಕಿದೆ. ಇಲ್ಲಿ ನಾವು ಪುರುಷಸಮಾಜವನ್ನು ಬಲವಾಗಿ ಟೀಕಿಸಿದೆವೆಂದು ವಾಚಕರು ಬೇಸರಿಸಬಹುದು. ಪರಂತು, ಇದಕ್ಕಾಗಿ ನಾವಿಲ್ಲಿ ಕ್ಷಮೆ ಬೇಡಲಾರೆವು. ಕಾರಣವೇನೆಂದರೆ ನಮ್ಮಲ್ಲಿದ್ದ ನಿಂದನೀಯ ಮತ್ತು ಸ್ವಾರ್ಥಪರವಾದ ವರ್ತನೆಗಳಿಂದಲೇ ನಮ್ಮ ಸಮಾಜದ ಮುಖ್ಯಾಂಗವಾದ ಸ್ತ್ರೀಸಮುದಾಯವು ಝುರ್ಝುರಿತವಾಗಿದೆ. ಇದರಿಂದಾಗಿಯೇ ಭಾರತೀಯ ಜನಾಂಗವು ಎಲ್ಲಾ ಕಡೆಗಳಿಂದಲೂ ತಿರಸ್ಕರಿಸಲ್ಪಡುತ್ತಿದೆ. ಹೀಗಿರುವಲ್ಲಿ ನಮ್ಮನ್ನು ನಾವು ಪ್ರಶಂಶಿಸಿಕೊಳ್ಳುವುದು ಯೋಗ್ಯವೇ?



## ೭. ವಿಧವೆಯರು ಹೇಗಿದ್ದಾರೆ?

ಪ್ರಚಲಿತಕಾಲದಲ್ಲಿ ಮೂರು ತರಗತಿಯ ವಿಧವೆಯರು ಹಿಂದೂ ಸಮಾಜದಲ್ಲಿದ್ದಾರೆ. ಒಂದು ಪಂಗಡದವರು ಜೀವಮಾನವನ್ನೆಲ್ಲಾ ಸಂಪೂರ್ಣ ಬ್ರಹ್ಮಚರ್ಯೆಯಿಂದಲೇ ಕಳೆಯುತ್ತಿದ್ದಾರೆ. ಪರಂತು, ಇಂತಹವರ ಸಂಖ್ಯೆಯು ಬಹಳ ಕಡಿಮೆ. ಇಂತಹವರು ಎಲ್ಲರಿಂದಲೂ ವಿಶೇಷವಾದ ಆದರಸತ್ಕಾರಕ್ಕೆ ಯೋಗ್ಯವಾಗಿರುವರು. ಕಾರಣ ವೇನೆಂದರೆ,—ಇವರು ತಮ್ಮ ಜೀವನವನ್ನು ಅತ್ಯಂತ ವೀರತೆಯಿಂದ ಕಳೆಯುತ್ತಿದ್ದಾರೆ. ಆದರೆ ಹಿಂದೂಸಮಾಜದಲ್ಲಿ ಮಾತ್ರ ಇವರಿಗೂ ಯೋಗ್ಯ ಸ್ಥಾನವಿಲ್ಲ. ನಮ್ಮಲ್ಲಾಗುವ ಶುಭಕಾರ್ಯಗಳಲ್ಲಿ ಯಾವು ದಕ್ಕೂ ಇವರಿಗೆ ಪ್ರವೇಶವಿಲ್ಲ. ವೇಶ್ಯಾಸ್ತ್ರೀಯರಿಗೆ ಎಲ್ಲಾ ಕಡೆ ಗಳಲ್ಲಿ ಪ್ರವೇಶಕೊಡುತ್ತಿರುವಂತಹ ಹಿಂದೂಸಮಾಜದಲ್ಲಿ ಬಾಲ್ಯ ದಿಂದಲೇ ವೈಧವ್ಯವನ್ನು ಪಡೆದು ಅತ್ಯಂತ ಕಠಿಣತರವಾದ ರೀತಿಯಲ್ಲಿ ಆದರ್ಶಜೀವನದಿಂದಿರುವ ಮಹಿಳೆಯರಿಗೆ ಎಳ್ಳಷ್ಟೂ ಸ್ಥಾನವಿಲ್ಲ ವೆಂದರೆ ಇದೆಂತಹ ನಾಚಿಕೆಗೇಡು! ನಮ್ಮ ಸಮಾಜದಲ್ಲಿ ಸಾವಿರಾರು ಮಂದಿ ವಿಧವೆಯರು ಬಂಧನದಲ್ಲಿರುವಾಗಲೂ ನಮ್ಮಲ್ಲಾಗುವ ವಿವಾ ಹಾದಿ ಸತ್ಕಾರ್ಯಗಳಿಗೆ,—ದೇವಸ್ಥಾನ ಮಠಗಳಲ್ಲಿ ಜರಗುವ ಉತ್ಸ ವಾದಿಗಳಿಗೆ,—ನರ್ತನ ಮತ್ತು ಗಾಯನಕ್ಕಾಗಿ ವೇಶ್ಯಾಸ್ತ್ರೀಯರನ್ನು ಕರೆಸಲು ನಾವು ಹಿಂಜರಿಯುವುದಿಲ್ಲ. ಮನೆಯೊಳಗೆ ಪವಿತ್ರಜೀವನ ದಿಂದಿರುವ ಒಬ್ಬ ವಿಧವೆಗಿಂತಲೂ,—ಪೇಟೆಯಲ್ಲಿ ಸಾರ್ವಜನಿಕ ಉಪ ಯೋಗಕ್ಕೆಂದು ಬಿದ್ದುಕೊಂಡಿರುವ ಒಬ್ಬ ವೇಶ್ಯೆಯು ಪವಿತ್ರಳೇ? ಈ ಕುರಿತು ವಾಚಕರು ಏನು ಉತ್ತರ ಕೊಡುವಿರಿ?

ಎರಡನೆಯ ತರಗತಿಯ ವಿಧವೆಯರು ಸಾಧಾರಣ ತರಗತಿಯ ನಡತೆಯುಳ್ಳವರಾಗಿರುತ್ತಾರೆ; ಅಂದರೆ ಪ್ರಶಂಸೆಗೆ ಯೋಗ್ಯವಾದ

ಸದ್ಗುಣಗಳಾಗಲೀ, ತಿರಸ್ಕಾರಕ್ಕೆ ಯುಕ್ತವಾದ ದುರ್ಗುಣಗಳಾಗಲಿ ಇವರಲ್ಲಿ ಕಂಡುಬರುವುದಿಲ್ಲ. ಇವರ ಜೀವನವು ಹಿಂದೂಸಮಾಜದ ಮೇಲೆಯೇ ಹೊಂದಿಕೊಂಡಿದೆ. ಸಮಾಜದವರು ತಮ್ಮ ಮನಸ್ಸನ್ನು ವಿಶಾಲಗೊಳಿಸಿ ಈ ವಿಧವೆಯರ ಬಗ್ಗೆ ಯೋಗ್ಯ ವ್ಯವಸ್ಥೆಯನ್ನು ಮಾಡಿದರೆ ಇವರೆಲ್ಲರೂ ಸುಖಿಜೀವಿಗಳಾಗುವರು. ಇಲ್ಲವಾದರೆ ಇವರು ಸಹಾ ಪಶುವೃತ್ತಿಯನ್ನೇ ಅವಲಂಬಿಸಬೇಕಾಗುತ್ತದೆ. ಪರಂತು, ವರ್ತಮಾನಕಾಲದ ಹಿಂದೂಗಳಲ್ಲಿ ಅರುವತ್ತು ವರ್ಷ ಪ್ರಾಯದ ಯಮನಿಮಂತ್ರಣಾಯುಕ್ತನಾದ ವೃದ್ಧತರುಣನಿಗೆ ಎಂಟ್ಹತ್ತು ವರ್ಷ ಪ್ರಾಯದ ಕನ್ಯೆಯೊಡನೆ ಐದ್ಯೆದುಸಾರಿ ವಿವಾಹ ಮಾಡಿಕೊಳ್ಳಲಿಕ್ಕೂ ಅಧಿಕಾರವು ಕ್ಷಣಮಾತ್ರದಲ್ಲಿ ದೊರೆಯುತ್ತದೆ. ಆದರೆ ಅದೇ ಮನುಷ್ಯನ ಅಥವಾ ಅವನ ಸಮಾಜದ ಹತ್ತುಹನ್ನೆರಡು ವರ್ಷ ಪ್ರಾಯದ ಕನ್ಯೆಯು ವಿತಂತುವಾಗಿ ಮನೆಯೊಳಗೆ ಕುಳಿತು ಕೊಂಡು ಕಣ್ಣೀರು ಸುರಿಸುತ್ತಿರುವುದನ್ನು—ಅವನಾಗಲಿ, ಹಿಂದೂ ಸಮಾಜವಾಗಲಿ ಕಣ್ಣೆತ್ತಿ ನೋಡುವುದಿಲ್ಲ. ಇಂತಹ ಕನ್ಯೆಯರಿಗೆ ನಾವು "ನೀವು ಆಜನ್ಮ ಪರಿಯಂತ ಬ್ರಹ್ಮಚಾರಿಣಿಯರಾಗಿ ಇರಿರಿ" ಎಂದು ಉಪದೇಶ ಕೊಡುತ್ತೇವಲ್ಲದೆ ಒಬ್ಬಳ ಅನಂತರ ಮತ್ತೊಬ್ಬ ಳನ್ನು ಮನಬಂದಂತೆ ವಿವಾಹಮಾಡಿಕೊಳ್ಳುವ ಪುರುಷಸಮಾಜಕ್ಕೆ ನಾವು ಯಾವ ಉಪದೇಶವನ್ನೂ ಕೊಡುವುದಿಲ್ಲ.

ಮೂರನೆಯ ತರಗತಿಯ ವಿಧವೆಯರು—ಯಾವ ವಿಧದಿಂದಲೂ ತಮ್ಮ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಅಸಮರ್ಥ ರಾಗಿರುತ್ತಾರೆ. ಇಂತಹವರ ಸಂಖ್ಯೆಯು ಅಷ್ಟೊಂದು ಕಡಿಮೆ ಇರುವುದಿಲ್ಲ. ಇಂತಹವರ ವೃತ್ತಿಯೂ ಏನೆಂಬುವುದನ್ನು ನಾನಿಲ್ಲಿ ಪ್ರತ್ಯೇಕ ವಿವರಿಸಬೇಕಾಗಿಲ್ಲ. ದೊಡ್ಡ ದೊಡ್ಡ ನಗರಗಳಲ್ಲಿ

ಧನಸಂಪತ್ತಿನಿಂದ ಮೆರೆಯುತ್ತಿರುವ ಶ್ರೀಮಂತರ ಮುಂದೆ ವಾರಾಂಗನೆಯರಾಗಿಯೂ, ನಾಟಕ ಸಿನೆಮ ಕಂಪೆನಿಗಳಲ್ಲಿ ನಟಿಯರಾಗಿಯೂ ಜೀವಿಸುವವರೇ ಇವರಲ್ಲಿ ಹೆಚ್ಚಿನ ಮಂದಿ! ಇಂತವರಿಂದಲೇ ಈಗಿನ ಸಭ್ಯ ಹಿಂದೂಸಮಾಜದ ಪುರುಷವರ್ಗವು ತನ್ನ ಐಹಿಕ ಸುಖವನ್ನು ಪೂರೈಸಿಕೊಳ್ಳುತ್ತದೆ. ಆಗ ಮಾತ್ರ ಅದಕ್ಕೆ ಧರ್ಮಾಧರ್ಮದ ಯೋಚನೆಯು ಹೊಳೆಯುವುದಿಲ್ಲ. ಯಾವದಾದರೊಂದು ಮನೆಯಲ್ಲಿದ್ದ ವಿಧವೆಯು ತನ್ನ ಮೇಲೆ ಹೊರಿಸಲ್ಪಡುತ್ತಿರುವ ನರಕಯಾತನೆಗಳನ್ನು ಸಹಿಸಲಾರದೆ ಮುಹಮ್ಮದೀಯ ಅಥವಾ ಕ್ರೈಸ್ತರ ಆಶ್ರಯವನ್ನು ಪಡೆಯಲು ಓಡಿಹೋದರೆ ಆಕೆಯ ತಂದೆಯು ತನ್ನ ಮರ್ಯಾದೆಯನ್ನುಳಿಸಿಕೊಳ್ಳುವುದಕ್ಕೋಸ್ಕರ ತನ್ನ ಮಗಳು ಸತ್ತುಹೋದಳೆಂದು ಪ್ರಕಟಿಸಲು ಹಿಂಜರಿಯುವುದಿಲ್ಲ; ಹೊರತು ವೃದ್ಧಾಪ್ಯದಲ್ಲಿ ತಾನು ವಿವಾಹಮಾಡಿಕೊಳ್ಳುವಂತೆ ಯೌವ್ವನೆಯಾದ ತನ್ನ ಮಗಳಿಗೆ ಪುನರ್ವಿವಾಹ ಮಾಡಿಕೊಡುವದೆಂದರೆ ಧರ್ಮವೇ ಹಾಳಾಗುತ್ತದೆಂಬ ಒಣಹರಟೆಯನ್ನು ಹೇಳಿಕೊಳ್ಳುತ್ತಾನೆ. ಪ್ರಕೃತ ಪುರುಷಸಮಾಜದಲ್ಲಿರುವ ಧರ್ಮಾಭಿಮಾನವೆಂದರೆ ಇದೇ! ಆತನು ಯಾರನ್ನು ಸತ್ತು ಹೋದಳೆಂದು ಪ್ರಕಟಿಸುವನೋ ಆಕೆಯು ಹಿಂದೂಸಮಾಜವನ್ನು ಕೊಂದೇ ಸಾಯುವಳೆಂಬುದನ್ನು ಅವನು ಯೋಚಿಸುವುದಿಲ್ಲ. ಪ್ರತಿನಿತ್ಯವೂ ನಮ್ಮ ಕಣ್ಣ ಮುಂದೆಯೇ ಸಾವಿರಾರು ಮಂದಿ ವಿಧವೆಯರು ವೇಶ್ಯಾವೃತ್ತಿಯನ್ನು ಕೈಕೊಳ್ಳುತ್ತಿರುವುದನ್ನೂ; ಕ್ರೈಸ್ತ ಮತ್ತು ಮುಹಮ್ಮದೀಯ ಮತವನ್ನು ಸ್ವೀಕರಿಸುತ್ತಿರುವುದನ್ನೂ ಹಿಂದೂ ಸಮಾಜವು ಪ್ರತ್ಯಕ್ಷ ನೋಡುತ್ತಿದೆಯಾದರೂ ಆ ಕುರಿತು ತನ್ನ ಕರ್ತವ್ಯವೇನೆಂಬುದು ಮಾತ್ರ ಇನ್ನೂ ತೋರಿಬರಲಿಲ್ಲವೆಂಬುವುದು ನಮ್ಮ ದುರ್ಭಾಗ್ಯವೆಂದೇ ಹೇಳಬೇಕು.

ಹಿಂದೂಸಮಾಜದ ಅಸ್ತಿತ್ವವು ಸ್ಥಿರವಾಗಿ ಉಳಿಯಬೇಕಾದರೆ ಸಮಾಜದಲ್ಲಿ ಉಚ್ಚವರ್ಗದವರೆಂದೆನ್ನಿಸಿಕೊಳ್ಳುವವರು ಸಮಾಜದಲ್ಲಿರುವ ಪ್ರತಿಯೊಬ್ಬ ವಿಧವೆಗೂ ಅವರವರ ಇಚ್ಛಾನುಸಾರ ಪುನರ್ವಿವಾಹಕ್ಕೆ ಎಡೆಕೊಡಬೇಕು; ವಿಧುರರು ಪುನರ್ವಿವಾಹಿತರಾಗುವಾಗ ಇಂತಹ ವಿಧವೆಯರನ್ನೇ ವರಿಸತಕ್ಕದ್ದು. ಮಕ್ಕಳನ್ನು ಹೆತ್ತ ಮಾತಾಪಿತೃಗಳು ತಮ್ಮ ಕನ್ಯೆಯರನ್ನು ಧನಸಂಪತ್ತಿನ ಆಶೆಗಾಗಿ ಮುದುಕರಿಗೆ ಕೊಡಬಾರದು. ಧನಸಂಪತ್ತು ವಿವಾಹದ ಉದ್ದೇಶವಲ್ಲ. ವಿವಾಹದ ಪ್ರಯೋಜನವೇನೆಂಬುದನ್ನು ನಾವು ಮೊದಲಿನ ಪ್ರಕರಣದಲ್ಲಿ ವಿವರಿಸಿರುವೆವು. ಬಾಲ್ಯವಿವಾಹವನ್ನು ಸಂಪೂರ್ಣ ನಾಶಗೊಳಿಸಬೇಕು. ವಿಧವಾವಿವಾಹವು ಶಾಸ್ತ್ರವಿರುದ್ಧವಲ್ಲವು! ಅಂಧಃರೂಢಿಯ ಪೂಜಾರಿಗಳೇ ಇದನ್ನು ಶಾಸ್ತ್ರವಿರುದ್ಧವೆಂದು ಗೊಣಗುಟ್ಟುತ್ತಿದ್ದಾರೆ.





## ೮. ಹಿಂದೂಸಮಾಜ ಮತ್ತು ವಿಧವೆಯರು!

ಇಲ್ಲಿ ನಾವು ಹಿಂದೂಸಮಾಜದವರ ಮುಂದೆ ಒಂದು ಪ್ರಶ್ನೆ ಯನ್ನಿಡುತ್ತೇವೆ. ಅದಾವುದೆಂದರೆ,—ನೀವು ಶಾಸ್ತ್ರಪ್ರಮಾಣಗಳನ್ನೇ ಹುಡುಕುತ್ತಾ ಮೂಲೆಯಲ್ಲಿ ಕುಳಿತಿರುವಂತೆಯೇ ಸಾವಿರಾರು ಮಂದಿ ವಿಧವೆಯರು ಅನ್ಯಮತವನ್ನು ಸ್ವೀಕರಿಸಿದರೆ, ನಿಮ್ಮ ಶಾಸ್ತ್ರಗಳಿಂದ ನಿಮಗೆ ದೊರೆಯುವ ಪ್ರಯೋಜನಗಳೇನು? ಶಾಸ್ತ್ರಗಳನ್ನು ನೀವು ರಕ್ಷಿಸುತ್ತೀರೋ ಅಥವಾ ನಿಮ್ಮನ್ನು ಶಾಸ್ತ್ರಗಳು ರಕ್ಷಿಸಬೇಕೋ? ನಿಮಗಾಗಿ ಶಾಸ್ತ್ರಗಳೋ? ಶಾಸ್ತ್ರಗಳಿಗಾಗಿ ನೀವೋ? ಶಾಸ್ತ್ರಗಳು ನಿಮ್ಮನ್ನು ರಕ್ಷಿಸುವುದಾದರೆ, ಗುಜರಾಥದ ಸೋಮನಾಥ ಮಂದಿರ ವನ್ನು ಮಹಮ್ಮದೀಯನಾದ ಘಜನಿ ಮಹಮ್ಮದನು ಪ್ರವೇಶಿಸಿ, ಅಲ್ಲಿದ್ದ ಆಭರಣಗಳನ್ನೆಲ್ಲಾ ದೋಚಿಕೊಂಡು, ವಿಗ್ರಹಗಳನ್ನೆಲ್ಲಾ ತುಂಡರಿಸಿ ಹೋಗುವಾಗ ನಿಮ್ಮ ಶಾಸ್ತ್ರಗಳು ಏತಕ್ಕೆ ಸುಮ್ಮನಿದ್ದವು? ಶಾಸ್ತ್ರಗಳನ್ನು ಮತ್ತು ವುಗಳಿಗೆ ಹೊಂದಿಕೊಂಡಿರುವ ಸರ್ವವನ್ನೂ ನೀವು ರಕ್ಷಿಸುವುದಾದರೆ ನಿಮ್ಮ ಈಗಿನ ಎಲ್ಲಾ ವ್ಯವಹಾರಗಳೂ ಶಾಸ್ತ್ರಾನು ಕೂಲವಾಗಿಯೇ ನಡೆಯುತ್ತಿವೆಯೇ? ಶಾಸ್ತ್ರಗಳೆಂಬುವುದು ಯಾರಾದ ರೊಬ್ಬ ಮನುಷ್ಯನ ಸ್ವಂತ ಸೊತ್ತಲ್ಲ. ಮಾನವಸಮಾಜಕ್ಕೆ ಸರ್ವ ಕಾಲಕ್ಕೂ ಉಪಯುಕ್ತವಾಗಿದ್ದು ನಿಷ್ಪಕ್ಷಪಾತವಾಗಿ ಇರುವಂಥವು ಗಳೇ ನಿಜವಾದ ಶಾಸ್ತ್ರಗಳು! ಅಂತಹ ಸರ್ವಸಮ್ಮತವಾದ ಶಾಸ್ತ್ರ ಗಳನ್ನು ನೀವೇತಕ್ಕೆ ಸ್ವೀಕರಿಸುವುದಿಲ್ಲ?

ನಮ್ಮ ಅಭಿಪ್ರಾಯದಂತೆ ನೀವು ಯಾವ ಶಾಸ್ತ್ರಗ್ರಂಥಗಳನ್ನು ನಂಬಿಕೊಂಡು ಬಂದಿರುವಿರೋ ಅದೇ ಗ್ರಂಥಗಳಾದ ವೇದ, ಯಾಜ್ಞ ವಲ್ಕ್ಯಸ್ಮೃತಿ, ಪರಾಶರ ಮತ್ತು ಮನುಸ್ಮೃತಿ—ಪುರಾಣ ಇತ್ಯಾದಿ ಗಳಲ್ಲಿ ವಿಧವಾವಿವಾಹವನ್ನು ಹೇಗೆ ಸಮರ್ಥಿಸಿರುತ್ತದೆಂಬುದನ್ನು ಇನ್ನಾದರೂ ಸ್ವಲ್ಪ ತಿಳಿದುಕೊಂಡರೆ ವಿಧವೆಯರ ದುರ್ದಶೆಯನ್ನು

ಹೋಗಲಾಡಿಸಲು ಹೆಚ್ಚಿನ ಅನುಕೂಲತೆಗಳು ಒದಗುವುವು. ಹೀಗೆ ಮಾಡುವುದರಿಂದ ಮಾತ್ರ ನಮ್ಮ ಶಾಸ್ತ್ರಗಳು ನಮ್ಮಿಂದ ರಕ್ಷಿಸಲ್ಪಡುವುವು ಹೊರತು ಈಗಿನಂತೆ ಸ್ವೇಚ್ಛೆಯಲ್ಲಿ ಮುಂದಕ್ಕೂ ನಡೆದರೆ ನಮ್ಮ ಶಾಸ್ತ್ರಗಳೆಲ್ಲವೂ ಪೆಟ್ಟಿಗೆಯಲ್ಲಿದ್ದಂತೆಯೇ ಹಿಂದೂಸಮಾಜವು ಮಾತ್ರ ಕ್ಷಿಪ್ರದಲ್ಲಿ ನಾಶಹೊಂದುವುದು. ಇಂತಹ ಸರ್ವನಾಶವು ನಿಮ್ಮ ಶಾಸ್ತ್ರಾನುಕೂಲವೇ? ಲಕ್ಷಾಂತರ ಸಹೋದರಿಯರು ಬಾಲ್ಯದಲ್ಲಿಯೆ ವೈಧವ್ಯದೀಕ್ಷೆಯನ್ನು ಪಡೆಯುವುದು; ಗುಪ್ತರೀತಿಯಿಂದ ಗರ್ಭಪಾತಾದಿ ದುಷ್ಕರ್ಮಗಳನ್ನು ಮಾಡುತ್ತಿರುವುದು ಅಥವಾ ಸಾಮಾಜಿಕ ನಿರ್ಬಂಧಗಳನ್ನು ತಡೆಯದೆ ಕ್ರೈಸ್ತ ಅಥವಾ ಮುಸಲ್ಮಾನಾದಿ ಅನ್ಯಧರ್ಮಗಳನ್ನು ಸೇರುತ್ತಿರುವುದು ಹಿಂದೂಧರ್ಮದ ಮಹತ್ವವೇ? ಲಕ್ಷಗಟ್ಟಲೆ ವಿಧವೆಯರನ್ನು ವೇಶ್ಯಾವೃತ್ತಿಗೂ ದೂಡುವಂತಹ ಅಮಂಗಲ ಕೃತ್ಯವನ್ನೂ, ವಿಧವೆಯರ ದುಃಖವನ್ನೂ ನಿವಾರಿಸಲಿಕ್ಕೆ ನಾವು ಎಂದಿನ ವರೆಗೆ ಪ್ರಯತ್ನಿಸುವುದಿಲ್ಲವೋ ಅಂದಿನವರೆಗೆ ನಮ್ಮ ಶಾಸ್ತ್ರಗಳಿಂದ ನಮಗೇನೂ ಪ್ರಯೋಜನವಿಲ್ಲ. ಶಾಸ್ತ್ರಗಳನ್ನೇ ಹೊಂದಿಕೊಂಡಿರುವ ಮಹಾನುಭಾವರಿಗೆ ಬೇಕಾಗಿ ಅನೇಕ ಶಾಸ್ತ್ರಗಳ ಪ್ರಮಾಣಗಳನ್ನು ನನ್ನ ಅಲ್ಪವಿಚಾರಕ್ಕೆ ತೋರಿದ ಮಟ್ಟಿಗೆ ಕ್ರೋಢೀಕರಿಸಿ ಈ ಪುಸ್ತಕದಲ್ಲಿ ವಿವರಿಸಿರುವೆನು.

ಈಗ, ಹಿಂದೂಸಮಾಜದಲ್ಲಿರುವ ವಿಧವೆಯರೆಲ್ಲಾ ನಿರುಪಯೋಗವಾದ ಒಂದು ವಸ್ತುವಿನಂತಿದ್ದಾರೆ. ಇಡೀ ಸಮಾಜಕ್ಕೆ ಇವರು ಒಂದು ವಿಧದ ಕಂಠಕಸ್ವರೂಪರಾಗಿದ್ದಾರೆಂಬ ಭಾವನೆಯೇ ನಮ್ಮ ಸಮಾಜದಲ್ಲಿ ಬಲವಾಗಿ ಬೇರೂರಿ ಹೋಗಿದೆ. ಇದರಿಂದಲೇ ಇವರ ಜೀವನವು ಅತ್ಯಂತ ದುಃಖದಾಯಕವಾಗಿದೆ. ಜಗತ್ತಿನ ಎಲ್ಲಾ ದೇಶಗಳಲ್ಲಿಯೂ ವಿಧವೆಯರು ಇದ್ದಾರೆಂಬುದನ್ನು ನಾನು ಈ ಪುಸ್ತಕದ ಪ್ರಾರಂಭದಲ್ಲಿಯೇ ವಿವರಿಸಿರುವೆನು. ಪರಂತು ನಮ್ಮ ದೇಶದ ವಿಧವೆಯರಷ್ಟು ದುಃಖಿತರಾದವರು ಬೇರೆಲ್ಲಿಯೂ ಇಲ್ಲ.

ಹೇಗೆಂದರೆ,—ಪತಿವಿಯೋಗದ ದುಃಖವೊಂದು, ಈಶ್ವರೀಯವಾದ ಪ್ರಾಕೃತಿಕ ನಿಯಮದಂತೆ ಮಾನಸಿಕ ಇಚ್ಛೆಯ ಸಂತಾಪವು ಇನ್ನೊಂದು— ವಿದ್ಯಾವಿಹೀನತೆಯ ವ್ಯಥೆ ಮತ್ತೊಂದು! ಸಾಲದುದಕ್ಕೆ ಅತ್ತೆಮಾವಂದಿರ ತರತರದ ಪೀಡೆ, ಸಮಾಜದ ಸಮಾನಹೀನತೆ ಇತ್ಯಾದಿ ದುಃಖಗಳೆಲ್ಲವೂ ಇವರ ಹೃದಯವನ್ನು ಅನುದಿನವೂ ಭೇದಿಸುತ್ತಿವೆ. ಇತರ ದೇಶಗಳಲ್ಲಿಯಾದರೋ— ಅವರಿಗೆ ಬೇಕಾದ ಶಿಕ್ಷಣಗಳನ್ನು ಕೊಟ್ಟು ಅವರನ್ನು ಸ್ವಾವಲಂಬಿಗಳಾಗಿ ಮಾಡುವು ದಲ್ಲದೆ ಅವರಿಗೆ ವಿವಾಹಸ್ವಾತಂತ್ರ್ಯವನ್ನೂ ಕೊಡುತ್ತಾರೆ. ಈ ಪದ್ಧತಿಯು ನಮ್ಮಲ್ಲಿ ಇಲ್ಲವೇ ಇಲ್ಲ!!

ವಿಧವಾ ವಿವಾಹದಲ್ಲಿ ಎಳ್ಳಷ್ಟೂ ಮನಸ್ಸಿಲ್ಲದ ಮಹಾನುಭಾವ ರಾರಾದರೂ ನಮ್ಮಲ್ಲಿ (ಹಿಂದೂಸಮಾಜದಲ್ಲಿ!) ಪ್ರಕೃತ ಇರುವು ದಾದರೆ ಅಂತಹವರ ಮನೆಯಲ್ಲಿ ಒಂದುವೇಳೆ ವಿಧವೆಯರಿದ್ದರೆ— ಅವರ ಜೀವನವನ್ನಾದರೂ ಸುಖಮಯವಾಗಿ ನಡೆಯುವ ವ್ಯವಸ್ಥೆ ಯನ್ನು ಮಾಡಿದರೆ ಅವರ ದುಃಖದ ಕೆಲವಂಶವಾದರೂ ನಿವಾರಣೆ ಯಾಗಬಹುದು. ಮನೆಯಲ್ಲಿಟ್ಟುಕೊಂಡು ಹೀಗೆ ಮಾಡಲು ಅನು ಕೂಲವಿಲ್ಲದವರು ವಿಧವೆಯರನ್ನು ಉತ್ತಮವಾದ ವಿಧವಾಶ್ರಮಕ್ಕೆ ಕಳುಹಿಸಿಕೊಟ್ಟು ಅಲ್ಲಿ ಅವರಿಗೆ ಉತ್ತಮರೀತಿಯಲ್ಲಿ ಧಾರ್ಮಿಕ, ಸಾಮಾಜಿಕ ಮುಂತಾದ ಶಿಕ್ಷಣಗಳನ್ನು ಕೊಡಬೇಕು. ವಿಧವೆಯ ರೊಡನೆ ಆಕೆಯ ಮಾತಾಪಿತೃಗಳೂ, ಅತ್ತೆ, ಮಾವ, ಅಣ್ಣ, ತಮ್ಮ ಮುಂತಾದ ಬಂಧುಗಳೂ ಮಮತೆಯಿಂದ ವರ್ತಿಸಿದರೆ ಆಕೆಯ ಮನಸ್ಸಿಗೆ ತನ್ನಲ್ಲಿದ್ದ ಸಹಾಯಶೂನ್ಯತೆಯು ಸ್ಮರಣೆಗೆ ಬರಲಿಕ್ಕಿಲ್ಲ! ಈ ರೀತಿ ಮಾಡಿದರೆ ಸೇಕಡಾ 75 ಮಂದಿ ವಿಧವೆಯರು ತಮ್ಮ ಜೀವನವನ್ನು ಸುಖವಾಗಿಯೂ ಪವಿತ್ರವಾಗಿಯೂ ಕಳೆಯುವ ರೆಂಬುದರಲ್ಲಿ ಸಂದೇಹವಿಲ್ಲ. ಹೀಗೆ ಮಾಡುವುದರಿಂದ ಧರ್ಮವು ಹಾಳಾಗುವುದೆಂದು ತಿಳಿದು ಯೌವನ ಪ್ರಾಯಸ್ಥರಾದ ವಿಧವೆಯ

ರನ್ನು ಯಾವುದೊಂದೂ ಶಿಕ್ಷಣ ಕೊಡದೆ ಮನೆಯಲ್ಲೆ ಇಟ್ಟುಕೊಳ್ಳು ವುದರಿಂದಲಾಗಲೀ, ಪುರಾಣಕಥಾಶ್ರವಣಕ್ಕೆಂದು ಅಥವಾ ಗುರೂಪ ದೇಶಕ್ಕೆಂದು ಈಗಿನ ಕೆಲವು ಪುರೋಹಿತರ ಅಥವಾ ಸಾಧುಸಂತರೆಂದು ಹೇಳಿಸಿಕೊಳ್ಳುವವರ ವಶಕ್ಕಾಗಲಿ ಬಿಟ್ಟುಬಿಡುವುದರಿಂದ ಅವರ ಸತೀತ್ವವು ಉಳಿಯಲಾರದು. ಇದಕ್ಕೆ ಬೇಕಾದ ದೃಷ್ಟಾಂತಗಳು ಅನುದಿನವೂ ನಮ್ಮ ಸಮಾಜದಲ್ಲಿ ನಡೆಯುತ್ತಲೇ ಇವೆ. ಆದುದರಿಂದ ಈಗಿನ ಕೆಲವು ವಿಷಯವಾಸನಾಲೋಲುಪ್ತರಾದ ಕೆಲವು ಕಪಟ ಸನ್ಯಾಸಿಗಳ ಬಲೆಗೆ ವಿಧವೆಯರಾಗಲಿ ಇತರ ಸ್ತ್ರೀಯಾಗಲಿ ಬೀಳದಂತೆ ಹಿಂದೂಸಮಾಜದ ಪ್ರತಿಯೊಬ್ಬರೂ ಚೆನ್ನಾಗಿ ಜಾಗೃತರಾಗಿರತಕ್ಕದ್ದು.

ಇತ್ತೀಚೆಗೆ ಹಿಂದೂಸಮಾಜವು ರಾಜನೀತಿ, ಆಚಾರವಿಚಾರ, ವೈಜ್ಞಾನಿಕ ಸಾಹಿತ್ಯ ಮುಂತಾದ ವಿಷಯಗಳಲ್ಲಿ ಬಹಳ ಜಾಗೃತಾ ವಸ್ಥೆಗೆ ಬಂದಿರುತ್ತದೆ. ತರತರದ ಅನಾಹುತಗಳಿಂದ ಮುದುಡಿ ಹೋಗಿದ್ದ ಹಿಂದೂಗಳ ಹೃದಯಕಮಲಗಳು ಈಗೀಗ ಪ್ರಫುಲ್ಲಿತ ವಾಗುತ್ತಾ ಬರುತ್ತಿವೆ. "ಚೈತ್ರ ವೈಶಾಖದ ನವಪಲ್ಲಿತ ವೃಕ್ಷ"ದಂತೆ ಹಿಂದೂಸಮಾಜವು ತನ್ನ ನಿರ್ಜೀವ ಅಂಗವನ್ನು ಬಿಟ್ಟು ಪುನರ್ಜೀವನ ಹೊಂದುತ್ತಿದೆ. ಈ ಪರಿಸ್ಥಿತಿಯಲ್ಲಿ ಹಿಂದೂಧರ್ಮಾಭಿಮಾನಿಗಳಾದ ಪ್ರತಿಯೊಬ್ಬರೂ ತಮ್ಮಲ್ಲಿರುವ ಎಲ್ಲಾ ಭೇದಭಾವನೆಗಳನ್ನು ನಾಶ ಮಾಡಿ ನಿರ್ಭಾಗಿನಿಯರಾದ ವಿಧವೆಯರ ಉದ್ಧಾರಕ್ಕಾಗಿ ಒಮ್ಮನಸ್ಸಿ ನಿಂದ ಕಾರ್ಯವನ್ನು ಕೈಕೊಳ್ಳಬೇಕು. ಇಂತಹ ಸಮಾಜಸೇವೆ ಯಿಂದಲೇ ನಮ್ಮ ಜೀವನವು ಜಗತ್ತಿನ ಮುಂದೆ ಆದರ್ಶಮಯವಾಗಿ ನಿಲ್ಲುವುದು!



## ೯. ಪುನರ್ವಿವಾಹವು ಶಾಸ್ತ್ರಾನುಕೂಲವೋ?

ಶಿಕ್ಷಿತ ದೇಶಗಳ ಸ್ತ್ರೀಯರಲ್ಲಿ ಬಹು ವಿವಾಹಗಳ ಪದ್ಧತಿಯು ಕಂಡುಬರುವುದಿಲ್ಲ. ಆದರೆ ವರ್ತಮಾನಕಾಲದಲ್ಲಿ ಇಂತಹ ಉಚ್ಚಾದರ್ಶತೆಯು ಕೂಡಾ ದೊರೆಯುವುದಿಲ್ಲ. ಕೆಲವು ಕಡೆಗಳಲ್ಲಿ ಸ್ತ್ರೀಯು ತವರುಮನೆಯಲ್ಲಿದ್ದು ಪತಿಯೇ ಪದೇ ಪದೇ ಅವಳಲ್ಲಿ ಬಂದು ಹೋಗುವ ಪದ್ಧತಿಯಿದೆ. ಇನ್ನೊಂದು ಸಂಪ್ರದಾಯವು ಯಾವುದೆಂದರೆ ಹೇರಳ ಹಣವನ್ನು ಕೊಟ್ಟು ಸ್ತ್ರೀಯನ್ನು ಪಡಕೊಳ್ಳುವುದು. ಇಂತಹವಳು ಬಹು ಪತಿಗಳ ಪತ್ನಿಯಾಗಿರುವಳು. ಈ ಪದ್ಧತಿಯು ಭಾರತವರ್ಷದಲ್ಲಿ ಇತ್ತೀಚಿಗೆ ಕಡಿಮೆಯಾಗುತ್ತಾ ಬರುತ್ತಿದೆ. ಈ ಎರಡು ವಿಧದ ಬಹುವಿವಾಹಗಳಲ್ಲಿಯೂ ಸ್ತ್ರೀಯರೇ ಹೆಚ್ಚಾಗಿ ದುಃಖಿಗಳಾಗಿರುತ್ತಾರೆ. ಬಂಗಾಲದ ಅನೇಕ ಜಾತಿಯ ಜನರಲ್ಲಿ ಒಬ್ಬಾಕೆಯು ಅನೇಕ ಪುರುಷರ ಪತ್ನಿಯಾಗಿರುವ ಪದ್ದತಿಯಿದೆ. ಒಬ್ಬಳು ವಿವಾಹಿತಳಾಗಿ ಬಂದ ಕೂಡಲೆ ಆಕೆಯು ತನ್ನ ಗಂಡನ ತಮ್ಮಂದಿರಿಗೂ ಪತ್ನಿಯಾಗಿರುವಂತಹ ಪದ್ಧತಿಯು ನೀಲಗಿರಿಯಲ್ಲಿರುವ "ಟೋಡಾ" ಎಂಬ ಜಾತಿಯಲ್ಲಿದೆ. ಈ ವಿಧಿಯು ಲಂಕೆಯಲ್ಲಿ ಈಗಲೂ ಕೆಲವು ಕಡೆಗಳಲ್ಲಿದೆ. ಟಿಬೇಟಿನ ಸ್ತ್ರೀಯರು ಅನೇಕ ಪತಿಯರ ಅಧೀನವಿರುತ್ತಾರೆ. ಮಲಬಾರಿನಲ್ಲಿ ನಾಯರ್ ಜಾತಿಯವರಲ್ಲಿಯೂ ಸ್ತ್ರೀಯರಿಗೆ ಬಹುವಿವಾಹಗಳು ಆಗುತ್ತಲೇ ಇವೆ. (ಈ ಕುರಿತು "Evolution of Marriage" ಎಂಬ ಪುಸ್ತಕದ 77ರಿಂದ 80ನೆ ಪುಟದ ವರೆಗೆ ಸವಿಸ್ತಾರವಾಗಿ ಬರೆಯಲ್ಪಟ್ಟಿರುವುದು.)

ಈ ಮೊದಲಿನ ಅಧ್ಯಾಯದಲ್ಲಿ ಪುರುಷರ ಬಹುವಿವಾಹದ ನಿಯಮಗಳನ್ನು ಯಾವ ಪ್ರಕಾರ ವಿವರಿಸಿರುವೆವೋ ಅದೇ ನಿಯಮವು ಸ್ತ್ರೀಯರ ಮೇಲೆಯೂ ಹೊಂದುತ್ತದೆ. ಪುರುಷರಂತೆ ಸ್ತ್ರೀಯರೂ ಬಹುವಿವಾಹದಿಂದ ಶರೀರದಲ್ಲಿ ನಿರ್ಬಲೆಯರಾಗುತ್ತಾರೆ. ಪುರುಷನು

ಪತ್ನಿಯ ಮರಣಾನಂತರ ಪುನರ್ವಿವಾಹವನ್ನು ಮಾಡಿಕೊಳ್ಳುವಂತೆ ಸ್ತ್ರೀಯೂ ಪತಿ ಸತ್ತ ನಂತರ ಪುನರ್ಲಗ್ನ ಮಾಡಿಕೊಳ್ಳುವುದು ಧರ್ಮಾನುಕೂಲವಾಗಿರುವುದು. ಈ ಮೊದಲು ನಾವು ವಿವರಿಸಿದ ಪ್ರಕಾರ ಸ್ತ್ರೀಪುರುಷರಿಗೆ ಸಮಾಜದಲ್ಲಿ ಸಮಾನಾಧಿಕಾರವಿರುವುದ ರಿಂದ ವಿವಾಹದಲ್ಲಿ ಸಹ ಆಕೆಗೆ ಯುಕ್ತವಾದ ಅಧಿಕಾರವಿರುವುದು ಅತ್ಯಗತ್ಯ. ಇದರಿಂದ ಸ್ತ್ರೀಯರನ್ನು ವಂಚಿಸಿಡುವುದು ದೊಡ್ಡ ಪಾಪ. ಸ್ತ್ರೀಯರ ಪುನರ್ವಿವಾಹದ ಕುರಿತು ಪ್ರಾಮುಖ್ಯವಾದ ಕೆಲವು ವಿಚಾರಗಳನ್ನು ವಾಚಕರ ಮುಂದಿಡುತ್ತೇವೆ.

೧. ಒಬ್ಬ ಕನ್ಯೆಯ ಸಂಬಂಧವು ಒಬ್ಬ ವರನೊಡನೆ ನಿಶ್ಚಯ ವಾಗಿದ್ದು ವಿವಾಹವಾಗುವ ಮೊದಲೇ ಆತನು ಮೃತಪಟ್ಟರೆ ಆಕೆಯು ಆತನ ಪತ್ನಿಯೇ ಆಗಿರುವಳು. ಅವಳು ಆತನ ಸ್ಮೃತಿರೂಪೀ ಮೂರ್ತಿಯ ಸೇವೆಯನ್ನು ಮಾಡುತ್ತಿರಬೇಕಲ್ಲದೆ ಇನ್ನೊಬ್ಬ ಪತಿ ಯನ್ನು ಮನಸ್ಸಿನಲ್ಲಿ ಕೂಡ ಇಚ್ಛಿಸಬಾರದು. ಏತಕ್ಕೆಂದರೆ ಆಕೆಯನ್ನು ಒಮ್ಮೆ ಒಬ್ಬನಿಗೆ ಕೊಡುವುದೆಂದು ವಾಗ್ದಾನವಿತ್ತ ಮೇಲೆ ಅವನು ಸತ್ತ ಮೇಲೆ ಆ ವಚನವನ್ನು ಮೀರಬಾರದು. ಮೀರುವುದ ರಿಂದ ಮೃತಪತಿಯ ಆತ್ಮಕ್ಕೆ ಶಾಂತಿಯುಂಟಾಗಲಿಕ್ಕಿಲ್ಲ.

೨. ಸಂಸ್ಕಾರವಾಗುವ ಮೊದಲೇ ಪತಿ ಮೃತನಾದರೆ ವಧು ವಿಗೆ ಎರಡನೆಯ ವಿವಾಹ ಮಾಡಿಕೊಡಬೇಕು. ಏಕೆಂದರೆ ಎಂದಿನ ವರೆಗೆ ಪಾಣಿಗ್ರಹಣ, ಸಪ್ತಪದಿ ಇತ್ಯಾದಿ ಪ್ರಾಮುಖ್ಯ ವಿಧಿಗಳಿಂದ ಸಂಸ್ಕಾರವು ಪೂರ್ತಿಯಾಗುವುದಿಲ್ಲವೋ ಅಂದಿನ ವರೆಗೆ ಅದು ವಿವಾಹ ವೆನಿಸಲಾರದು. ಪರಂತು ಸಂಸ್ಕಾರವು ಪೂರ್ಣವಾಗಿದ್ದು ವಧುವು ಅಕ್ಷತಯೋನಿಯಾಗಿರುತ್ತಾ ಪತಿಯು ಸತ್ತರೆ ಆಕೆಗೆ ಪುನರ್ವಿವಾಹ ಮಾಡಕೂಡದು. ಈ ವಿಚಾರಗಳು ಪ್ರಚಲಿತಕಾಲದ ಹಿಂದೂಗಳಲ್ಲಿ ಸನಾತನಧರ್ಮಿಗಳೆಂದು ಹೇಳಿಸಿಕೊಳ್ಳುವ ಸಂಪ್ರದಾಯವಾದಿಗಳಲ್ಲಿ ತುಂಬಿಹೋಗಿವೆ.

೩. ವಧುವು ಅಕ್ಷತಯೋನಿಯಾಗಿದ್ದು ಕನ್ಯಾದಾನವು ನಿಶ್ಚಯವಾಗಿದ್ದು ಅಥವಾ ವಿವಾಹಸಂಸ್ಕಾರವು ಆಗಿಹೋದ ನಂತರ ಪತಿಯು ಮೃತನಾದರೆ, ಆಕೆಗೆ ಪುನರ್ವಿವಾಹವಾಗತಕ್ಕದ್ದು. ಇದು ಪ್ರಚಲಿತಕಾಲದ ಆರ್ಯಸಮಾಜದವರ ಅಭಿಪ್ರಾಯವಾಗಿರುತ್ತದೆ. ಈ ಸಮಾಜದ ಎಲ್ಲಾ ಸಿದ್ಧಾಂತಗಳನ್ನು ಒಪ್ಪದೆ ಬರೇ ಬಾಲ್ಯವಿವಾಹದ ನಿಷೇಧವನ್ನು ಮಾತ್ರ ಒಪ್ಪುವ ಕೆಲವು ಸಮಾಜಸುಧಾರಕರೂ ಇದೇ ಅಭಿಪ್ರಾಯವನ್ನು ಸಮರ್ಥಿಸುತ್ತಾರೆ.

೪. ಶೂದ್ರರಲ್ಲಿ ಕ್ಷತಯೋನಿವಿಧವೆಯರಿಗೂ ಪುನರ್ವಿವಾಹವಾಗಬೇಕು. ಪರಂತು ದ್ವಿಜರಲ್ಲಿ ಅಕ್ಷತಯೋನಿಯರಿಗೆ ಮಾತ್ರ ದ್ವಿತೀಯವಿವಾಹವಾಗತಕ್ಕದ್ದು. ಒಂದು ವೇಳೆ ಕ್ಷತಯೋನಿವಿಧವೆಯಾಗಿದ್ದು ಮತ್ತು ಅವಳಿಗೆ ಸಂತಾನದ ಅವಶ್ಯಕತೆ ಯಾ ಇತರ ಆಪತ್ತುಗಳ ನಿವಾರಣೆಯಾಗಬೇಕೆಂದಿದ್ದರೆ ಆಪದ್ಧರ್ಮವಿಧಿಯಿಂದ ನಿಯೋಗಮಾಡಿಕೊಳ್ಳಬಹುದು. ಇದು ಆರ್ಯಸಮಾಜದ ಸಂಸ್ಥಾಪಕರಾದ ಯೋಗಿವರ್ಯ ಶ್ರೀಮದ್ದಯಾನಂದ ಸರಸ್ವತಿಯವರ ಅಭಿಪ್ರಾಯ. ಸಿದ್ಧಾಂತರೂಪದಲ್ಲಿ ಆರ್ಯಸಮಾಜದವರೆಲ್ಲರೂ ಇದನ್ನು ಒಪ್ಪುತ್ತಾರೆ. ಪರಂತು ವರ್ತಮಾನಕಾಲದ ಪರಿಸ್ಥಿತಿಯಲ್ಲಿ ಇದು ಬಹಳ ಪ್ರತಿಕೂಲವಾಗಿರುವ ಕಾರಣ ಇದನ್ನು ಕ್ರಿಯಾತ್ಮಕರೂಪದಲ್ಲಿ ತಂದಿಲ್ಲ.

೫. ವಿಧವೆಯು ಕ್ಷತಯೋನಿ ಅಥವಾ ಅಕ್ಷತಯೋನಿಯಾಗಿದ್ದರೂ ಅವಳಿಗೆ ಇಚ್ಛೆ ಇದ್ದಲ್ಲಿ ಪುರುಷರಂತೆ ಅವಳಿಗೆ ಪುನರ್ವಿವಾಹ ಮಾಡಬೇಕು. ಇದು ಇತ್ತೀಚೆಗೆ ಹಿಂದೂಸಮಾಜದಲ್ಲಿ ಸಮಾಜಸುಧಾರಣಾಕ್ರಾಂತಿಯನ್ನು ಬಹಳ ರಭಸದಿಂದ ಪ್ರಚಾರಮಾಡುವವರ ಅಭಿಮತವಾಗಿರುತ್ತದೆ.

೬. ಪ್ರಚಲಿತಕಾಲದ ಸ್ಥಿತಿಯಲ್ಲಿ ನಿಯೋಗ ಪದ್ಧತಿಯನ್ನು ಕ್ರಿಯಾತ್ಮಕ ರೂಪದಲ್ಲಿ ತರುವುದು ಅಸಾಧ್ಯವಾಗಿರುವುದರಿಂದ

ನವಯುವತಿಯರೂ, ಸಂತಾನಹೀನರೂ ಆಗಿದ್ದು ವೈಧವ್ಯದೀಕ್ಷೆಯನ್ನು ಕೈಕೊಂಡ ಕನ್ಯೆಯರಿಗೆ ಅವರ ಇಚ್ಛೆಯಂತೆ ಪುನರ್ವಿವಾಹವನ್ನು ಮಾಡತಕ್ಕದ್ದು. "ವಿಧವಾವಿವಾಹ ವಿಮಾಂಸ" ಎಂಬ ಪ್ರಸಿದ್ಧ ಪುಸ್ತಕದ ಲೇಖಕರಾದ ಶ್ರೀಮಾನ್ ಪಂಡಿತ ಗಂಗಾಪ್ರಸಾದ ಉಪಾಧ್ಯಾಯ, ಎಂ. ಏ. ಎಂಬವರೂ ಕೂಡಾ ಇದೇ ಅಭಿಪ್ರಾಯ ಪಡುತ್ತಾರೆ. ಕ್ಷತಯೋನಿವಿಧವೆಯ ಪುನರ್ವಿವಾಹವು ಶಾಸ್ತ್ರೋಕ್ತ ವಿಧಿಗೆ ಸ್ವಲ್ಪ ದೂರವಾಗಿರುವುದು ಎಂಬುದರಲ್ಲಿ ಅನುಮಾನವಿಲ್ಲ; ಆದರೆ ಹಿಂದೂಸಮಾಜವು ಪುರುಷರಿಗೆ ಒಬ್ಬ ಪತ್ನಿಯು ಜೀವಿತದಲ್ಲಿರುವಾಗಲೇ ಇನ್ನೊಬ್ಬಳನ್ನು ವರಿಸುವ ಅಂದರೆ ಬಹುವಿವಾಹವನ್ನು ಮಾಡಿಕೊಳ್ಳುವ ಮತ್ತು ಸ್ತ್ರೀಯರ ಬಾಲ್ಯವಿವಾಹ ಪದ್ಧತಿಯನ್ನೂ ಕನ್ಯೆಯರ ಇಚ್ಛೆಗೆ ಪ್ರತಿಕೂಲವಾಗಿ ಮಾತಾಪಿತೃಗಳ ನಿರ್ಬಂಧದಿಂದಾಗುವ ವಿವಾಹವನ್ನೂ ಸಮರ್ಥಿಸುತ್ತಿರುವಲ್ಲಿ ಬಾಲ್ಯಾವಸ್ಥೆಯಲ್ಲಿರುವ ಕ್ಷತ ಅಥವಾ ಅಕ್ಷತಯೋನಿ ವಿಧವೆಯರ ಪುನರ್ವಿವಾಹವನ್ನು ತಡೆಗಟ್ಟುವುದು ನ್ಯಾಯವೆ? ಸ್ತ್ರೀಯರ ಮೇಲೆ ಈ ತರದ ಪಕ್ಷಪಾತವೂ ಪುರುಷರಿಗೆ ಮಾತ್ರ ಬಹು ವಿಧದ ಸ್ವೇಚ್ಛಾಧಿಕಾರವೂ ಯಾವ ಶಾಸ್ತ್ರದಲ್ಲಿ ನಿಯಮಿಸಿರುವುದು? ಮಂಗಲಮಯನಾದ ಭಗವಂತನು ಮಾನವಸಮಾಜವನ್ನೂ, ಅದರಲ್ಲೂ ಸ್ತ್ರೀಪುರುಷರನ್ನೂ ಪಕ್ಷಪಾತದೃಷ್ಟಿಯಿಂದ ನಿರ್ಮಿಸಿದ್ದಾನೋ? ಸಮಾಜದಲ್ಲಿ ಸ್ತ್ರೀಪುರುಷರಿಗೆ ಸಮಾನಾಧಿಕಾರವು ಇಲ್ಲವೋ? ಈ ಬಗ್ಗೆ ಶಾಸ್ತ್ರೋಕ್ತವಾದ ಪ್ರಮಾಣವು ಸ್ವಾರ್ಥಾಂಧತೆಯಲ್ಲಿ ಮುಳುಗಿಹೋಗಿರುವ ಪ್ರಚಲಿತ ಕಾಲದ ಪುರುಷಸಮಾಜದಲ್ಲಿದೆಯೇ?

ಸಾಧಾರಣ ತರದ ವಿಧವೆಯರನ್ನು ಬಿಟ್ಟು ಅಕ್ಷತಯೋನಿ ವಿತಂತುಗಳ ಕುರಿತು ಯೋಚಿಸಿದರೂ ಕೂಡಾ ಅವರ ಪುನರ್ವಿವಾಹವು ಶಾಸ್ತ್ರ ಮತ್ತು ನೀತಿಗೆ ಎಂದಿಗೂ ವಿರುದ್ಧವೆಂದೆಣಿಸಲ್ಪಡಲಿಕ್ಕಿಲ್ಲ. ಅಕ್ಷತಯೋನಿವಿಧವೆಯರು ಅವಿವಾಹಿತ ಸ್ತ್ರೀಯರಂತೆಯೇ ಇರುವರು. ಕಾರಣವೇನೆಂದರೆ ಪುರುಷಸಂಸರ್ಗವೇ ವಿವಾಹದ ಮುಖ್ಯ ಅಂಗ

ವಾಗಿರುತ್ತದೆ. ವಿವಾಹಸಂಸ್ಕಾರವಾಗಿ ಪುರುಷಸಂಸರ್ಗವಾಗದೆ ಇರುವುದೆಂದರೆ ಮನೆಕಟ್ಟುವ ಎಲ್ಲಾ ಸಾಮಗ್ರಿಗಳನ್ನು ಸಂಗ್ರಹಿಸಿ ಕಟ್ಟುವ ಕೆಲಸವನ್ನು ಕಂಟ್ರಾಕ್ಟಿಗೆ ಕೊಟ್ಟು ಕಡೆಗೆ ಮನೆಕಟ್ಟದೆ ಸುಮ್ಮನೆ ಕುಳಿತಂತಾಗುವುದು. ಅಂದರೆ ಸಂಸ್ಕಾರಮಾತ್ರದಿಂದ ವಿವಾಹದ ಮುಖ್ಯ ಉದ್ದೇಶವು ಪೂರ್ತಿಯಾಗಲಾರದು. ಪಾಣಿಗ್ರಹಣದ ನಂತರ ವರನು ಮೃತನಾದರೆ ವಿವಾಹದ ಮೂಲೋದ್ದೇಶವು ಪೂರ್ತಿಯಾಗದಿದ್ದಲ್ಲಿ ಸ್ತ್ರೀಯನ್ನು ಜೀವನಾಂತ್ಯದ ವರೆಗೆ ವಿವಾಹದಿಂದ ವಂಚಿತಗೊಳಿಸುವುದು ಘೋರವಾದ ಅನ್ಯಾಯವಾಗಿರುವುದು. ಪ್ರತಿಯೊಂದು ಕಾರ್ಯದಲ್ಲಿಯೂ ಪ್ರಾಮುಖ್ಯ ಮತ್ತು ಗೌಣ ಎಂಬ ಎರಡು ಅಂಗಗಳು ವಿಶೇಷವಾಗಿರುತ್ತವೆ. ಪತಿಪತ್ನಿಯರ ಸಮಾಗಮವು ವಿವಾಹದ ಪ್ರಾಮುಖ್ಯ ಅಂಗವಾಗಿರುತ್ತದೆ. ಅದನ್ನು ನಿಯಮಿತ ರೀತಿಯಲ್ಲಿಡುವುದಕ್ಕೆ ಆಗುವ ವಿವಾಹಸಂಸ್ಕಾರವು ಗೌಣವಾಗಿರುತ್ತವೆ. ಇಂತಹ ಉತ್ತಮವಿಧಿಗಳು ಕೆಟ್ಟುಹೋಗಿ ಸ್ತ್ರೀಪುರುಷರು ತಮ್ಮ ಜೀವನಪಥವನ್ನು ಘೋರವಾದ ನೀಚತರಗತಿಗೆ ಒಯ್ದು ಸಮಾಜವನ್ನು ಅಧಃಪತನಗೊಳಿಸದಂತೆ ಪತಿಸಂಸರ್ಗದಿಂದ ರಹಿತವಾಗಿದ್ದು ಮತ್ತು ಸಂತಾನಹೀನರೂ ಯುವಾವಯಸ್ಕರೂ ಆಗಿರುವ ಅಕ್ಷತಯೋನಿ ವಿಧವೆಯರಿಗೂ ಅವಶ್ಯವಾಗಿಯೂ ಪುನರ್ವಿವಾಹವಾಗತಕ್ಕದ್ದು.



# ೧೦. ವಿಧವಾವಿವಾಹಕ್ಕೆ ವೈದಿಕಪ್ರಮಾಣ.

ಲೌಕಿಕ ಮತ್ತು ಪಾರಮಾರ್ಥಿಕ ಉನ್ನತಿಗಾಗಿ ಮಾನವರಿಗೆ ಒಂದು ವಿಶಿಷ್ಟವಾದ ವ್ಯವಸ್ಥೆಯು ಮಾಡಲ್ಪಟ್ಟಿದೆ. ಇದು ಪದೇಪದೇ ಪರಿವರ್ತಿಸಲ್ಪಡದೆ ಕೆಲವರಿಗೆ ಮಾತ್ರ ಅನ್ವಯಿಸದೆ ಸಾರ್ವತ್ರಿಕ ಅಂದರೆ ಸರ್ವಸಮ್ಮತವಾಗಿರುವಂತೆ ಮಾಡಲ್ಪಟ್ಟಿದೆ. ಅದರ ಯಥಾರ್ಥ ತತ್ವವನ್ನು ತಿಳಿದು ಆದರಂತೆ ವರ್ತಿಸುವವರೇ ಜಗತ್ತಿನಲ್ಲಿದ್ದುಕೊಂಡೇ ಸರ್ವಸುಖಗಳನ್ನು ಪಡೆಯುವರು. ಲೌಕಿಕವಾದ ಸರ್ವ ವ್ಯವಹಾರಗಳನ್ನು ತ್ಯಜಿಸಿ ಸರ್ವ ಸಂಗಪರಿತ್ಯಾಗ ಮಾಡಿ ಯೋಗಾದಿ ತಪಶ್ಚರ್ಯೆಯಿಂದ ಜೀವನ್ಮುಕ್ತರಾಗುವವರು ಕೆಲವೇ ಮಂದಿ. ಮಿಕ್ಕವರೆಲ್ಲರಿಗೂ ಸಹವಾಸ ಜೀವನದ ಅತ್ಯಗತ್ಯವಿದೆ. ಈ ಜೀವನವು ಯಾವ ವಿಧದ ಕುಂದುಕೊರತೆ ಇಲ್ಲದೆ ಸುಗಮತೆಯಿಂದ ನಡಿಯಲಿಕ್ಕಾಗಿ ಒಂದು ವಿಶೇಷ ಸಂಬಂಧದಿಂದ ಬಂಧಿಸಲ್ಪಟ್ಟಿದೆ. ಆ ಸಂಬಂಧವು ಗ್ರಹಸ್ಥಾಶ್ರಮದ ಮೂಲಕ ಪ್ರಾರಂಭವಾಗುತ್ತದೆ. ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮವೇ ಸರ್ವಶ್ರೇಷ್ಟವಾಗಿರುತ್ತದೆ. ಇದು ವಿವಾಹವೆಂಬ ಪವಿತ್ರಸಂಸ್ಕಾರದಿಂದ ಸ್ತ್ರೀಪುರುಷರಲ್ಲಿ ನೆಲೆನಿಂತು ಸಮಾಜದ ಉನ್ನತಿಯಲ್ಲಿ ಸಹಾಯವನ್ನೀಯುತ್ತದೆ. ವಿವಾಹವೆಂಬುದು ಜನಾಂಗದ ಉನ್ನತಿಗೆ ಪ್ರಥಮ ಸೋಪಾನವಾಗಿರುತ್ತದೆಂಬುದನ್ನು ನಾವು ಈ ಗ್ರಂಥದ ಪ್ರಾರಂಭದಲ್ಲಿಯೇ ವಿವರಿಸಿರುವೆವು. ಆದರೆ ವರ್ತಮಾನಕಾಲದ ಜನತೆಯು ಈ ತತ್ವವನ್ನರಿಯದೆ ಸಮಾಜವನ್ನು ಬಹುತರದಿಂದ ಅವನತಿಯ ಕಡೆಗೆ ಕೊಂಡೊಯ್ದಿದೆ. ಪ್ರಾಚೀನಕಾಲದ ಶಾಸ್ತ್ರಕಾರರನೇಕರು ಮಾನವರ ಉನ್ನತಿಯ ಬಗ್ಗೆ ಬಹುವಿಧದ ವ್ಯವಸ್ಥೆಗಳನ್ನು ಧರ್ಮತತ್ವಗಳ ರೂಪದಲ್ಲಿ ಮಾಡಿಟ್ಟಿರುವರು. ಪರಂತು, ಜನರು ಅದನ್ನು ತಿಳಿದುಕೊಳ್ಳಲು ಯತ್ನಿಸುವುದಿಲ್ಲ. ತ್ರಿಕಾಲಾಬಾಧಿತವಾದ ವೈದಿಕ

ಧರ್ಮವು ಮನುಷ್ಯ ಮಾತ್ರರ ಉನ್ನತಿಯ ಮೂಲಾಧಾರವಾಗಿರುತ್ತದೆ. ಇದನ್ನರಿಯದ ಮಾನವನ ಜೀವನವು ಬಹುವಿಧದಲ್ಲಿ ದುಃಖವನ್ನನುಭವಿಸಿ ವ್ಯರ್ಥವಾಗಿ ನಾಶವನ್ನೈದುವುದು. ಮನುಮಹಾರಾಜರು ವೈದಿಕಧರ್ಮದ ಮಹತ್ವವನ್ನು ಒಂದೇ ಸೂತ್ರದಲ್ಲಿ ಘೋಷಿಸಿರುವರು.

ವೇದಃಸ್ಮೃತಿಃಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ ।
ಏತಚ್ಚತುರ್ವಿಧಂ ಪ್ರಾಹುಃ ಸಾಕ್ಷಾದ್ಧರ್ಮಸ್ಯ ಲಕ್ಷಣಂ ॥

ಮನು. ಅ. ೨, ೧೨.

ಅರ್ಥಾತ್—ಧರ್ಮದ ಲಕ್ಷಣಗಳನ್ನು ತಿಳಿಯುವುದಕ್ಕೋಸ್ಕರ ವೇದಗಳನ್ನೂ ಆ ಮೇಲೆ ಸ್ಮೃತಿ ಇತ್ಯಾದಿ ಗ್ರಂಥಗಳನ್ನೂ ನೋಡಬೇಕು. ವೇದಗಳ ಮಹಿಮೆಯು ಜಗತ್ತಿನಲ್ಲಿ ಬಹಳ ಶ್ರೇಷ್ಠಸ್ಥಾನದಲ್ಲಿದೆ. ಸ್ಮೃತಿ, ಶಾಸ್ತ್ರ ಇತ್ಯಾದಿ ಗ್ರಂಥಗಳು ಅದನ್ನು ಅವಲಂಬಿಸಿಕೊಂಡಿರುವುದರಿಂದ ಮಾತ್ರಕ್ಕೆ ಮಾನಿಸಲಿಕ್ಕೆ ಯೋಗ್ಯವು. ವೇದವಿರುದ್ಧವಾದ ಯಾವ ಅಭಿಪ್ರಾಯಗಳೂ ಮಾನವನ ಉನ್ನತಿಗೆ ಸಹಕಾರಿಯಾಗಲಾರವು.

ಅನೇಕರು ತಮ್ಮ ತಮ್ಮ ಸ್ವಾರ್ಥಸಿದ್ಧಿಗೋಸ್ಕರ ಅಲ್ಲಸಲ್ಲದ ಅನೇಕ ಅಭಿಪ್ರಾಯಗಳನ್ನು ಶಾಸ್ತ್ರಗಳ ರೂಪದಲ್ಲಿ ರಚಿಸಿದುದರಿಂದ ಹಿಂದೂಸಮಾಜದ ಅಸ್ತಿತ್ವವು ನಿರ್ಬಲಗೊಳ್ಳುತ್ತಾ ಬಂತು. ಮೇಲೆ ವಿವರಿಸಿದಂತೆ ಗೃಹಸ್ಥಾಶ್ರಮದ ನಿಜತತ್ವವನ್ನು ತಿಳಿಯದೆ ಬಹುಮಂದಿ ತಮ್ಮ ಎಳೆಪ್ರಾಯದ ಕನ್ಯೆಯರನ್ನು ಕೇವಲ ದುಡ್ಡಿನ ಆಶೆಯಿಂದಲೇ ವಿವಾಹಮಾಡಿಕೊಡುತ್ತಾರಲ್ಲದೆ ವರನ ಪ್ರಾಯ, ಯೋಗ್ಯತೆ ಇತ್ಯಾದಿ ಯಾವುದನ್ನೂ ಪರೀಕ್ಷಿಸಿ ತಿಳಿದುಕೊಳ್ಳುವುದಿಲ್ಲ. ಅಪ್ರಾಯಸ್ಥ ಕನ್ಯೆಯರು ಪ್ರಾಯ ತುಂಬಿದವನನ್ನು ವರಿಸಿ, ತಾವು ಪ್ರಾಯಕ್ಕೆಬರುವ ಮೊದಲು ಪತಿಯನ್ನು ಕಳೆದುಕೊಂಡು ವೈಧವ್ಯದ ನರಕಾಗ್ನಿಯಲ್ಲಿ ಬೀಳುತ್ತಾರೆ. ಇಂದಿಗೆ ಇವರಿಗೆ ಸಮಾಜದಲ್ಲಿ ಯಾವ ತರದ ಹಕ್ಕು ಬಾಧ್ಯತೆಗಳೂ ದೊರೆಯುವುದಿಲ್ಲ. ಆದರೆ ವೇದವು ಇವರಿಗೆ ವಿವಾಹದ

ಸ್ವಾತಂತ್ರ್ಯತೆಯನ್ನು ಕೊಟ್ಟಿದೆ. ವಿಧವಾವಿವಾಹಕ್ಕೆ ವೇದಗಳಲ್ಲಿ ದೊರೆಯುವ ಅನೇಕ ಪ್ರಮಾಣಗಳನ್ನು ಕ್ರೋಢೀಕರಿಸಿ ಈ ಅಧ್ಯಾಯ ದಲ್ಲಿ ವಿವರಿಸಿರುವೆವು. ಹೆಜ್ಜೆಹೆಜ್ಜೆಗೆ ಶಾಸ್ತ್ರಪ್ರಮಾಣಗಳನ್ನು ಹುಡುಕು ವವರಿಗೆ ಇದು ಹೆಚ್ಚಿನ ಸಹಕಾರಿಯಾದೀತೆಂದು ಭಾವಿಸುತ್ತೇವೆ.

ಕುಹಸ್ವಿದ್ದೋಷಾ ಕುಹವಸ್ತೋರಶ್ವಿನಾ ಕುಹಾಭಿಪಿತ್ವಂ
ಕರತಃ ಕುಹೋಷತುಃ ।
ಕೋ ವಾಂ ಶಯುತ್ರಾ ವಿಧವೇವ ದೇವಂಮರ್ಯಂನ
ಯೋಷಾ ಕೃಣುತೇ ಸಧಸ್ಥಆ ॥
ಋ. ಮಂ. ೧೦. ಸೂ. ೪೦. ಮಂ ೨

ಮಂತ್ರಾರ್ಥ—(ಕುಹಸ್ವಿದ) ಎಲ್ಲಿ (ದೋಷಾ) ರಾತ್ರಿಯಲ್ಲಿ (ಕುಹ) ಎಲ್ಲಿ (ವಸ್ತೋಃ) ಹಗಲಲ್ಲಿ (ಅಶ್ವಿನಾ) ಎಲೈ ಸ್ತ್ರೀಪುರುಷರೇ (ಕುಹ) ಎಲ್ಲಿ (ಅಭಿಪಿತ್ವಂ) ಜೀವನನಿರ್ವಾಹವನ್ನು (ಕರತಃ) ಮಾಡು ತ್ತೀರಿ? (ಕುಹ) ಎಲ್ಲಿ (ಉಷತುಃ) ವಾಸಿಸುತ್ತೀರಿ? (ಕಃ) ಯಾರು (ವಾಂ) ನಿಮ್ಮಿಬ್ಬರನ್ನು (ಶಯುತ್ರಾ) ಮಲಗುವ ಸಾಮುಗ್ರಿಗಳಿಂದ ಯುಕ್ತರನ್ನಾಗಿ ಮಾಡುತ್ತಾರೆ? (ವಿಧವಾ) ವಿಧವೆ ಸ್ತ್ರೀ (ದೇವರಂ) ಎರಡನೆ ಪತಿಯನ್ನು ಮತ್ತು (ಯೋಷಾ) ಸ್ತ್ರೀಯು (ಮರ್ಯಂ) ಪತಿಯನ್ನು (ಇವ) ಹೇಗೆ.

ಈ ಮಂತ್ರದಲ್ಲಿ ವಿಧವೆಗೆ ಅನ್ಯಪತಿಯನ್ನು ಸ್ವೀಕರಿಸುವ ವಿಧಿಯು ಸ್ಪಷ್ಟವಾಗಿ ವಿವರಿಸಲ್ಪಟ್ಟಿದೆ. ವೇದಭಾಷ್ಯಕಾರರಲ್ಲಿ ಪ್ರಸಿದ್ಧ ಆಚಾರ್ಯರಾದ ಶ್ರೀ ಸಾಯಣಾಚಾರ್ಯರು ಈ ಮಂತ್ರಕ್ಕೆ ಯಾವ ಅರ್ಥ ಮಾಡಿರುತ್ತಾರೆಂಬುದನ್ನು ನೋಡಿರಿ—

## ಸಾಯಣ ಭಾಷ್ಯ.

"ಹೇ! (ಅಶ್ವಿನಾ) ಅಶ್ವಿನೌ (ಕುಹಸ್ವಿತ್) ಕ್ವಸ್ವಿತ್ (ದೋಷಾ) ರಾತ್ರೌಭವಥಃ ಇತಿ ಶೇಷಃ (ಕುಹಃ) ವಸ್ತೋಃ ಕ್ವವಾದಿವಾಭವಥಃ (ಕುಹ) ಕ್ವ ವಾ ಉಷತು ಊಷಥುಃ ವಸಥಃ ಕಿಂ ಚ (ವಾಮ್)

ಯುವಾಶಮ್ (ಕ್ವ) ಯಜಮಾನಃ (ಸಧಸ್ಥೇ) ಸಹಸ್ಥಾನೇ ವೇದ್ಯಾಖ್ಯೇ (ಆಕೃಣುತೇ) ಅಕುರುತೇ ಪರಿಚರಣಾರ್ಥಂ ಆತ್ಮಾನಮಭಿಮುಖೀ ಕರೋತಿ । ತತ್ರ ದೃಷ್ಟಾಂತೌ ದರ್ಶಯತಿ ಶಯುತ್ರಾಶಯನೇ (ವಿಧವೇವ) ಯಥಾಮೃತ ಭರ್ತೃಕಾನಾರೀ (ದೇವರಂ) ಭರ್ತೃ ಭ್ರಾತರಂ ಅಭಿಮುಖೀ ಕರೋತಿ (ಮರ್ಯಂ ನ) ಯಥಾಚ ಸರ್ವಂ ಮನುಷ್ಯಂ (ಯೋಷಾ) ಸರ್ವಾನಾರೀ ಸಂಭೋಗ ಕಾಲೇ ಅಭಿಮುಖೀ ಕರೋತಿ ತದ್ವದಿತ್ಯರ್ಥಃ"

ಭಾವಾರ್ಥ—ಎಲೈ ಸ್ತ್ರೀಪುರುಷರೇ! ನೀವಿಬ್ಬರೂ ರಾತ್ರಿಯಲ್ಲಿ ಎಲ್ಲಿ ಇರುತ್ತೀರಿ? ಹಗಲಲ್ಲಿ ಎಲ್ಲಿ ಇರುತ್ತೀರಿ? ಮತ್ತು ಎಲ್ಲಿ ಜೀವನ ಪ್ರಾಪ್ತಿ ಮಾಡಿಕೊಳ್ಳುತ್ತೀರಿ? ನಿಮ್ಮ ಸತ್ಕಾರ್ಯಕ್ಕೆ ಯಜ್ಞವೇದಿ ಯಲ್ಲಿ ಯಾರು ನಿಮ್ಮ ಸನ್ಮುಖರಾಗುತ್ತಾರೆ?

ಇಲ್ಲಿ ಎರಡು ದೃಷ್ಟಾಂತವಿದೆ. ಹೇಗೆಂದರೆ—ಮಲಗುವ ಸ್ಥಾನ ದಲ್ಲಿ ವಿಧವಾ ಸ್ತ್ರೀಯು ಎರಡನೆ ಪತಿಯನ್ನು ಎದುರುಗೊಳ್ಳುತ್ತಾಳೆ. ಯಜ್ಞವೇದಿಯಲ್ಲಿ ಎಲ್ಲಾ ಮನುಷ್ಯರನ್ನು ಎದುರುಗೊಳ್ಳುತ್ತಾಳೆ.

ಪ್ರಶ್ನೆ:—ಸಾಯಣಾಚಾರ್ಯರು "ದೇವರ" ಶಬ್ದಕ್ಕೆ "ಪತಿಯ ತಮ್ಮ" ಎಂದು ವಿವರಿಸಿರುವರು. ನೀವು ಎರಡನೆಯ ಪತಿ ಎಂಬುದಾಗಿ ಮಾಡುತ್ತೀರಿ. ಇದು ಹೊರತು ಸಾಯಣಾಚಾರ್ಯರ ಅರ್ಥದಿಂದ ವಿಧವಾವಿವಾಹದ ಸಮರ್ಥನೆಯಾಗುತ್ತದೆಯೇ?

ಉತ್ತರ—"ದೇವರ" ಎಂದರೆ "ಪತಿಯ ತಮ್ಮ"ನೆಂಬುದಾಗಿ ಅರ್ಥ ಮಾಡುವುದಾದರೂ ಸಾಯಣರ ಅಭಿಪ್ರಾಯದಂತೆ ವಿಧವೆಗೆ ದ್ವಿತೀಯ ಪತಿಯಾಗುವುದು ಸಿದ್ಧವಾಗುತ್ತದೆ. ಸ್ತ್ರೀಯರು ತಮ್ಮ ಪತಿಯನ್ನು ಶಯ್ಯಾಗೃಹಕ್ಕೆ ಕರೆಯುವಂತೆ ವಿಧವೆಯು ಗಂಡನ ತಮ್ಮನನ್ನು ಕರೆಯುತ್ತಾಳೆ. ಸಾಯಣರ ಅರ್ಥದಲ್ಲಿ ಕೆಳಗಿನ ಅಭಿ ಪ್ರಾಯಗಳು ಸ್ಪಷ್ಟವಾಗಿ ಕಂಡುಬರುತ್ತವೆ.

೧. ವಿಧವೆಯು ದೇವರ (ಗಂಡನ ತಮ್ಮ) ನನ್ನು ಕರೆಯುವುದು.

೨. ಮಲಗುವ ಸ್ಥಾನಕ್ಕೆ ಕರೆಯುವುದು.

೩. ಸಂಸರ್ಗಕ್ಕೇ ಕರೆಯುವಂತೆ ಕರೆಯುವುದು.

ಇವೆಲ್ಲಾ ವ್ಯವಹಾರಗಳು ವಿಧವೆಯರಿಗೆ ಪುನರ್ವಿವಾಹವಾದರೇನೇ ನಡಿಯಬಹುದು. ಇನ್ನು ಬರೇ "ದೇವರ" ಶಬ್ದದ ವಿವಾದ ಉಳಿಯಿತು. ಇದರ ನಿಜಾರ್ಥವು ಯಾಸ್ಕಾಚಾರ್ಯರಿಂದ ಬರೆಯಲ್ಪಟ್ಟಿರುವ ನಿರುಕ್ತದಲ್ಲಿ ಸರಿಯಾಗಿ ತಿಳಿದುಬರುತ್ತದೆ. ಸಾಯಣರು ತನ್ನ ವೇದಭಾಷ್ಯದಲ್ಲಿ ಯಾಸ್ಕರ ನಿರುಕ್ತದ ಪ್ರಮಾಣವನ್ನು ಕೊಟ್ಟಿರುತ್ತಾರೆ. ಸಾಯಣಭಾಷ್ಯ ನೋಡಿರಿ:—

ತಥಾ ಚ ಯಾಸ್ಕಃ ಕ್ವಸ್ವಿದ್ರಾತ್ರೌ ಭವಥಃ ಕ್ವದಿವಾ ಕ್ವಾಭಿಪ್ರಾಪ್ತಿಂ ಕುರುಥಃ ಕ್ವ ವಸಥಃ ।
ಕೋವಾ ಶಯನೇ ವಿಧವೇವ ದೇವರಮ್ ।
ದೇವರಃ ಕಸ್ಮಾದ್ ದ್ವಿತೀಯೋ ವರ ಉಚ್ಯತೇ ॥

ವಿಧವಾ ವಿಧಾತೃಕಾ ಭವತಿ । ವಿಧವನಾದ್ವಾ, ವಿಧಾವನಾದ್ವೇತಿ । ಚರ್ಮಶಿರಾ ಅಪಿ ವಾ ಧವ ಇತಿ ಮನುಷ್ಯಸ್ತದ್ವಿಯೋಗಾದ್ವಿಧವಾ । ದೇವರೋ ದೀವ್ಯತಿ ಕರ್ಮಾ । ಮರ್ಯಾ ಮನುಷ್ಯೋ ಮರಣಧರ್ಮಾ । ಯೋಷಾಯೌತೇರಾ ಕುರುತೇ ಸಹಸ್ಥಾನೇ ಇತಿ ನಿರುಕ್ತಃ ॥

ನಿರುಕ್ತದ ಮೂಲಭಿಪ್ರಾಯದಂತೆಯೇ ಸಾಯಣರೂ ಅಭಿಪ್ರಾಯ ಪಡುತ್ತಾರೆ. ಇದು ಹೊರತು ಯಾಸ್ಕರ ಮತವನ್ನು ಸಮರ್ಥಿಸಿರುತ್ತಾರೆ.

ಈ ಕುರಿತು ಪಂಡಿತ ರಾಜಾರಾಮರು ತನ್ನ ನಿರುಕ್ತಭಾಷ್ಯದ ೧೭೧ನೆಯ ಪುಟದಲ್ಲಿ ಒಂದು ಟಿಪ್ಪಣಿ ಕೊಟ್ಟಿರುವರು.

"ಪತಿಗೆ ಸ್ತ್ರೀ (ಪತ್ನಿ) ಹೇಗೋ ಹಾಗೆಯೇ "ದೇವರ"ಗೆ ವಿಧವೆ. ಇಲ್ಲಿ ಸಹ ರಾಜಾರಾಮರು ನಿರುಕ್ತದ ಅರ್ಥವನ್ನು ದ್ವಿತೀಯ ವರ

ನೆಂಬುದಾಗಿ ಮಾಡಿದ್ದಾರೆ. ವಿಧವೆಯು ಜೀವನ ಪರ್ಯಂತ ಬ್ರಹ್ಮಚರ್ಯದಲ್ಲಿರುವುದು ಅತ್ಯಂತ ಉತ್ತಮವೆಂದು ಅವರೂ ಅಭಿಪ್ರಾಯ ಪಡುತ್ತಾರೆ.

ಮಹಾಮಹೋಪಾಧ್ಯಾಯ ಪಂಡಿತ ಶಿವದತ್ತ ಶರ್ಮರು ಈ ಕುರಿತು ತನ್ನ ವಿಸ್ತಾರವಾದ ಟಿಪ್ಪಣಿಯನ್ನು ಕೊಟ್ಟು ನಾಲ್ಕು ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವರು. ಅದಾವುವೆಂದರೆ— "ವಿಧವೆಯರು ಬ್ರಹ್ಮಚರ್ಯವ್ರತದಿಂದಲೇ ಇರುವುದು ಉತ್ತಮವು! ಸಹಗಮನದಿಂದ ಸತಿಯಾಗುವುದು ಮಧ್ಯಮವು! ಪುನರ್ವಿವಾಹ ಮಾಡಿಕೊಳ್ಳುವುದು ಅಧಮವು! ಈ ಮೂರು ಅಭಿಪ್ರಾಯಗಳು ವೇದಸಮ್ಮತವಾದರೂ ವಿಧವೆಯು ಪುನರ್ವಿವಾಹವಾಗದೆ ವ್ಯಭಿಚಾರ, ಗರ್ಭಹತ್ಯೆ ಇತ್ಯಾದಿ ಕುಕರ್ಮಗಳನ್ನು ಮಾಡುವುದು ವೇದವಿರುದ್ಧವಾಗಿರುವುದರಿಂದ ಅಂತಹವರಿಗೆ ಆಪದ್ಧರ್ಮ ದೃಷ್ಟಿಯಿಂದ ಪುನರ್ವಿವಾಹವನ್ನು ಮಾಡುವುದೇ ಯುಕ್ತವು" ಎಂದು ಸಿದ್ಧಪಡಿಸಿದ್ದಾರೆ.

ಇಷ್ಟೆಲ್ಲಾ ಪ್ರಮಾಣಗಳಿರುವಲ್ಲಿ ವಿಧವೆಯು ಪುನರ್ವಿವಾಹಕ್ಕೆ ಅರ್ಹಳಲ್ಲವೆಂದು ಹೇಳುವುದು ಯಾವ ನ್ಯಾಯ?

ಪ್ರಶ್ನೆ:—"ದೇವರಃಕಸ್ಮಾದ್ ದ್ವಿತೀಯೋ ವರ ಉಚ್ಯತೇ" ಈ ವಾಕ್ಯವನ್ನು ವಿಧವಾವಿವಾಹದ ಪಕ್ಷಪಾತಿಗಳು ಯಾರೋ ಸೇರಿಸಿರಬೇಕು ಹೊರತು ಯಾಸ್ಕರ ಅಭಿಪ್ರಾಯವಲ್ಲ. ಇದು ಹೊರತು ದುರ್ಗಾಚಾರ್ಯರು ತನ್ನ ನಿರುಕ್ತ ಭಾಷ್ಯದಲ್ಲಿ ಈ ರೀತಿ ಬರೆಯಲಿಲ್ಲ. ಇದಲ್ಲದೆ ಪ್ರಾಚೀನ ಗ್ರಂಥಗಳಲ್ಲಿಯೂ ಈ ವಿಚಾರವು ಕಂಡುಬರುವುದಿಲ್ಲ. ನಿರುಕ್ತ ಗ್ರಂಥವನ್ನು ಮುದ್ರಿಸಿರುವವರು ಇದನ್ನು ಸೇರಿಸಿರಬೇಕು.

ಉತ್ತರ:—ಈಗಿನ ಸಂಪ್ರದಾಯವಾದಿಗಳು, ಇದು ವರೆಗೆ ಸ್ವಾಮಿ ದಯಾನಂದ ಸರಸ್ವತಿಯವರ ಮತ್ತು ಕೆಲವಂಶಗಳಲ್ಲಿ ಮನುಸ್ಮೃತಿಯ ಅಭಿಪ್ರಾಯಗಳನ್ನು ಪ್ರಕ್ಷಿಪ್ತವೆಂದು ಹೇಳುತ್ತಿದ್ದರು.

ಆರ್ಯಸಮಾಜದವರು ತಮಗೆ ಅನುಕೂಲವಾದ ಅಭಿಪ್ರಾಯಗಳನ್ನೇ ಮೂಲ ಪ್ರಮಾಣವೆಂದೂ ತಮಗೆ ಪ್ರತಿಕೂಲವಾಗಿರುವುದನ್ನು ಅಪ್ರಮಾಣವೆಂದೂ ಹೇಳುತ್ತಾರೆಂಬುದಾಗಿ ಆಕ್ಷೇಪಿಸುತ್ತಿದ್ದರು. ಪರಂತು ಈಗ ಮಿಕ್ಕವರ ಅಭಿಪ್ರಾಯಗಳನ್ನೂ ಯಾವುದೊಂದು ಪ್ರಮಾಣವನ್ನೂ ಕೊಡದೆ ತಿರಸ್ಕರಿಸುತ್ತಿದ್ದಾರೆ. ನಿರುಕ್ತದ ಉಪ ಯುಕ್ತ ವಚನವನ್ನು ಪ್ರಕ್ಷಿಪ್ತವೆಂದು ಹೇಳಲು ನಿಮ್ಮಲ್ಲೇನಾದರೂ ಪ್ರಮಾಣವಿದೆಯೇ? ಹಾಗಾದರೆ "ವಿಧವೇವ ದೇವರಮ್ . . ." ಎಂಬ ಋಗ್ವೇದದ ಮಂತ್ರವನ್ನು ಸಹ ಪ್ರಕ್ಷಿಪ್ತವೆಂದು ಏತಕ್ಕೆ ಹೇಳುವುದಿಲ್ಲ? ಈ ನಿಮ್ಮ ಪ್ರಶ್ನೆಯು ಈ ಕೆಳಗೆ ವಿವರಿಸುವ ಯುಕ್ತಿಯಿಂದ ನಿವಾರಣೆ ಯಾಗುತ್ತದೋ ಇಲ್ಲವೋ ಎಂಬುದನ್ನು ವಿಚಾರಮಾಡಿರಿ.

೧. ಸಾಯಣಾಚಾರ್ಯರು ವೇದ ಅಥವಾ ನಿರುಕ್ತದ ಅಭಿ ಪ್ರಾಯವನ್ನು ಪ್ರಕ್ಷಿಪ್ತವೆಂಬುದಾಗಿ ಹೇಳಲಿಲ್ಲ. ಅವರ ಋಗ್ವೇದ ಭಾಷ್ಯದಲ್ಲಿಯೂ ನಿರುಕ್ತದ ವಾಕ್ಯವನ್ನು ಇದ್ದಕ್ಕಿದ್ದ ಹಾಗೇ ಕೊಟ್ಟಿರುವರು.

೨. ಆ ವಾಕ್ಯವು ಬಹಳ ಸರಳವಾಗಿರುವುದರಿಂದಲೇ ದುರ್ಗಾ ಚಾರ್ಯರು ಇದಕ್ಕೆ ಪ್ರತ್ಯೇಕ ವ್ಯಾಖ್ಯೆಯನ್ನು ಬರೆಯಲಿಲ್ಲ; ಹೊರತು ಇದಕ್ಕೆ ಅವರ ಅಭಿಪ್ರಾಯವು ವಿರುದ್ಧವಾಗಿರಲಿಲ್ಲ.

೩. ಪ್ರಾಚೀನ ಕಾಲದ ಯಾವ ಗ್ರಂಥಗಳಲ್ಲಿ ಇದರ ಪ್ರಮಾಣ ವಿಲ್ಲವೆಂಬುದಾಗಿ ಹೇಳುತ್ತೀರೋ ಆ ಗ್ರಂಥಗಳ ಹೆಸರನ್ನೊಮ್ಮೆ ತೋರಿಸಿರಿ; ಮತ್ತು ಆ ಗ್ರಂಥಗಳು ಸಾಯಣಾಚಾರ್ಯರಿಗಿಂತ ಎಷ್ಟು ಹಿಂದಿನವೆಂಬುದನ್ನು ಸಹ ತಿಳಿಸಿರಿ. ವಿಧವಾ ವಿವಾಹ ವಿರೋ ಧಿಗಳೇ ಕೆಲವು ಗ್ರಂಥಗಳಿಂದ ಈ ಅಭಿಪ್ರಾಯವನ್ನು ತೆಗೆದುಹಾಕಿರ ಬೇಕು. ಇದೆಲ್ಲವೂ ಪಕ್ಷಪಾತಿ ಮತ್ತು ಸ್ವಾರ್ಥಿಗಳ ಕೆಲಸವಾಗಿ ರುತ್ತದೆ.

೪. ಯಾಸ್ಕಾಚಾರ್ಯರು "ವಿಧವಾ" ಮತ್ತು "ದೇವರ" ಈ ಎರಡು ಶಬ್ದಗಳ ನಿರುಕ್ತಿಯನ್ನು ಮಾಡಿದ್ದಾರೆ. ಇದು ಆಕ್ಷೇಪಕರವೆಂದು ಹೇಳುವುದಾದರೆ ಇದರ ನಿಜವಾದ ಅರ್ಥವನ್ನು ನೀವು ಹೇಗೆ ಮಾಡುವಿರಿ? "ದ್ವಿವರ" ಅಥವಾ ದ್ವಿತೀಯವರ" ಇದರಿಂದಲೇ "ದೇವರ ಶಬ್ದವುಂಟಾಗುತ್ತದೆ ಹೊರತು "ವರಾನುಜ" ಅಥವಾ "ವರಭ್ರಾತಾ" ಎಂಬ ಅರ್ಥವುಂಟಾಗುವುದಿಲ್ಲ.

೫. ಆದುದರಿಂದ ನಿಮ್ಮಂತಹ ವಿಧವಾ ವಿವಾಹ ವಿರೋಧಿಗಳೇ ಯಾರಾದರೂ ಈ ವಾಕ್ಯವನ್ನು ಆ ಗ್ರಂಥಗಳಲ್ಲಿ ಸೇರಿಸಿರಬೇಕು; ಅಥವಾ ನಿಷ್ಪಕ್ಷಪಾತಿಗಳಾದ ಮುದ್ರಾಲಯದವರು ಮೇಲಿನ ಪ್ರಮಾಣವನ್ನು ಮುದ್ರಿಸಿರಬೇಕು. ಕ್ರಿ. ಶಕ. 1895ರಲ್ಲಿ ಮುಂಬಯಿಯ ನಿರ್ಣಯಸಾಗರ ಮುದ್ರಣಾಲಯದಲ್ಲಿ ಮುದ್ರಿತವಾದ ನಿರುಕ್ತದಲ್ಲಿ ಈ ವಾಕ್ಯವನ್ನು ಪಂಕ್ತಿಗಳಲ್ಲಿ ಸೇರಿಸಲಿಲ್ಲ.

೬. ಮಹಾಮಹೋಪಾಧ್ಯಾಯ ಪಂಡಿತ್ ಶಿವದತ್ತ ಶರ್ಮರು ಸಹ ಇದನ್ನು ಅಪ್ರಮಾಣವೆಂದು ಹೇಳುವುದಿಲ್ಲ.

೭. ವಿಧವಾ ವಿವಾಹ ಪ್ರಚಾರಕರು ಈ ವಾಕ್ಯವನ್ನು ಸೇರಿಸಲು ಕಾರಣವೇನು? ಏಕೆಂದರೆ" ವಿಧವೇವ ದೇವರಂ" ಎಂಬ ವೇದ ಮಂತ್ರದಲ್ಲಿಯೇ "ವಿಧವೆಯು ದೇವರನೊಡನೆ ಶಯನಮಾಡಬಹುದು" ಎಂದು ಸಪ್ರಮಾಣವಾಗಿ ಕಂಡುಬರುತ್ತಿದೆ. ನಮ್ಮ ಅರ್ಥವು ಸರಿಯಾಗಿಲ್ಲವಾದರೆ ಪ್ರಮಾಣಯುಕ್ತವಾದ ಅರ್ಥವನ್ನು ನೀವೇ ಮಾಡಿ ನೋಡಿರಿ. ವೃಥಾ ಛಲ ಹಿಡಿಯುವುದರಿಂದ ಪ್ರಯೋಜನವೇನು?

ಪ್ರಶ್ನೆ:—ಪತಿಯ ತಮ್ಮನನ್ನು "ದೇವರ"ನೆಂಬುದನ್ನು ಇಡೀ ಜಗತ್ತೇ ತಿಳಿದಿರುವಲ್ಲಿ ದ್ವಿತೀಯ ವರನೆಂದು ಹೇಳುವುದು ಸರಿಯೇ?

ಉತ್ತರ:—ಚೆನ್ನಾಗಿ ವಿಚಾರ ಮಾಡಿರಿ. ಎರಡನೆಯ ಪತಿಯನ್ನೇ ದೇವರನೆಂದು ಹೇಳುತ್ತಾರೆ. ಅವನು ಪತಿಯ ತಮ್ಮನಾಗಲಿ, ಅಣ್ಣನಾಗಲಿ ಅಥವಾ ಬೇರೆಯೇ ಒಬ್ಬ ಪುರುಷನಾಗಲಿ—ಅವನು

ದ್ವಿತೀಯ ವರನಾಗುತ್ತಾನೆ. ಗಂಡನ ತಮ್ಮನೇ ಸಮೀಪದ ಸಂಬಂಧಿಯಾಗಿರುವುದರಿಂದ ಹೆಚ್ಚಾಗಿ ಆತನೊಡನೆಯೇ ದ್ವಿತೀಯ ಸಂಬಂಧ ಮಾಡಿಕೊಳ್ಳುವ ಪದ್ಧತಿಯಿತ್ತು. ಈ ಕುರಿತು ಮಹಾಭಾರತದ ಪ್ರಮಾಣವನ್ನು ನೋಡಿರಿ.

ಸತ್ಯವತಿಯು ತನ್ನ ಪುತ್ರ ವಧುವಿನೊಡನೆ ಹೇಳುತ್ತಾಳೆ—

ಕೌಸಲ್ಯೇ ದೇವರಸ್ತೇಽಸ್ತಿಸೋಽದ್ಯತ್ವಾಽನುಪ್ರವೇಕ್ಷ್ಯತಿ ।
ಅಪ್ರಮತ್ತಾ ಪತೀಕ್ಷೈನಂ ನಿಶೀಥೇ ಹ್ಯಾಗಮಿಷ್ಯತಿ ॥

ಮಹಾಭಾರತ ಆದಿಪರ್ವ ಅ. ೧೦೬, ಶ್ಲೋ. ೨.

ಅರ್ಥ;—"ಕೌಸಲ್ಯೆ! ನಿನಗೆ ಎರಡನೆಯ ಪತಿಯು ಇರುವನು. ಅವನು ಈ ದಿನ ನಿನ್ನ ಬಳಿಗೆ ಬರುವನು. ನೀನು ಎಚ್ಚರದಿಂದಿದ್ದು ಆತನ ನಿರೀಕ್ಷಣೆಯಲ್ಲಿರಬೇಕು. ಅವನು ಮಧ್ಯರಾತ್ರಿ ನಿನ್ನ ಸಮೀಪ ಬರುವನು."

ಇಲ್ಲಿ "ದೇವರ" ಶಬ್ದವು ಕೌಸಲ್ಯೆಯ ಪತಿಯ ಹಿರೇ ಸಹೋದರರಾದ ವ್ಯಾಸಋಷಿಗಳ ಕುರಿತಾಗಿರುತ್ತದೆ. ಕೌಸಲ್ಯೆಯೊಂದಿಗೆ ನಿಯೋಗಮಾಡಿ ಸಂತಾನೋತ್ಪತ್ತಿ ಮಾಡುವೆನೆಂದು ಅವರು ಪ್ರತಿಜ್ಞೆ ಮಾಡಿದ್ದರು. ಇಲ್ಲಿ ದೇವರ ಶಬ್ದವು ಹೇಗೆ ಉಪಯೋಗಿಸಲ್ಪಟ್ಟವೆಯೆಂದರೆ ಅವರು ದ್ವಿತೀಯ ವರರಾಗಿದ್ದರು. ಇಲ್ಲವಾದರೆ "ಜೇಷ್ಠ" ಶಬ್ದದ ಪ್ರಯೋಗವಾಗಬೇಕಿತ್ತು.

ಪ್ರಶ್ನೆ:—"ಅಶ್ವಿನಾ" ಅಥವಾ "ಅಶಿನೌ" ಎಂಬ ಶಬ್ದಗಳ ಅರ್ಥವನ್ನು ಸ್ತ್ರೀ ಪುರುಷರೆಂಬುದಾಗಿ ಮಾಡಿದ್ದು ಸರಿಯಲ್ಲ. ಈ ರೀತಿ ವೇದಗಳಲ್ಲಿಯಾಗಲಿ, ಸಾಯಣ ಭಾಷ್ಯಗಳಲ್ಲಿಯಾಗಲಿ ಕಂಡುಬರುವುದಿಲ್ಲ. ಇದು ಸ್ವಾಮಿ ದಯಾನಂದ ಸರಸ್ವತಿಯವರ ಕಲ್ಪಿತ ಅಭಿಪ್ರಾಯವಾಗಿರುತ್ತದೆ. ಅಶ್ವನೀ ಕುಮಾರ ದೇವತೆಯನ್ನೇ "ಅಶ್ವಿನಾ" ಎಂದು ಕರೆಯಲಾಗುತ್ತದೆ.

ಉತ್ತರ:— ಸರಿ! ನಿಮ್ಮ ಈ ದೇವತಾವಾದಕ್ಕೆ ನಮ್ಮದೊಂದು ಧನ್ಯವಾದ. ಈ ಪ್ರಕಾರ ಎಲ್ಲವನ್ನೂ ಅದೃಶ್ಯದೇವತೆ ಎಂಬುದಾಗಿ ತಿಳಿದುಕೊಳ್ಳುವಿರಾದರೆ ಭೌತಿಕ ಪದಾರ್ಥಗಳು ಎಲ್ಲಿ ಉಳಿಯುವುವು? ಸ್ತ್ರೀಪುರುಷರು ತಮ್ಮಲ್ಲಿರುವ ಉತ್ತಮ ಗುಣಗಳಿಂದಲೇ ವಿದ್ವಾಂಸರಾಗುತ್ತಾರೆ. ಅಂತಹ ವಿದ್ವಾಂಸರನ್ನೇ ದೇವತೆಗಳೆನ್ನುತ್ತಾರೆ. "ವಿದ್ವಾಂಸೋ ವೈದೇವಾಃ" ಎಂಬುದನ್ನು ನೀವು ಮರೆತಿರುವಿರಿ. ಸ್ತ್ರೀಯನ್ನು ದೇವಿಯೆಂದೂ, ಪುರುಷನನ್ನು ದೇವನೆಂದೂ ಹೇಳುವ ವಾಡಿಕೆಯು ಎಲ್ಲಾ ಕಡೆಗಳಲ್ಲಿ ಈಗಲೂ ಇದ್ದೇ ಇದೆ. "ಅಶ್ವಿನೌ" ಶಬ್ದಕ್ಕೆ ಸ್ತ್ರೀಪುರುಷರು ಎಂಬ ಅರ್ಥವನ್ನು ಸ್ವಾಮಿ ದಯಾನಂದ ಸರಸ್ವತಿಯವರು ತನ್ನ ಸ್ವಬುದ್ಧಿಯಿಂದ ಮಾಡಲಿಲ್ಲ. ಸ್ವತಹ ವೇದವೇ ಈ ಅರ್ಥವನ್ನು ಮಾಡಿರುವುದು. ವೇದ ಸ್ವತಃ ಪ್ರಮಾಣವಿರುವಾಗ ನಾವು ಅಲ್ಲಲ್ಲಿ ಅಲೆದಾಡುವುದೇತಕ್ಕೆ?

ಸೋಮೋ ವಧೂ ಯುರಭವದಶ್ವಿನಾಸ್ತಾಮುಭಾ ವರಾ ।
ಸೂರ್ಯಾಂ ಯತ್ಪತ್ಯೇ ಶಂಸನ್ತೀಂ ಮನಸಾ ಸವಿತಾದದಾತ್ ॥

ಋ. ಮ. ೧೦. ಸೂ. ೮೫. ಮಂ. ೯.

ಸಾಯಣಭಾಷ್ಯ:—

ಸೋಮೋ ವಧೂಯುರ್ವಧೂ ಕಾಮೋ ವರೋಽಭವತ್ । ತಸ್ಮಿನ್ಸಮಯೇಽಶ್ವಿನಾ ವುಬೋಭೌ ವರಾವರಾವಾಸ್ತಾಂ । ಅಭೂತಾಂ । ಯದ್ಯದಾಸೂರ್ಯಾಂ ಪತ್ಯೇ ಶಂ ಸನ್ತೀಂ ಪತಿಕಾಮಾಯಮಾನಾಂ । ಪರ್ಯಾಪ್ತಯೌವನಾಮಿತ್ಯರ್ಥಃ । ಸೂರ್ಯಾಂ ಮನಸಾ ಸಹಿತಾಯ ಸೋಮಾಯ ವರಾಯ ಸವಿತಾ ತತ್ಪಿತಾ ದದಾತ್ । ಪ್ರಾದಾತ್ ದಿತ್ಸಾಂ ಚಕಾರ"

ಭಾವಾರ್ಥ:— ಸೋಮವಧುವನ್ನು ಇಚ್ಛಿಸುವವನು ವರನಾಗುವನು. ಆಗ ವಧುವರರಿಬ್ಬರಿಗೂ "ಅಶ್ವಿನೌ" ಶಬ್ದವು ಸಂಬೋಧಿಸಲ್ಪಡುತ್ತದೆ. ಯಾವಾಗ ಕನ್ಯೆಯು ಪತಿಯ ಪ್ರಶಂಸೆಮಾಡುತ್ತಾಳೋ, ಪತಿಯನ್ನು ಇಚ್ಛಿಸುತ್ತಾಳೋ ಅಂದರೆ ಪೂರ್ಣ ಯುವತಿಯಾಗು

ತ್ವಾಳೋ ಆಗ "ಸವಿತಾ" ಅಂದರೆ ತಂದೆಯು ಅವಳನ್ನು ಮನಃ ಪೂರ್ವಕವಾಗಿ "ಸೋಮ" ಅಂದರೆ ವರನಿಗೆ ಕೊಟ್ಟನು."

ಇಲ್ಲಿ ಈ ಕೆಳಗಿನ ಅಭಿಪ್ರಾಯಗಳೇ ಸ್ಮರಣೀಯವಾಗಿವೆ.

"ಅಶ್ವಿನಾ" ಶಬ್ದವು ವೇದದಲ್ಲಿ ವರನಿಗೆ ಉಪಯೋಗಿಸಲ್ಪಟ್ಟದೆ. ಇದು "ಅಶ್ವಿನೌ" "ವರೌ" ಎಂಬುದರ ಆರ್ಷಪ್ರಯೋಗವಾಗಿರುತ್ತದೆ. ಇಲ್ಲಿ "ವರೌ" ಶಬ್ದವು ದ್ವಂದ್ವೈಕಶೇಷ ಸಮಾಸವಾಗಿರುತ್ತದೆ. "ಮಾತಾಚ ಪಿತಾಚ ಪಿತರೌ" ಅಥವಾ "ಸ್ವಸಾಚ ಭ್ರಾತಾಚ ಭ್ರಾತರೌ" ಇನ್ನು "ಹಂಸೀಚ ಹಂಸಶ್ಚ ಹಂಸೌ" ಎಂಬಂತೆ "ವಧುಚ ವರಶ್ಚ ವರೌ" ಎಂದಾಗುತ್ತದೆ. ಸಾಯಣರು ಕೂಡಾ "ಅಶ್ವಿನಾ ವುಭೋ ಭೌ ವರಾವರಾವಾಸ್ತಾಂ" ಅರ್ಥಾತ್ "ವರಾವರೌ" ಎಂದೇ ಮಾಡಿರುತ್ತಾರೆ. "ವರಾಚ ವರಶ್ಚ ವರಾವರೌ" ಎಂಬುದೇ "ವರಾ ವರೌ" ಎಂಬುದರ ಸರಿಯಾದ ಅರ್ಥವಾಗುತ್ತದೆ. "ವರಾ" ಎಂದರೆ ವಧುವಿನ ಹೆಸರು. (ಖರುಃಪತಿ ವರಾ ಕನ್ಯಾ "ಸಿದ್ಧಾಂತೇ ಭಟ್ಟೋಜಿ ಧೀಕ್ಷಿತಃ") "ಕೃಷ್ಣ" ಶಬ್ದದ ಸ್ತ್ರೀಲಿಂಗ "ಕೃಷ್ಣಾ". ಶಿವಶಬ್ದದಿಂದ "ಶಿವಾ" ಎಂದು ಹೇಗೋ ಹಾಗೆಯೇ "ವರ" ಶಬ್ದದ ಸ್ತ್ರೀಲಿಂಗವು "ವರಾ" ಎಂದಾಗುತ್ತದೆ. ಈ ಪ್ರಕಾರ ಇಲ್ಲಿ ವೇದ ಮತ್ತು ಸಾಯಣರ ಮತದಂತೆ "ಅಶ್ವಿನೌ" ಅಂದರೆ ಸ್ತ್ರೀಪುರುಷರೆಂದೇ ಆಗುತ್ತದೆ. ಆದುದ ರಿಂದ ಸ್ವಾಮಿ ದಯಾನಂದರ ಅಭಿಪ್ರಾಯವು ಸಹ ಸರಿಯಾಗಿರುತ್ತದೆ.

೨. "ಸೋಮ" ಶಬ್ದವು "ವರ" ಶಬ್ದದ ಪರ್ಯಾಯ ವಾಚಕ ವಾಗಿರುತ್ತದೆ. ವೇದದಲ್ಲಿ "ಸೋಮ" ಶಬ್ದಕ್ಕೆ "ವಧೂಯುಃ" ಶಬ್ದ ಬಂದಿರುತ್ತದೆ. ಸಾಯಣಾಚಾರ್ಯರು ಇದಕ್ಕೆ "ವಧೂಕಾಮ" ಅಥವಾ ವಧುವನ್ನು ಇಚ್ಛಿಸುವವನೆಂಬುದಾಗಿ ಮಾಡಿದ್ದಾರೆ.

೩. ಸಾಯಣರ ಮತದಂತೆ "ಸವಿತಾ" ಎಂಬುದರ ಅರ್ಥವು "ಪಿತಾ" ಎಂಬುದಾಗಿದೆ. "ಸವಿತಾ" ಮತ್ತು "ಪ್ರಸವಿತಾ" ಇವೆರಡೂ ಸಮಾನಾರ್ಥಕ ಶಬ್ದಗಳಾಗಿವೆ.

೪. "ಸೂರ್ಯ" ಶಬ್ದಕ್ಕೆ "ಪುತ್ರಿ" ಎಂದರ್ಥವಾಗುತ್ತದೆ. ಇದರ ಪ್ರಮಾಣವು ಋಗ್ವೇದದ ಹತ್ತನೆಯ ಮಂಡಲದ ಎಂಭತ್ತೈದನೆಯ ಸೂಕ್ತದಲ್ಲಿ ವಿವರಿಸಲ್ಪಟ್ಟಿದೆ.

೫. ಸ್ತ್ರೀಪುರುಷರಿಗೆ ಯೌವನ ಪ್ರಾಯದಲ್ಲಿಯೇ ವಿವಾಹವಾಗಬೇಕೆಂದು ಇದೇ ಮಂತ್ರದಲ್ಲಿ ಹೇಳಿರುತ್ತದೆ.

ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ ।
ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ ॥

ಋ. ಮ ೧೦, ಸೂ. ೮೫, ಮ. ೪೦.

ಸಾಯಣಭಾಷ್ಯ:— "ಜಾತಾಂ ಕನ್ಯಾಂ ಸೋಮಃ ಪ್ರಥಮ ಭಾವೀ ಸನ್ ವಿವಿದೇ । ಲಬ್ಧವಾನ್ । ಗಂಧರ್ವ ಉತ್ತರಃ ಸನ್ ವಿವಿದೇ ಲಬ್ಧವಾನ್ । ಅಗ್ನಿಸ್ತೃತೀಯಃ ಪತಿಸ್ತೇತವ । ಪಶ್ಚಾನ್ ಮನುಷ್ಯಜಾಃ ಪತಿಸ್ತುರೀಯಶ್ಚತುರ್ಥಃ ।"

ನಮ್ಮ ಅರ್ಥ: — "(ಸೋಮಃ) ಸೋಮ (ಪ್ರಥಮಃ) ಮೊದಲು (ವಿವಿದೇ) ಪಡೆಯುತ್ತಾನೆ. (ಉತ್ತರ) ತದನಂತರ (ಗಂಧರ್ವ) ಗಂಧರ್ವ (ವಿವಿದೇ) ಪಡೆಯುತ್ತಾನೆ. (ತೃತೀಯಃ) ಮೂರನೆಯವನಾಗಿ (ಪತಿ) ಪತಿ (ತೇ) ನಿನ್ನ (ಅಗ್ನಿಃ) ಅಗ್ನಿಯಾಗಿರುತ್ತಾನೆ. (ತೇ) ನಿನ್ನ (ತುರೀಯಃ) ನಾಲ್ಕನೆಯವ (ಮನುಷ್ಯಜಾಃ) ಮನುಷ್ಯನು."

ಈ ಮಂತ್ರದಲ್ಲಿ ಸೋಮ, ಗಂಧರ್ವ, ಅಗ್ನಿ, ಮನುಷ್ಯನೆಂಬ ನಾಲ್ಕು ಪತಿಗಳ ಹೆಸರನ್ನು ಕೊಟ್ಟಿರುತ್ತದೆ. ಈ ಪ್ರಮಾಣದಂತೆ ಸ್ತ್ರೀಗೆ ಅವಶ್ಯವಿದ್ದರೆ ಪುನಃ ಪತಿಯನ್ನು ಮಾಡಿಕೊಳ್ಳಬಹುದೆಂದು ಸಿದ್ಧವಾಗುತ್ತದೆ. ಸಾಯಣ ಭಾಷ್ಯವು ಕೂಡಾ ಇದನ್ನು ವಿರೋಧಿಸುವುದಿಲ್ಲ. ಇದೇ ಮಂತ್ರವು ಸ್ವಲ್ಪ ಪರಿವರ್ತನಾ ರೂಪದಲ್ಲಿ ಅಥರ್ವವೇದದಲ್ಲಿ ಬಂದಿದೆ.

ಸೋಮಸ್ಯ ಜಾಯಾ ಪ್ರಥಮಂ ಗಂಧರ್ವಸ್ತೇ ಪರಃ ಪತಿಃ ।
ತೃತೀಯೋ ಅಗ್ನಿಷ್ಟೇ ಪತಿಸ್ತುರೀ ಯಸ್ತೇ ಮನುಷ್ಯಜಾಃ ॥
ಅಥರ್ವ. ಕಾಃ ೧೪. ಸೂ. ೨. ಮಂ. ೩.

ಅರ್ಥಾತ್:—"ನೀನು ಮೊದಲು ಚಂದ್ರನ ಪತ್ನಿಯಾಗಿರುತ್ತೀ. ಅನಂತರ ಗಂಧರ್ವನೊಡನೆ ವಿವಾಹ ಮಾಡಿಕೊಂಡೆ. ಆಮೇಲೆ ಅಗ್ನಿಯನ್ನು ಕೊನೆಗೆ ಮಾನವನನ್ನು ವರಿಸಿದೆ."

ಸೋಮೋಽದದದ್ ಗಂಧರ್ವಾಯ ಗಂಧರ್ವೋಽದದ
ದಗ್ನಯೆ ರಯಿಂ ಚ ।
ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಮ್ ॥
ಋ. ಮ. ೧೦. ಸೂ. ೮೫, ಮಂ. ೪೧. ಅಥರ್ವ ಕಾಂ. ೧೪. ಸೂ. ೨. ಮಂ. ೪.

ಸಾಯಣ ಭಾಷ್ಯ:—"ಸೋಮೋ ಗಂಧರ್ವಾಯ ಪ್ರಥಮಮ್ ದದತ್ । ಪ್ರಾದಾತ್ ಗಂಧರ್ವೋಽಗ್ನಯೇ ಪ್ರಾದಾತ್ । ಅಥೋ ಅಪಿ ಚಾಗ್ನಿರಿಮಾಂ ಕನ್ಯಾಂ ರಯಿಂ ಧನಂ ಪುತ್ರಾಂಶ್ಚಮಹ್ಯ ಮದಾತ್ ।

ಭಾಷಾರ್ಥ:—"ಸೋಮ"ನು ಮೊದಲು ಕನ್ಯೆಯನ್ನು ಗಂಧರ್ವನಿಗೂ, ಅವನು ಅಗ್ನಿಗೂ, "ಅಗ್ನಿ"ಯು ಕನ್ಯೆ ಧನ, ಪುತ್ರಾದಿಗಳನ್ನು ನನಗೂ ಕೊಟ್ಟನು.

ಸ್ತ್ರೀಗೆ ಸಹ ವಿಶೇಷ ಸಂದರ್ಭಗಳಲ್ಲಿ ಒಬ್ಬನಿಗಿಂತ ಹೆಚ್ಚು ಪತಿಯನ್ನು ಮಾಡಿಕೊಳ್ಳುವ ಅಧಿಕಾರವುಂಟೆಂಬುದು ಮೇಲಿನ ಎರಡು ಮಂತ್ರಗಳಿಂದಲೂ ವಿದಿತವಾಗುತ್ತದೆ.

ಪ್ರಶ್ನೆ:—ಸೋಮ, ಗಂಧರ್ವ, ಅಗ್ನಿ ಇವರೆಲ್ಲರೂ ದೇವತೆಗಳಾಗಿರುವಲ್ಲಿ ಇವರನ್ನು ಮನುಷ್ಯರೆಂದು ಹೇಳುವುದು ತಪ್ಪಲ್ಲವೆ? ಒಬ್ಬ ಕನ್ಯೆಯನ್ನು ಮೊದಲು ಸೋಮ ದೇವತೆಯೂ ಆಮೇಲೆ ಗಂಧರ್ವನೂ ಮತ್ತೆ ಅಗ್ನಿಯೂ ಈ ರೀತಿ ಮೂರು ಮಂದಿ ದೇವತೆಗಳು ಭೋಗಿಸಿದ ಅನಂತರ ಆಕೆಯು ಮನುಷ್ಯರ ಭೋಗಕ್ಕೆ ಯೋಗ್ಯಳಾಗುತ್ತಾಳೆ. ಈ ಕುರಿತು ಅತ್ರಿಸ್ಮೃತಿಯಲ್ಲಿ ಬರೆದಿರುವುದನ್ನು ನೋಡಿರಿ.

**ಪೂರ್ವಂ ಸ್ತ್ರಿಯಃ ಸುರೈರ್ಭುಕ್ತಾಃ ಸೋಮ ಗಂಧರ್ವ ವಹ್ನಿಭಿಃ ।**
**ಭುಂಜತೇ ಮಾನವಾಃ ಪಶ್ಚಾನ್ ನತಾದುಷ್ಯಂತಿ ಕರ್ಹಿಚಿತ್ ॥**

**ಅತ್ರಿಸ್ಮೃತಿ. ಶೋ. ೧೪೧. (ಮುಂಬೈಯ ವೆಂಕಟೇಶ್ವರ ಪ್ರೆಸ್ಸಿನಲ್ಲಿ ಮುದ್ರಿತ.)**

ಅರ್ಥಾತ್:—"ಸ್ತ್ರೀಯರ ಮೊದಲು ಸೋಮ, ಆಮೇಲೆ ಗಂಧರ್ವ ಮತ್ತೆ ಅಗ್ನಿ ಎಂಬ ದೇವತೆಗಳಿಂದ ಭೋಗಿಸಲ್ಪಡುತ್ತಾರೆ. ಅನಂತರ ಮನುಷ್ಯರು ಭೋಗಿಸುತ್ತಾರೆ. ಇದರಿಂದ ಅವರಿಗೆ ಯಾವ ದೋಷವೂ ತಗಲುವುದಿಲ್ಲ.

ಉತ್ತರ:—ಸೋಮ, ಗಂಧರ್ವ, ಅಗ್ನಿ ಮುಂತಾದ ದೇವತೆಗಳು ಪರಮ ಪವಿತ್ರರೂ ಪೂಜ್ಯನೀಯರೂ ಆಗಿರುವಲ್ಲಿ ಅಂತಹವರೊಡನೆ ಚಿಕ್ಕ ಚಿಕ್ಕ ಕನ್ಯೆಯರಿಂದ ಸಂಭೋಗ ಮಾಡಿಸುವುದೆಂದರೆ ಇದು ಎಂತಹ ಪರಿಹಾಸ್ಯ! ಈ ದೇವತೆಗಳಿಗೆ ದೇವ ಜಾತಿಯ ಸ್ತ್ರೀಯರು ದೊರೆಯುವುದಿಲ್ಲವೇ? ದೇವ ಕನ್ಯೆಯನ್ನು ಬಿಟ್ಟು ಪಾಪ! ಮಾನವ ಕನ್ಯೆಯರನ್ನೇಕೆ ಕೆಡಿಸುತ್ತಾರೆ? ನಿಮ್ಮ ದೇವ ಮಾಲೆಯಲ್ಲಿ ಮನುಷ್ಯರ ಹಾಗೆ ಪುಲ್ಲಿಂಗ, ಸ್ತ್ರೀಲಿಂಗಗಳೆಂಬ ಭೇದಗಳಿಲ್ಲವೆ? ನೋಡಿರಿ. ಇಂದ್ರನಿಗೆ ಶಚಿ, ಶಿವನಿಗೆ ಪಾರ್ವತಿ, ವಿಷ್ಣುವಿಗೆ ಲಕ್ಷ್ಮಿ ಈ ಪ್ರಕಾರ ದೇವತೆಯರಲ್ಲಿ ದೇವಿಯರು ರಮಿಸುತ್ತಿದ್ದಾರೆ. ಹೀಗಿರುವಲ್ಲಿ ಸೋಮ ಮತ್ತು ಗಂಧರ್ವರು ಪತ್ನಿ ರಹಿತರೊ? ಅವರ ಪತ್ನಿಯರು ಮೃತಪಟ್ಟಿರುವರೊ? ಗಂಧರ್ವನು ಯಾವ ದೇವತೆ? ಆತನ ವಾಸಸ್ಥಾನವೆಲ್ಲಿ? ಎಂಬುದನ್ನಾದರೂ ತೋರಿಸಿರಿ ನೋಡೋಣ.

ದೇವತೆಗಳು ಕುಮಾರಿ (ಋತುಮತಿಯಾಗದವರನ್ನೇ) ಯರನ್ನೇ ಭೋಗಿಸುವುದೆಂದರೇನು? ಎಷ್ಟು ಸಮಯದ ವರೆಗೆ ಈ ರೀತಿ ಭೋಗಿಸುವರು? ಒಂದು ವೇಳೆ ಒಬ್ಬ ಸ್ತ್ರೀಯು ಜೀವನ ಪರ್ಯಂತ ಬ್ರಹ್ಮಚಾರಿಣಿಯಾಗಿರಲು ನಿಶ್ಚೈಸಿದಲ್ಲಿ ಅಂತಹವಳೊಡನೆಯೂ ಈ ದೇವತೆಗಳು

ರಮಿಸುವರೋ? ಹೀಗಿರುವುದಾದರೆ ಸ್ತ್ರೀಯರಿಗೆ ಇದಕ್ಕಿಂತ ದೊಡ್ಡ ದಾದ ಆಪತ್ತು ಬೇರೆಯಿಲ್ಲವೆನ್ನಬಹುದು.

ಇನ್ನುಳಿದುದು ಅತ್ರಿಸ್ಮೃತಿಯ ಪ್ರಮಾಣ. ಈ ಪ್ರಮಾಣವು ಅತ್ಯಂತ ಹೇಯ ಮತ್ತು ಹಾಸ್ಯಾಸ್ಪದವಾದ ತಕ್ಕ ಪ್ರಮಾಣವಾಗಿದೆ. ಇದನ್ನು ಸತ್ಯವೆಂದು ಗ್ರಹಿಸುವುದರಲ್ಲಿ ನಿಮಗೂ ಸ್ವಲ್ಪ ಸಂಕೋಚ ಪಡಬೇಕಾದೀತು. ಅದೇ ಸ್ಮೃತಿಯ 190ನೇ ಶ್ಲೋಕವನ್ನು ನೋಡಿರಿ.

ನ ಸ್ತ್ರೀ ದುಷ್ಯತಿ ಜಾರೇಣ ಬ್ರಾಹ್ಮಣೋ ವೇದ ಕರ್ಮಣಾ ।
ನಾಪೋ ಮೂತ್ರಪುರೀಷಾಭ್ಯಾಂ ನಾಗ್ನಿರ್ದಹತಿ ಕರ್ಮಣಾ ॥

"ಸ್ತ್ರೀಗೆ ವ್ಯಭಿಚಾರದ ದೋಷವು ತಗಲಲಾರದು. ಬ್ರಾಹ್ಮಣನಿಗೆ ವೇದ ವಿರುದ್ಧ ಕರ್ಮದಿಂದಲೂ, ನೀರಿಗೆ ಮಲ ಮೂತ್ರದ ಸಂಸರ್ಗ ದಿಂದಲೂ ದೋಷವು ತಗಲಲಿಕ್ಕಿಲ್ಲ. ಕರ್ಮದಿಂದ ಅಗ್ನಿಯು ಸುಡ ಲಾರದು."

ನಿಮ್ಮ ಅತ್ರಿಯು ಸ್ತ್ರೀಯರ ವ್ಯಭಿಚಾರದ ಸಮರ್ಥನೆಗೆ, ಬ್ರಾಹ್ಮ ಣರ ವೇದ ವಿಹಿತ ಕರ್ಮಗಳ ಉಪಮೆಯನ್ನು ಕೊಟ್ಟು, ಅವರನ್ನು ನಿರ್ದೋಷಿಗಳನ್ನಾಗಿ ಮಾಡಿರುವನು. ಈ ಸಿದ್ಧಾಂತದಿಂದ ವೇಶ್ಯೆ ಯರು ಸಹ ಕುಲೀನ ಬ್ರಹ್ಮಚಾರಿಣಿಯರಿಗೆ ಸಮಾನರೆಂದು ಕರೆಯ ಲ್ಪಡುವರು. ಇನ್ನು ನಿಮಗೋಸ್ಕರ ಕೆಳಗೆ ವಿವರಿಸಿರುವ ಎರಡು ವಿಧಿಗಳಿವೆ. ಇವುಗಳಲ್ಲಿ ಯಾವುದಾದರೊಂದನ್ನು ನೀವು ಸ್ವೀಕರಿಸಲೇ ಬೇಕಾಗುವುದು.

೧. ಅತ್ರಿಮುನಿಯ ಎರಡು ಶ್ಲೋಕಗಳನ್ನೂ ಪ್ರಮಾಣಗಳ ನ್ನಾಗಿ ನಂಬಿರಿ; ಮತ್ತು ಪುನರ್ವಿವಾಹದ ದೋಷವನ್ನು ವಿಧವೆಯರ ಮೇಲೆ ಹೊರಿಸಬೇಡಿರಿ. ವ್ಯಭಿಚಾರವನ್ನು ಸಹ ದೂಷಿಸಬೇಡಿರಿ. ಹೀಗೆ ಒಪ್ಪುವುದಾದರೆ ವಿಧವಾವಿವಾಹ ಪ್ರಚಾರಕರನ್ನು ಯಾವ ಮುಖದಿಂದ ನಿಂದಿಸುವಿರಿ? ಇದು ಸಾಧ್ಯವಿಲ್ಲವಾದರೆ,

೨. ಎರಡೂ ಶ್ಲೋಕಗಳನ್ನೂ ತ್ಯಜಿಸಿ ಸೋಮ, ಗಂಧರ್ವ ಇತ್ಯಾದಿ ಹೆಸರುಗಳು ಸಹಾ ಮನುಷ್ಯರದ್ದೆಂಬುದಾಗಿ ತಿಳಿಯಿರಿ. ಮತ್ತು ವಿಶೇಷ ಪರಿಸ್ಥಿತಿಗಳಲ್ಲಿ ವಿಧವೆಯರಿಗೆ ಪುನರ್ವಿವಾಹದ ಅಧಿಕಾರವನ್ನು ಕೊಡಿರಿ.

ಪ್ರಶ್ನೆ:—ಹೀಗೆಂದಿಗೂ ಆಗಲಾರದು. ನಿಮ್ಮ ಅರ್ಥದಂತೆ ದೇವತೆಗಳು ಭೋಗಿಸುವುದಿಲ್ಲ. ಗರ್ಭೋತ್ಪತ್ತಿಯ ಸಮಯದಿಂದಲೇ ದೇವತೆಯ ಪ್ರಧಾನತೆಯು ಆದಿಕಾರಣವಾಗಿರುವುದರಿಂದ ಕನ್ಯೆಯನ್ನು ಸೋಮದೇವನು ಮೊದಲು ಸೇರುತ್ತಾನೆ ಅಂದರೆ ಎಲ್ಲಾ ಅಂಗಾಂಗಗಳಲ್ಲಿ ಪ್ರವಿಷ್ಟನಾಗುತ್ತಾನೆ. ಕನ್ಯೆಯ ಶರೀರದಲ್ಲಿ ಯೌವ್ವನದ ಸಂಚಾರವಾದಾಗ ಗಂಧರ್ವನು ವ್ಯಾಪಿಸುತ್ತಾನೆ. ಗಂಧರ್ವನೇ ಯೌವ್ವನದ ರಕ್ಷಕನೆಂಬುದಾಗಿ ಹೇಳಿರುತ್ತದೆ. ಆ ಮೇಲೆ ವಿವಾಹ ಸಮಯ ಹೋಮಾಗ್ನಿಯ ಸಮೀಪ ತಂದರೆ ಅಲ್ಲಿ ನಿಯೋಜಿಸಲ್ಪಡುವವನೇ ಪತಿಯಾಗುವನು.

ಉತ್ತರ:—ಆಹಾ! ನಿಮ್ಮ ದೇವತಾ ವಾದವೇ! ಮೊದಲನೆಯದಾಗಿ ಕನ್ಯೆಯರೊಡನೆ ದೇವತೆಗಳು ಭೋಗಗೈಯ್ಯುತ್ತಾರೆಂಬ ಮಿಥ್ಯಾವಾದವನ್ನು ಅತ್ರಿಸ್ಮೃತಿಯಿಂದ ನಿಮಗೆ ತೋರಿಸಿದುದಾಯಿತು. ಎರಡನೆಯದಾಗಿ ದೇವತೆಗಳು ಭೋಗಿಸುವುದಿಲ್ಲ; ಬಾಲ್ಯಾರಭ್ಯದಿಂದ ಯೌವ್ವನದ ವರೆಗೂ ರಕ್ಷಣೆ ಮಾಡುತ್ತಾರೆಂದು ಹೇಳುವಿರಾದರೆ ಇದೇ ರೀತಿ ಪುರುಷರ ಶರೀರವನ್ನು ವ್ಯಾಪಿಸಿ ಅವರನ್ನೇಕೆ ರಕ್ಷಿಸುವುದಿಲ್ಲ? ಸ್ತ್ರೀಪುರುಷರಿಬ್ಬರ ಶರೀರವು ವೃದ್ಧಿ, ಸ್ಥಿತಿ, ಕ್ಷಯಗಳೆಂಬ ಮೂರವಸ್ಥೆಗಳಿಂದ ಕೂಡಿವೆ ಎಂಬುದನ್ನು ಶಾರೀರಿಕ ತತ್ವಜ್ಞಾನಿಗಳೆಲ್ಲರೂ ಒಪ್ಪಿರುವರು. ಗರ್ಭೋತ್ಪತ್ತಿಯ ಸಮಯದಲ್ಲಿ ಕನ್ಯೆಯರನ್ನು ದೇವತೆಗಳು ಸೇರುವಂತೆ ಪುರುಷರನ್ನೇಕೆ ಸೇರುವುದಿಲ್ಲ? ಸ್ತ್ರೀಯರ ಶರೀರ ವಿಕಾಸತೆಯು ಯಾವ ರೀತಿಯಲ್ಲಿ ಉಂಟಾಗುತ್ತದೋ ಅದೇ ರೀತಿಯಲ್ಲಿ ಪುರುಷರಲ್ಲಿಯೂ ಉಂಟಾಗುತ್ತದೆ.

ಹೀಗಿರುವಲ್ಲಿ ಗಂಧರ್ವನು ಎರಡು ಶರೀರಗಳನ್ನು ಸಹ ಏತಕ್ಕೆ ರಕ್ಷಿಸುವುದಿಲ್ಲ?

ವಿವಾಹ ಸಮಯದಲ್ಲಿ ಕನ್ಯೆ ಮಾತ್ರ ಹೋಮಾಗ್ನಿಯ ಸಮೀಪ ಬಾರದೆ ವರನು ಸಹ ಬರುತ್ತಾನೆ. ಆತನು ಸಹ ಆಕೆಯೊಡನೆ ಯಜ್ಞಕುಂಡದ ಸುತ್ತು ಬರುತ್ತಾನೆ. ನಿಮ್ಮ ಅಭಿಪ್ರಾಯದಂತೆ ಅಗ್ನಿ ದೇವತೆಯೆ ವಧೂವರರಿಬ್ಬರಿಗೂ ಪತಿಯಾಗಬೇಕಲ್ಲವೆ? ಹೀಗೆ ಆಗುವು ದಿಲ್ಲವಾದರೆ ಮತ್ತು ಈ ದೇವತೆಗಳು ಕುಮಾರಿ ಕನ್ಯೆಯರನ್ನೇ ಭೋಗಿಸುತ್ತಾರಾದರೆ ಇದೇ ದೇವತೆಗಳ ದೇವಿಯರು ಕುಮಾರ ರೊಡನೆ ಗರ್ಭಾವಸ್ಥೆಯಲ್ಲಿಯೇ ಭೋಗಪಡೆಯುತ್ತಿರಬೇಕಾಗುವುದು. ಇದನ್ನು ನೀವು ಒಪ್ಪುವುದಾದರೆ ಉತ್ತಮವಾದ ಬ್ರಹ್ಮಚರ್ಯ ವ್ರತೋಪದೇಶವು ವ್ಯರ್ಥವಾಗುವುದು. ಯಾಕಂದರೆ—ನಿಮ್ಮ ದೇವೀ ದೇವತೆಗಳು ಇರುವ ವರೆಗೆ ಕುಮಾರಿ ಮತ್ತು ಕುಮಾರರು ಬ್ರಹ್ಮಚಾರಿ ಗಳಾಗಿರಲು ಸಾಧ್ಯವೇ ಇಲ್ಲ. ಈ ತರದ ಅದ್ಭುತ ಸಿದ್ಧಾಂತಗಳಿಂದ ಮಾನವ ಸಮಾಜವು ಯಾವ ತರದ ಪ್ರಯೋಜನವನ್ನು ಹೊಂದುವು ದೆಂಬುವುದರ ನಿರ್ಣಯವನ್ನು ವಿಚಾರಶೀಲರಾದ ವಾಚಕರ ವಶಕ್ಕೆ ಬಿಟ್ಟುಕೊಡುವೆವು.

ನಾವು ಈ ಮೊದಲು "ಅಶ್ವಿನೌ" ಶಬ್ದದ ಅರ್ಥವನ್ನು ವಿವರಿ ಸುವ ಬಗ್ಗೆ ಋಗ್ವೇದದ ಹತ್ತನೇ ಮಂಡಲದ 85ನೇ ಸೂಕ್ತದ ಒಂಭತ್ತನೆಯ ಮಂತ್ರದಲ್ಲಿ ಕೊಟ್ಟಿರುವ ಸೋಮ, ಗಂಧರ್ವಾದಿ ಹೆಸರುಗಳು ಪತಿಗಳ ಸಂಜ್ಞೆಗಳೇ ಆಗಿರುತ್ತವೆ. ಅದರಲ್ಲಿ ಸ್ಪಷ್ಟವಾಗಿ ಬರೆದಿರುವುದೇನೆಂದರೆ: "ಸೋಮೋ ವಧೂಯುರಭವತ್." "ಸೋಮ" ವಧುವನ್ನು ಇಚ್ಛಿಸುವಂತಹವನಾದನು; ಸೂರ್ಯಯತ್ಪತ್ಯೇ ಶಂಸಂ ತೀಮ್ ಮನಸಾ ಸವಿತಾ ದದಾತ್"

ಅರ್ಥಾತ್:—"ಪತಿಂಕಾಮಯಮಾನಾಂ । ಪರ್ಯಾಪ್ತಯೌವ್ವನಾ ಮಿತ್ಯರ್ಥ" (ಇತಿ ಸಾಯಣ ಭಾಷ್ಯ.)

ಪತಿಯನ್ನು ಇಚ್ಛಿಸುವ ಯುವತಿ ಕನ್ಯೆಯನ್ನು ಸವಿತನು ಸೋಮದೇವನಿಗೆ ಕೊಟ್ಟನು. ನಿಮ್ಮ ಅಭಿಪ್ರಾಯದಂತೆ ಯೌವ್ವನದಲ್ಲಿ ಗಂಧರ್ವನ ಅಧಿಕಾರ; ಆದರೆ ಈ ಮಂತ್ರದಲ್ಲಿ ಸೋಮದೇವನ ಕುರಿತು ಹೇಳಿರುತ್ತದೆ. ಇದು ಹೊರತು "ಸೋಮ" ಶಬ್ದಕ್ಕೆ "ವರ"ನೆಂಬ ಅರ್ಥವನ್ನು ಸಾಯಣರು ಸರಿಯಾಗಿ ಮಾಡಿರುತ್ತಾರೆ.

(ಸೋಮಾಯ ವರಾಯ ಇತಿ ಸಾಯಣಃ)

ಈ ಪ್ರಮಾಣವು "ಸೋಮ" ಎಂದರೆ ಸ್ತ್ರೀಯ ಪ್ರಥಮಪತಿಯೆಂಬ ನಮ್ಮ ಅಭಿಪ್ರಾಯವೇ ಸ್ಪಷ್ಟವಾಗುತ್ತದೆ. ಇದು ಸಿದ್ಧವಾದ ಮೇಲೆ ಗಂಧರ್ವ ಮತ್ತು ಅಗ್ನಿ ಇವರು ದ್ವಿತೀಯ ಮತ್ತು ತೃತೀಯ ಪತಿಗಳಾಗುವುದರಲ್ಲಿ ಸಂದೇಹವೇನು?

ಅಘೋರ ಚಕ್ಷುರಪತಿಘ್ನ್ಯೇಧಿ ಶಿವಾ ಪಶುಭ್ಯಃ ಸುಮನಾಃ ಸುವರ್ಚಾಃ ।
ವೀರ ಸೂರ್ದೇವೃಕಾಮಾ ಸ್ಯೋನಾ ಶಂನೋ ಭವ ದ್ವಿಪದೇ ಶಂ ಚತುಷ್ಪದೇ ॥

ಋ. ೧೦, ಅ. ೮೫–೪೪.

ಭಾವಾರ್ಥ:—"ಶುಭಗುಣಯುಕ್ತರಾದ ವೀರಪುತ್ರರನ್ನುಂಟು ಮಾಡುವವಳಾಗಿದ್ದು ಎರಡನೆಯ ಪತಿಯನ್ನು ಇಚ್ಛಿಸುವವಳು ಶಾಂತದೃಷ್ಟಿಯುಳ್ಳವಳೂ, ಪತಿಯನ್ನು ವಿರೋಧಿಸದವಳೂ, ಮಂಗಲಕಾರಿಣಿಯೂ, ನಮಗೂ ಎಲ್ಲಾ ಪ್ರಾಣಿಗಳಿಗೂ ಸುಖವನ್ನುಂಟು ಮಾಡುವವಳೂ, ಪ್ರಸನ್ನಚಿತ್ತಳೂ ಆಗಿರಲಿ."

ಈ ಮಂತ್ರದ "ದೇವೃಕಾಮಾ" ಎಂಬುವುದು, ಅಗತ್ಯವಿದ್ದಲ್ಲಿ ಸ್ತ್ರೀಯರಿಗೆ ಪುನರ್ವಿವಾಹವನ್ನು ಮಾಡಬೇಕೆಂಬುವುದಾಗಿ ಸೂಚಿಸುತ್ತದೆ. ಇದೇ ಮಂತ್ರದ ರೂಪಾಂತರವು ಅಥರ್ವವೇದದಲ್ಲಿ ಬಂದದೆ.

ಅದೇವೃಘ್ನ್ಯ ಪತಿಘ್ನೀ ಹೈಧಿಶಿವಾಪಶುಭ್ಯಃ ಸುಯಮಾ ಸುವರ್ಚಾಃ ।

ಪ್ರಜಾವತೀ ವೀರಸೂರ್ದೇವೃಕಾಮಾಸ್ಯೋನೇಮಮಗ್ನಿಂ
ಗಾರ್ಹಪತ್ಯಂ ಸಪರ್ಯ ॥
(ಅಥರ್ವ ಕಾಂ. ೧೪, ಸೂ. ೨ ಮಂ. ೧೮.)

ಅರ್ಥ:-"ಎಲೈ ಸ್ತ್ರೀಯೆ! ದೇವರನಿಗೆ ಮತ್ತು ಪತಿಗೆ ದುಃಖವನ್ನುಂಟುಮಾಡದೆ ನೀನು ಗೃಹಸ್ಥಾಶ್ರಮದಲ್ಲಿ ಪಶುಗಳಿಗೆ ಸುಖವನ್ನುಂಟುಮಾಡುವವಳೂ, ಒಳ್ಳೇ ನಿಯಮದಲ್ಲಿ ನಡೆಯುವವಳೂ, ಉತ್ತಮಗುಣಯುಕ್ತವಾದ ಸಂತಾನದವಳೂ, ಶೂರ, ವೀರ ಪುತ್ರರನ್ನುಂಟುಮಾಡುವವಳೂ, ದೇವರನನ್ನು ಇಚ್ಛಿಸುವವಳೂ, ಸುಖಿಜೀವಿಯೂ ಆಗಿರು. ಈ ಗೃಹಪತಿಯು ಅಂದರೆ ಗೃಹಸ್ಥಾಶ್ರಮದ ಯಜಮಾನನೂ ಹೋಮಾದಿ ಯಜ್ಞಮಾಡಲಿಕ್ಕೆ ಯೋಗ್ಯವಾದ ಅಗ್ನಿಯನ್ನು ಪೂಜಿಸುತ್ತಾ (ಶೇಖರಿಸುತ್ತಾ) ಬರಲಿ.

ಈ ಮಂತ್ರದಲ್ಲಿಯೂ "ದೇವೃಕಾಮಾ" ಶಬ್ದ ಬಂದಿದೆ. ಇದೇ ಅಧ್ಯಾಯದಲ್ಲಿ ಕೊಟ್ಟಿರುವ ಋಗ್ವೇದ ಮಂತ್ರದ "ದೇವರ" ಶಬ್ದವೂ ಇದೇ ಅರ್ಥದಲ್ಲಿದೆ. ಪ್ರಾಚೀನ ವೇದಭಾಷ್ಯದಂತೆ "ದೇವರ" ಅಂದರೆ ದ್ವಿತೀಯ ವರ ಎಂಬುದನ್ನು ಅಲ್ಲಿ ನಾವು ಹೇಗೆ ವಿವರಿಸಿದ್ದೇವೋ ಅದು ಈ ಮಂತ್ರದಲ್ಲಿ ಮತ್ತಷ್ಟು ಸ್ಪಷ್ಟವಾಗುತ್ತದೆ. ಆದುದರಿಂದ ಈ ಎರಡು ಪ್ರಮಾಣಗಳೂ ವಿಧವೆಯರ ಪುನರ್ವಿವಾಹಕ್ಕೆ ಆಜ್ಞೆಯನ್ನೀಯುತ್ತವೆ ಎಂಬುವುದರಲ್ಲಿ ಸಂದೇಹವಿಲ್ಲ.

ಪ್ರಶ್ನೆ:—ಈ ಮಂತ್ರವು ವಿವಾಹದ ಕುರಿತು ಬರೆಯಲ್ಪಟ್ಟಿದೆ ಹೊರತು ಪುನರ್ವಿವಾಹದ ಪ್ರಮಾಣವಾಗಿಲ್ಲ.

ಉತ್ತರ:—ಇಲ್ಲಿ "ದೇವರ" ಮತ್ತು "ಕಾಮಾ" ಎಂಬ ಎರಡು ಶಬ್ದಗಳಿವೆ. ಇವುಗಳ ಸಂಯೋಗದಿಂದಲೇ "ದೇವೃಕಾಮಾ" ಎಂಬ ಸಮಾಸ ಉಂಟಾಯಿತು. ಎರಡನೆಯ ಶಬ್ದವು ಪತಿಯ ತಮ್ಮನೊಡನೆ ಸಂಸರ್ಗದ ಇಚ್ಛೆಯನ್ನು ಮಾಡುವ ಅರ್ಥವನ್ನು ಸೂಚಿಸುತ್ತದೆ. ಇದರಿಂದ ಕೆಳಗಿನ ಅಭಿಪ್ರಾಯಗಳು ವ್ಯಕ್ತವಾಗುತ್ತವೆ.

1. ಪತಿಯ ಜೀವಿತದಲ್ಲಿ ಅವನ ಸಹೋದರರೊಡನೆ ಸಂಸರ್ಗದ ಇಚ್ಛೆ ಮಾಡುವವಳು;

2. ಪತಿಯ ಮರಣಾನಂತರ ಅವನ ತಮ್ಮನೊಡನೆ ಸಂಯೋಗವನ್ನು ಬಯಸುವವಳು;

3. ಬೇರೆ ಪತಿಯನ್ನು ಆಶಿಸುವವಳು.

ಮೊದಲನೆಯ ಅರ್ಥವು ಎರಡು ಪಕ್ಷದವರಿಗೂ ತ್ಯಾಜ್ಯನೀಯವಾಗಿರುತ್ತದೆ. ಯಾಕಂದರೆ ಪತಿಯು ಜೀವಿಸಿರುವಾಗ ಇತರ ಪುರುಷರೊಡನೆ ಸಂಸರ್ಗಮಾಡುವುದು ಅಧರ್ಮವು. ಆದುದರಿಂದ ಈ ಅರ್ಥವು ಆ ಮಂತ್ರಕ್ಕೆ ಸರಿಹೋಲುವುದಿಲ್ಲ. ಎರಡನೆಯ ಮತ್ತು ಮೂರನೆಯ ಅರ್ಥಗಳು ವಿಧವಾ ವಿವಾಹ ಅಥವಾ ನಿಯೋಗದ ವಿಧಿಗಳನ್ನೇ ಸೂಚಿಸುತ್ತವೆ.

ಪ್ರಶ್ನೆ:—ನಿಮ್ಮ ಅಭಿಪ್ರಾಯದಂತೆ "ದೇವೃಕಾಮಾ" ಶಬ್ದದ ಅರ್ಥದಂತೆ "ಪುತ್ರಕಾಮಾ" ಅಂದರೆ ಪುತ್ರನೊಡನೆ ಸಂಸರ್ಗ ಮಾಡುವವಳು ಎಂದರ್ಥವಾಗುವುದಿಲ್ಲವೇ?

ಉತ್ತರ:—ಹೀಗೆಂದಿಗೂ ಆಗಲಿಕ್ಕಿಲ್ಲ. ಯಾವಾಕೆಯು ಪುತ್ರನನ್ನು ಪಡೆಯಬೇಕೆಂಬ ಇಚ್ಛೆಯಿಂದಿರುತ್ತಾಳೋ ಅವಳಿಗೆ ಮಾತ್ರ "ಪುತ್ರಕಾಮಾ" ಶಬ್ದವು ತಗಲುತ್ತದೆ. "ದೇವೃಕಾಮಾ" ಎಂಬುವುದಕ್ಕೆ ನಮ್ಮರ್ಥವು ಸರಿಯಿಲ್ಲವಾದರೆ ನೀವು ಯಾವ ಅರ್ಥವನ್ನು ಮಾಡುವಿರಿ?

ಪ್ರಶ್ನೆ:—ವಿವಾಹ ಸಮಯದಲ್ಲಿ ಭವಿಷ್ಯದ ಎರಡನೆಯ ಪತಿಯನ್ನು ಇಚ್ಛಿಸುವುದರಿಂದ ಪ್ರಥಮ ಪತಿಯ ಮೃತ್ಯುವನ್ನೇ ಇಚ್ಛಿಸಿದಂತಾಗುವುದಿಲ್ಲವೇ?

ಉತ್ತರ:—ಶುಭಾಶುಭದ ವಿಚಾರವು ಧರ್ಮಾಧರ್ಮದ ಅಂತರ್ಗತವಾಗಿರುತ್ತದೆ. ಯಾವುದು ಧರ್ಮವೋ ಅದೇ ಶುಭವು; ಯಾವುದು ಅಧರ್ಮವೋ ಅದೇ ಅಶುಭವು. ವಿವಾಹ ಸಮಯದಲ್ಲಿ

ವರನು ಈ ಮಂತ್ರವನ್ನು ಹೇಳುವಾಗ ತನ್ನ ಪತ್ನಿಯ ಅಧಿಕಾರದ ವರ್ಣನೆಯನ್ನು ಮಾತ್ರ ಮಾಡುತ್ತಾನೆ. ಅಂದರೆ ನಾನು ಸತ್ತರೆ ನಿನಗೆ ಪುನರ್ವಿವಾಹ ಮಾಡಿಕೊಳ್ಳುವ ಅಧಿಕಾರವಿದೆಯೆಂದು ಹೇಳು ತ್ತಾನೆ. ಇದರಿಂದ ಪತಿಯು ತನ್ನ ಮರಣವನ್ನಿಚ್ಛಿಸುತ್ತಾನೆಂದು ಅರ್ಥವಾಗುವುದಿಲ್ಲ.

ಒಬ್ಬನು ತನ್ನ ಜೀವಮಾನದಲ್ಲಿ ಜೀವವಿಮೆ ಮಾಡಿಕೊಂಡರೆ ಆತನು ತನ್ನ ಮರಣವನ್ನು ಇಚ್ಛಿಸುತ್ತಾನೆಂದು ಹೇಳಲಿಕ್ಕೆ ಸಾಧ್ಯ ವಿದೆಯೇ? ಹುಟ್ಟುವುದು, ಸಾಯುವುದು ವಿಧಾತನಿಂದ ವಿಧಿಸಲ್ಪಟ್ಟ ವಿಧಿಯಾಗಿರುವುದೆಂಬುದನ್ನು ಎಲ್ಲರೂ ತಿಳಿದಿರುವರು. ಇಂತಹ ದೃಶ್ಯಗಳನ್ನು ನಾವು ನೋಡುತ್ತಲೇ ಇದ್ದೇವೆ. ಇಂಗ್ಲೆಂಡಿನ ಪಾರ್ಲಿ ಮೆಂಟಿನವರು ಪ್ರಕೃತದ ರಾಜರ ನಂತರ ಇಂತಹವರೇ ಸಿಂಹಾಸನಕ್ಕೆ ಯೋಗ್ಯರೆಂಬುವುದನ್ನು ನಿರ್ಣಯಮಾಡಿದರೆ ಅವರು ಅರಸನ ಮೃತ್ಯು ವನ್ನು ಬಯಸಿದಂತಾಗುವುದಿಲ್ಲ. ಸ್ವಾಭಾವಿಕವಾದ ಮೃತ್ಯುವನ್ನು ತಪ್ಪಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲ; ಮತ್ತು ಅದು ಯಾವಾಗ ಬರುತ್ತದೆಂಬುದನ್ನು ಸಹ ಯಾರೂ ಹೇಳಲಾರರು. ಆದುದರಿಂದಲೇ ಒಬ್ಬ ಅರಸನು ಜೀವಂತನಾಗಿರುವಾಗಲೆ ಅವನ ಅನಂತರದ ಅಧಿಕಾರಿ ಯನ್ನು ನಿಶ್ಚಯಗೊಳಿಸಿಡುತ್ತಾರೆ. ಸಾಧಾರಣ ಜನರು ಕೂಡ ಇಂಥಾ ವ್ಯವಸ್ಥೆಗಳನ್ನು ಮಾಡುತ್ತಾರೆ.

ಸ್ತ್ರೀಯರ ಸ್ವಾಭಾವಿಕವಾದ ಅಧಿಕಾರಗಳನ್ನು ಅಪಹರಿಸುವ ಹಕ್ಕು ಪತಿಗೆ ಇಲ್ಲವೆಂಬುದನ್ನು ಮೇಲಿನ ವೇದಮಂತ್ರವು ಸ್ಪಷ್ಟ ಗೊಳಿಸುತ್ತದೆ. ಸ್ತ್ರೀಪುರುಷರ ಅಧಿಕಾರ ಮತ್ತು ಕರ್ತವ್ಯಗಳನ್ನು ಗೊತ್ತುಪಡಿಸುವಂತಹ ಮಂತ್ರವನ್ನು ಹೇಳುವುದರಿಂದಲೂ ಅದರಂತೆ ಪ್ರತಿಜ್ಞೆ ಮಾಡುವುದರಿಂದಲೂ ಯಾವ ತರದ ಅಮಂಗಲವೂ ಉಂಟಾಗಲಾರದು. ಪ್ರಾಚೀನಕಾಲದ ವಿವಾಹವೆಂಬುವುದು ಈ ಕಾಲದಲ್ಲಾಗುವ ವಿವಾಹಗಳಂತೆ ಆಡಂಬರದ ಒಂದು ಉತ್ಸವವಾಗಿರ

ಲಿಲ್ಲ. ನ್ಯಾಯ ಮತ್ತು ಧರ್ಮಯುಕ್ತವಾದ ಒಂದು ವಿಶೇಷ ವ್ಯವಸ್ಥೆಯಾಗಿರುತ್ತದೆ.

ಅಥರ್ವವೇದದ ಹದಿನೆಂಟನೆಯ ಕಾಂಡ ಮೂರನೆಯ ಸೂಕ್ತ ಒಂದನೆಯ ಮಂತ್ರದ ತಾತ್ಪರ್ಯವೇನೆಂದರೆ:—

೧. ಪತಿಯ ಮರಣಾನಂತರ ಪತ್ನಿಯು ತನಗೆ ಭೋಜನ ವಸ್ತ್ರಾದಿಗಳನ್ನು ಕೊಟ್ಟು ತನ್ನಲ್ಲಿ ಉತ್ತಮ ಸಂತಾನವನ್ನು ಉಂಟು ಮಾಡುವ ಎರಡನೆಯ ಪತಿಯ ಸಮೀಪ ಹೋಗಬೇಕು. ಇದೇ ಅಭಿಪ್ರಾಯವನ್ನು ತೈತ್ತಿರೀಯ ಅರಣ್ಯಕದಲ್ಲಿಯೂ ವರ್ಣಿಸಿದೆ.

ಇಯಂ ನಾರೀ ಪತಿಲೋಕಂ ವೃಣಾನಾ ನಿಪದ್ಯತ ಉಪತ್ವಾ
ಮರ್ತ್ಯಪ್ರೇತಮ್ ।
ವಿಶ್ವಂ ಪುರಾಣಮನುಪಾಲಯಂತೀ ತಸ್ಯೈ ಪ್ರಜಾಂದ್ರವಿಣಂ
ಚೇಹಧೇಹಿ ॥

ತೈತ್ತಿರೀಯ ಅ. ೬, ೧–೧೩.

ಸಾಯಣಭಾಷ್ಯ:—"ಎಲೈ ಮನುಷ್ಯನೇ! ಮೃತಪಟ್ಟ ಯಾವ ಪತಿಯ ಸ್ತ್ರೀಯು ನಿನಗೆ ಭಾರ್ಯೆಯಾಗಿರುವಳೋ ಅವಳು "ಪತಿಲೋಕ" ಅಂದರೆ ಪತಿಗೃಹವನ್ನು ಇಚ್ಛಿಸುತ್ತಾ ನಿನ್ನನ್ನು ಹೊಂದುತ್ತಾಳೆ. ಅವಳು ಹೇಗಿದ್ದಾಳೆ? ಅನಾದಿ ಧರ್ಮವಾದ ಸ್ತ್ರೀ ಧರ್ಮವನ್ನು ಸರಿಯಾಗಿ ಪಾಲಿಸುತ್ತಿರುವವಳು; ಆ ಧರ್ಮಪತ್ನಿಗೆ ಈ ಲೋಕದಲ್ಲಿ ವಾಸಿಸಲಿಕ್ಕೆ ನೀನು ಆಜ್ಞೆಯನ್ನಿತ್ತು ಪುತ್ರಸಂತಾನ ಮತ್ತು ಧನಸಂಪತ್ತನ್ನು ಕೊಡು."

ಸಾಯಣರ ಅಭಿಪ್ರಾಯವು ಕೂಡ ವಿಧವೆಯ ಪುನರ್ವಿವಾಹವನ್ನು ಸರಿಯಾಗಿ ಸಮರ್ಥಿಸುತ್ತದೆ; ಈ ಸೂತ್ರದಲ್ಲಿ ಬಂದಿರುವ "ಇಹ" ಶಬ್ದದ ಅರ್ಥವನ್ನು ಸಾಯಣರು ಈ ಲೋಕದ ಕುರಿತು ಮಾಡಿರುವರೇ ಹೊರತು ಪರಲೋಕದ ಕುರಿತಲ್ಲ.

**ಉದೀರ್ಷ್ವ ನಾರ್ಯಭಿ ಜೀವಲೋಕಂ ಗತಾಸು ಮೇತ
ಮುಪಶೇಷ ಏಹಿ ।
ಹಸ್ತಗ್ರಾಭಸ್ಯ ದಧಿಷೋಸ್ತವೇದಂ ಪತ್ಯುರ್ಜನಿತ್ವ ಮಭಿಸಂ
ಬಭೂವ ॥**

**ಅಥರ್ವ ಕಾ. ೧೮. ಸೂ ೩. ಮಂ. ೨. ಮತ್ತು ಋಗ್ವೇದ ಮಂ. ೧೦. ಸೂ. ೧೮. ಮಂ. ೮.**

ಸಾಯಣಭಾಷ್ಯ:—"ಎಲೈ ಮೃತ ಪತಿಯ ಪತ್ನಿ! ಜೀವಿತರಾಗಿರುವ ಪುತ್ರಪೌತ್ರಾದಿಗಳಿರುವ ಯಾವ ಲೋಕ ಅಂದರೆ ಮನೆ ಇದೆಯೋ ಅದನ್ನು ಸ್ಮರಿಸಿ ಈ ಸ್ಥಳದಿಂದ ಏಳು! ಪ್ರಾಣಾಂತ್ಯವಾದ ಪತಿಯ ಸಮೀಪ ನೀನು ಮಲಗುತ್ತಿ; ಅಲ್ಲಿಂದ ಬಾ. ಯಾವಾತನು ಪಾಣಿಗ್ರಹಣ ಮಾಡಿಕೊಳ್ಳಲು ಮತ್ತು ಗರ್ಭಾದಾನ ಮಾಡಲು ಪತಿಯ ಸಂಬಂಧದಿಂದ ಬಂದಿರುವನೋ ಅಂತಹವನಿಗೆ ಪತ್ನಿಯಾಗುವ ವಿಚಾರವನ್ನು ದೃಢಗೊಳಿಸಿ ಆತನನ್ನು ಅನುಸರಿಸು!"

ಇದೇ ಮಂತ್ರದ ರೂಪಾಂತರವು ತೈತ್ತಿರೀಯ ಅರಣ್ಯಕ ೬, ೧, ೧೪ರಲ್ಲಿ ಬಂದದೆ. ಅದರ ಕುರಿತು ಸಾಯಣರು ಕೊಟ್ಟಿರುವ ಅರ್ಥವನ್ನೆ ಇಲ್ಲಿ ವಿವರಿಸುತ್ತೇವೆ.

"ಎಲೈ ನಾರೀ! ನೀನು ಈ ಮೃತಪತಿಯ ಸಮೀಪ ಮಲಗಿರುವೆ. ಅವನ ಹತ್ತಿರದಿಂದ ಏಳು ಜೀವಿತ ಪುರುಷರನ್ನು ಸ್ಮರಿಸಿ, ಬಾ ಮತ್ತು ನೀನು ಕೈ ಹಿಡಿಯುವ ಅಂದರೆ ಪುನರ್ವಿವಾಹದ ಇಚ್ಛೆ ಮಾಡುವ ಈ ಪತಿಯನ್ನು ಪತ್ನಿಭಾವನಾಯುಕ್ತಳಾಗಿ, ಒಳ್ಳೆಯ ರೀತಿಯಿಂದ ದೊರಕಿಸಿಕೋ."

ಈ ಕಾಲದ ಸಂಪ್ರದಾಯವಾದಿಗಳಲ್ಲಿ ಕಡುಮತಾಭಿಮಾನಿಗಳಾದವರೂ, ಹಗಲಿರುಳು ವಿಧವಾವಿವಾಹವನ್ನು ಶತಪ್ರಯತ್ನದಿಂದ ವಿರೋಧಿಸುವವರೂ ಸಹ ಸಾಯಣರ ಈ ಅಭಿಪ್ರಾಯವನ್ನು ಒಪ್ಪುತ್ತಾರೆ. ಆದುದರಿಂದಲೇ ವಿಧವಾವಿವಾಹಕ್ಕೆ ಸಾಯಣರ ಅಭಿಪ್ರಾಯವನ್ನೇ ನಾವು ಕೊಟ್ಟಿರುವೆವು. ಅವರು ಈ ಮಂತ್ರದಲ್ಲಿ

"ಪುನರ್ವಿವಾಹೇಚ್ಛು" ಶಬ್ದದ ಪ್ರಯೋಗಮಾಡಿ ಎಲ್ಲಾ ತರದ ಸಂದೇಹಗಳನ್ನು ದೂರಮಾಡಿರುವರು.

ಪ್ರಶ್ನೆ:—ಈ ತರದ ವರ್ತನೆಯು ಅತ್ಯಂತ ನಿರ್ದಯತನದ್ದಾಗಿ ರುತ್ತದೆ. ಒಂದೆಡೆ ಪತಿಯು ಸತ್ತುಬಿದ್ದಿದ್ದಾನೆ; ಇನ್ನೊಂದೆಡೆ ಆತನ ಪತ್ನಿಯು ರೋದಿಸುತಿದ್ದಾಳೆ; ಈ ಸ್ಥಿತಿಯಲ್ಲಿ ನಾವು ಅವಳನ್ನು ಕರೆದು ಎರಡನೆಯ ಪತಿಯನ್ನು ಸೇರುವಂತೆ ಹೇಳುವುದು ಕ್ರೂರತನ ವಲ್ಲವೆ? ಪತಿವ್ರತಾ ಧರ್ಮಕ್ಕೆ ಇದು ಯೋಗ್ಯವೇ?

ಉತ್ತರ:—"ಮಲಗುವುದು", ಮತ್ತು "ಬಿದ್ದುಕೊಳ್ಳುವುದು" ಈ ಶಬ್ದಗಳನ್ನು ಯಾರೊಬ್ಬರೂ ಸ್ವತಃ ಸೇರಿಸಿಕೊಂಡದ್ದಿಲ್ಲ. ವೇದ ಮಂತ್ರದಲ್ಲಿಯೆ "ಉಪಶೇಷೇ" ಮಂತ್ರವು ಸ್ಪಷ್ಟವಾಗಿ ಕಂಡುಬರು ತ್ತದೆ. ಸಾಯಣರೆ ಅದಕ್ಕೆ ಈ ಅರ್ಥವನ್ನು ಮಾಡಿರುವರು; ನೀವು ವೇದವನ್ನು ನಂಬುವುದಿಲ್ಲವಾದರೆ ನಮ್ಮ ಅಭಿಪ್ರಾಯವನ್ನು ಸ್ವೀಕ ರಿಸುವುದೇ ಬೇಡ; ನಂಬುವುದಾದರೆ ಇದೇ ಅರ್ಥವನ್ನು ಮಾಡ ಬೇಕಾದೀತು; ಇನ್ನುಳಿದ ನಿಮ್ಮ ಆಕ್ಷೇಪವೆಂದರೆ ಅಸಭ್ಯತೆ; ಇದ ರಲ್ಲಿಯೂ ನೀವು ಅನರ್ಥವನ್ನು ಮಾಡುತ್ತೀರಿ. ಮೃತಪತಿಯ ಅಗ್ನಿ ಸಂಸ್ಕಾರದ ಮೊದಲೆ ವಿಧವೆಗೆ ಇನ್ನೊಬ್ಬ ಪತಿಯನ್ನು ಮಾಡಿ ಕೊಳ್ಳಲು ಇಲ್ಲಿ ಹೇಳುವುದಲ್ಲ; ಅವಳ ದುಃಖವನ್ನು ನಿವಾರಿಸುವುದ ಕ್ಕಾಗಿ ಪೂರ್ವಾಚಾರ್ಯರುಗಳು ವಿಧಿಸಿರುವ ನಿಯಮವನ್ನು ಮಾತ್ರ ಅವಳೊಡನೆ ಹೇಳಲಾಗುತ್ತದೆ.

ಯಾ ಪೂರ್ವಂ ಪತಿಂ ವಿತ್ವಾಥಾನ್ಯಂ ವಿಂದತೇ ಪರಮ್ ।
ಪಂಚೌದನಂ ಚತಾವಜಂ ದದಾತೋ ನವಿಯೋಷತಃ ॥
ಅಥರ್ವ, ಕಾಂ. ೯, ಅನು. ೩, ಸೂ. ೫, ಮಂ. ೧೭.

ಸಮಾನ ಲೋಕೋ ಭವತಿ ಪುನರ್ಭವಾ ಪರಃ ಪತಿಃ ।
ಯೋಽಜಂ ಪಂಚೌದನಂ ದಕ್ಷಿಣಾ ಜ್ಯೋತಿಷಂ ದದಾತಿ ॥
ಅಥರ್ವ ಕಾಂ. ೯, ಸೂ. ೫, ಮ. ೨೮.

ತಾತ್ಪರ್ಯ:-"ಯಾವ ಸ್ತ್ರೀಯು ಮೊದಲೊಮ್ಮೆ ಪತಿಯನ್ನು ಪಡೆದು ಆ ಮೇಲೆ ಎರಡನೆಯವನನ್ನು ದೊರಕಿಸಿಕೊಳ್ಳುತ್ತಾಳೋ ಅವರಿಬ್ಬರೂ ಪಂಚಭೂತಗಳಿಗೆ ಅಧಿಪತಿಯಾದ ಪರಮಾತ್ಮನಿಗೆ ಅರ್ಪಿತರಾಗುತ್ತಾರೆ. ಅವರು ಒಬ್ಬರನ್ನೊಬ್ಬರು ಅಗಲದಿರಲಿ; ಪಂಚಭೂತಗಳನ್ನು ವಶೀಕರಿಸಿಕೊಂಡಿರುವ ಪರಮಾತ್ಮನು ತನ್ನ ದಾನಕ್ರಿಯೆಯಾಗಿದ್ದ ಜ್ಯೋತಿಯನ್ನು ಯಾರಿಗೆ ಕೊಡುತ್ತಾನೋ ಅಂತಹ ಪತಿಯು ತನ್ನೊಡನೆ ಪುನರ್ವಿವಾಹ ಮಾಡಿಕೊಂಡ ಸ್ತ್ರೀಯಲ್ಲಿ ಸಮಾನತೆಯಿಂದಿರುತ್ತಾನೆ."

ಒಬ್ಬ ಪತಿಯ ಅನಂತರ ಇನ್ನೊಬ್ಬನನ್ನು ಸ್ವೀಕರಿಸಬಹುದು; ಅವರು ಒಬ್ಬರನ್ನೊಬ್ಬರು ಅಗಲಿರಕೂಡದು; ಪರಮಾತ್ಮನನ್ನು ಸ್ಮರಿಸುತ್ತ ಪರಸ್ಪರ ಪ್ರೇಮದಿಂದಿರಬೇಕು; ಯಾವ ಪುರುಷನು ಪುನರ್ವಿವಾಹ ಮಾಡಿಕೊಳ್ಳುತ್ತಾನೋ, ಅವನು ಇತರ ಪುರುಷರಿಗಿಂತ ನೀಚ ತರಗತಿಯವನೆಂಬುದಾಗಿ ಎಂದಿಗೂ ಎಣಿಸಲ್ಪಡಲಾರನು; ಯಾಕಂದರೆ ಪುನರ್ವಿವಾಹವೆಂಬುವುದು ತಿರಸ್ಕರಣೀಯವಾದುದಲ್ಲ ಇತ್ಯಾದಿ ಅಭಿಪ್ರಾಯಗಳು ಮೇಲಿನ ಮಂತ್ರಗಳಿಂದ ವಿದಿತವಾಗುತ್ತವೆ.

ವಾಚಕಬಂಧುಗಳೇ! ವೇದಗಳ ಅನೇಕ ಪ್ರಮಾಣಗಳನ್ನು ತಮ್ಮ ಮುಂದಿಟ್ಟು ವಿಧವಾ ವಿವಾಹವು ಶಾಸ್ತ್ರವಿರುದ್ಧವಲ್ಲವೆಂಬದನ್ನು ಸಿದ್ಧಪಡಿಸಿದ್ದಾಯಿತು. ಮುಂದಕ್ಕೆ ಸ್ಮೃತಿಗಳ ಆಧಾರವನ್ನು ಹನ್ನೊಂದನೆಯ ಅಧ್ಯಾಯದಲ್ಲಿ ವಿವರಿಸುವ ಪ್ರಯತ್ನವನ್ನು ಕೈಕೊಳ್ಳುತ್ತೇವೆ.



ಫಲ್ಲವೇ? ಈ ರೀತಿಯಲ್ಲಿರುವ ಸ್ತ್ರೀಯರಿಗಿಂತ ಆಜನ್ಮಪರ್ಯಂತ ಬ್ರಹ್ಮಚಾರಿಣಿಯಾಗಿರುವ ಸ್ತ್ರೀಯರು ಉತ್ತಮವರ್ಗಕ್ಕೆ ಸೇರಿರುವರು. ಆದುದರಿಂದ ಇಂದ್ರಿಯನಿಗ್ರಹವನ್ನು ಮಾಡಲಸಮರ್ಥರಾದ ಮತ್ತು ಜೀವನಸ್ವಾತಂತ್ರ್ಯವಿಲ್ಲದ ವಿತಂತುಗಳು ಆಚಾರಭ್ರಷ್ಟರಾಗದಂತೆ ಅವರಿಗೆ ಪುನರ್ವಿವಾಹಮಾಡಿಕೊಡುವುದು ಅತ್ಯಂತ ಶ್ರೇಯಸ್ಕರವು

ಪ್ರಶ್ನೆ:—ವಿಧವಾವಿವಾಹವನ್ನು ಸಮರ್ಥಿಸುವ ಶ್ಲೋಕವು ಪಾರಾಶರ ಸ್ಮೃತಿಯ ಮೂಲಗ್ರಂಥದಲ್ಲಿಲ್ಲ. ಇದನ್ನು ಇತ್ತೀಚೆಗಿನ ವಿಧವಾವಿವಾಹ ಪ್ರಚಾರಕರು ಯಾರೋ ಸೇರಿಸಿದ್ದಾಗಿರಬೇಕು.

ಉತ್ತರ:— ನಿಮ್ಮ ಈ ಅಭಿಪ್ರಾಯವು ಅನುಚಿತವಾದುದು. ಏತಕ್ಕೆಂದರೆ ಈ ಶ್ಲೋಕವನ್ನು ನಾವು ಮುಂಬ್ಯಾಯ ವೆಂಕಟೇಶ್ವರ ಮುದ್ರಣಾಲಯದಲ್ಲಿ ಮುದ್ರಿತವಾದ ಪಾರಾಶರ ಸ್ಮೃತಿಯಿಂದ ತೆಗೆದಿರುತ್ತೇವೆ. ಅಲ್ಲಿ ಈಗಿನ ನವೀನ ವಿಚಾರಗಳ ಸ್ಪರ್ಶವು ಕೂಡಾ ಆಗುವುದಿಲ್ಲ. ಇದುಹೊರತು ವಿಧವಾವಿವಾಹದ ಪ್ರಶ್ನೆಯನ್ನು ಎಲ್ಲಾದಕ್ಕಿಂತ ಮೊದಲು ಬಂಗಾಳದಲ್ಲಿ ಪ್ರಸಿದ್ಧ ವಿದ್ವಾಂಸರಾದ ಪಂಡಿತ ಈಶ್ವರಚಂದ್ರ ವಿದ್ಯಾಸಾಗರರೇ ಎತ್ತಿಹಿಡಿದರು. ಈ ಕುರಿತು ಅವರು ಸರಕಾರದ ಪರವಾಗಿ ಒಂದು ಕಾನೂನನ್ನು ಮಾಡಿಸಿದ್ದರು. ಅದನ್ನು ನಾವು ೧೪ನೇ ಅಧ್ಯಾಯದಲ್ಲಿ ವಿವರಿಸುವೆವು. ಅಂದಿನಿಂದ ಎಲ್ಲಾ ಪಂಡಿತ ಮಂಡಳವು ಇದನ್ನು ವಿರೋಧಿಸುತ್ತಿದೆ. ಇದು ಹೊರತು ಸಂಸ್ಕೃತ ಗ್ರಂಥಗಳ ಪ್ರಾಮುಖ್ಯ ಮುದ್ರಣಾಲಯಗಳೆಲ್ಲವೂ ಸಾಂಪ್ರದಾಯವಾದಿಗಳ ಅಧೀನದಲ್ಲೇ ಇವೆ. ಹೀಗಿರುವಲ್ಲಿ ಪಾರಾಶರ ಸ್ಮೃತಿಯಲ್ಲಿ ವಿಧವಾವಿವಾಹವನ್ನು ಸಮರ್ಥಿಸುವ ಶ್ಲೋಕವನ್ನು ಪ್ರಚಾರಕರು ಸೇರಿಸುವುದಾದರೂ ಹೇಗೆ? ವಿಧವಾವಿವಾಹಕ್ಕೆ ಬೇಕಾಗುವ ಪ್ರಮಾಣಗಳು ಪ್ರಾಚೀನಗ್ರಂಥಗಳಲ್ಲಿ ಸಿಕ್ಕಿದಷ್ಟು ಈಗಿನವುಗಳಲ್ಲಿ ದೊರೆಯುವುದಿಲ್ಲ. ಇನ್ನು ಕೆಲವರು ಈ ತರದ ಪ್ರಮಾಣಗಳನ್ನು ಸ್ಮೃತಿಸೂತ್ರಾದಿಗಳಿಂದ ತೆಗೆದುಹಾಕಬೇಕೆಂದಿದ್ದಾರೆ. ಈ

ಪ್ರಕಾರ ವಿಧವಾವಿವಾಹದ ವಿರೋಧಿಗಳು ತಮ್ಮ ಸ್ವಾರ್ಥಸಿದ್ಧಿ ಗೋಸ್ಕರ ವಿರುದ್ಧವಾದ ಶ್ಲೋಕಗಳನ್ನು ರಚಿಸಿ ಅಲ್ಲಲ್ಲಿ ಸೇರಿಸಿದ್ದಾರೆ ಹೊರತು ಮೂಲಗ್ರಂಥಗಳಲ್ಲಿ ಇಂಥಾ ಪರಸ್ಪರ ವಿರೋಧಭಾವಗಳಿಲ್ಲ. ವಿಧವೆಯರ ಪುನಃಸಂಸ್ಕಾರಕ್ಕೆ ಬೇಕಾಗುವ ಇನ್ನೂ ಕೆಲವು ಸ್ಮೃತಿಗಳ ಪ್ರಮಾಣಗಳನ್ನು ವಾಚಕರ ಮುಂದಿಡುತ್ತೇವೆ.

ಕನ್ಯೈವಾಕ್ಷತಯೋನಿರ್ವಾ ಪಾಣಿಗ್ರಹಣದೂಷಿತಾ ।
ಪುನರ್ಭೂಃ ಪ್ರಥಮಾ ಪ್ರೋಕ್ತಾ ಪುನಃಸಂಸ್ಕಾರಮರ್ಹತಿ ॥

ನಾರದಸ್ಮೃತಿ, ಅ. ೧೨, ಶ್ಲೋ. ೪೬.

ಅರ್ಥ:—ಕನ್ಯೆಯಾಗಿರಲಿ ಅಥವಾ ಅಕ್ಷತಯೋನಿಯಾಗಿರಲಿ ಕೇವಲ ಪಾಣಿಗ್ರಹಣ ಮಾತ್ರವಾಗಿದ್ದ ಬಾಲವಿಧವೆಗೆ ಪ್ರಥಮ ಪುನರ್ಭೂಃ ಎಂದು ಹೆಸರು. ಅಂಥವಳು ಪುನಃಸಂಸ್ಕಾರಕ್ಕೆ (ಪುನರ್ವಿವಾಹಕ್ಕೆ) ಯೋಗ್ಯಳಾಗಿರುತ್ತಾಳೆ.

ಕೌಮಾರಂ ಪತಿಮುತ್ಸೃಜ್ಯಾಯಾತ್ವನ್ಯಂ ಪುರುಷಂ ಶ್ರಿತಾ ।
ಪುನಃ ಪತ್ಯುಗೃಹಮಿಯಾತ್ಸಾ ದ್ವಿತೀಯಾ ಪ್ರಕೀರ್ತಿತಾ ॥

ಅ, ೧೨, ಶ್ಲೋ. ೪೭.

ಅರ್ಥ:—ಯಾವಾಕೆಯು ಬಾಲಕನಾದ ಪತಿಯನ್ನು ಬಿಟ್ಟು ಅನ್ಯರ ಆಶ್ರಯಪಡೆದು ಪುನಃ ಪತಿಗೃಹವನ್ನು ಸೇರುವಳೋ ಆಕೆಗೆ ದ್ವಿತೀಯ ಪುನಃಭೂರ್ ಎಂದು ಹೆಸರು.

ಅಪತ್ಸು ದೇವರೇಷು ಸ್ತ್ರೀಬಾಂಧವೈರ್ಯಾ ಪ್ರದೀಯತೇ ।
ಸವರ್ಣಾಯ ಸಪಿಂಡಾಯ ಸಾ ತೃತೀಯ ಪ್ರಕೀರ್ತಿತಾ ॥

ಅ. ೧೨, ಶ್ಲೋ. ೪೮.

ಯಾವಾಕೆಯ ಪತಿಯ ತಮ್ಮನಿಲ್ಲವೋ ಮತ್ತು ಯಾವಾಕೆಯು ತಮ್ಮ ಸಂಬಂಧಿಕರ ಮುಖಾಂತರ ಸವರ್ಣ ಅಥವಾ ಸಪಿಂಡ ಪುರುಷನಿಗೆ ಕೊಡಲ್ಪಡುವಳೋ ಆಕೆಗೆ ತೃತೀಯ ಪುನರ್ಭೂಃ ಎಂದು ಹೆಸರು.

ಅನುತ್ಪನ್ನ ಪ್ರಜಾಯಾಸ್ತುಪತಿಃ ಪ್ರೇಯಾದ್ಯದಿಸ್ತ್ರಿಯಾಃ ।
ನಿಯುಕ್ತಾಗುರುಭಿರ್ಗಚ್ಛೇದ್ ದೇವರಂ ಪುತ್ರಕಾಮ್ಯಯಾ ॥
ಅ. ೧೨, ೮೦

ಅರ್ಥ:—ಒಂದು ವೇಳೆ ಒಬ್ಬಾಕೆಯ ಪತಿಯು ಮೃತಪಟ್ಟಲ್ಲಿ ಮತ್ತು ಅವಳು ಸಂತಾನರಹಿತಳಾಗಿದ್ದರೆ ಅಂಥವಳಿಗೆ ಹಿರಿಯವರ ಆಜ್ಞೆಯಂತೆ ದೇವರನೊಂದಿಗೆ (ದ್ವಿತೀಯ ವರನೊಂದಿಗೆ) ನಿಯೋಗ ಮಾಡಿಕೊಳ್ಳತಕ್ಕದ್ದು. ಇಲ್ಲಿ ಮೊದಲನೇ ಶ್ಲೋಕವು ವಿಧವಾ ಪುನರ್ವಿವಾಹದ ಕುರಿತೂ ಮೂರನೇ ಶ್ಲೋಕವು ನಿಯೋಗದ ಕುರಿತೂ ಆಗಿರುತ್ತದೆ.

(ನಾರದಸ್ಮೃತಿ. Published by Asiatic Society, Bengal, New Series No 542; 1885, Bharathi Bhavan Pusthakalaya, Allahabad )

ಯಾ ಚ ಕ್ಲೀವಂ ಪತಿತಮುನ್ಮತ್ತಂ ವಾ ಭರ್ತಾರಮುತ್ಸೃಜ್ಯಾನ್ಯಂ ಪತಿಂ ವಿಂದತೇ ಮೃತೇ ವಾ ಸಾ ಪುನರ್ಭೂರ್ಭವತಿ ॥
ವಸಿಷ್ಟಸ್ಮೃತಿ, ಅ ೧೭.

ಅರ್ಥ:—ಯಾವಾಕೆಯು; ನಪುಂಸಕನು, ಪತಿತನು, ಹುಚ್ಚನು ಆಗಿರುವ ತನ್ನ ಪತಿಯನ್ನು ಬಿಟ್ಟು ಬೇರೆ ಪತಿಯನ್ನು ಸ್ವೀಕರಿಸುತ್ತಾಳೋ ಆಕೆಯು ಪುನರ್ಭೂ ಎನ್ನಲ್ಪಡುತ್ತಾಳೆ. ಇದೇ ಅಧ್ಯಾಯದಲ್ಲಿ ಮುಂದೆ ಬರೆದಿರುವುದೇನಂದರೆ—

ಪಾಣಿಗ್ರಹೇಮೃತೇ ಬಾಲಾ ಕೇವಲಂ ಮಂತ್ರ ಸಂಸ್ಕೃತಾ ।
ನಾಚೇ ದಕ್ಷತಯೋನಿಃ ಸ್ಯಾತ್ ಪುನಃ ಸಂಸ್ಕಾರ ಮರ್ಹತಿ ॥

ಪಾಣಿಗ್ರಹಣವಾಗುತ್ತಲೇ ಪತಿಯು ಮೃತಪಟ್ಟರೆ ವಿವಾಹ ಸಂಸ್ಕಾರದ ಮಂತ್ರಗಳಿಂದ ಮಾತ್ರ ವಿವಾಹ ಸಂಸ್ಕಾರವಾಗಿದ್ದರೆ ಮತ್ತವಳು ಅಕ್ಷತಯೋನಿಯಾಗಿದ್ದಲ್ಲಿ ಅಂಥವಳು ಪುನರ್ವಿವಾಹಕ್ಕೆ ಅರ್ಹಳು.

ಈ ಶ್ಲೋಕದ ಮೇಲೆ ಇತರ ಎರಡು ಶ್ಲೋಕಗಳಿವೆ. ಅವು ಸರ್ವಸಾಧಾರಣವಾಗಿ ವಿಧವಾವಿವಾಹ ವಿಧಾಯಕ ಪುಸ್ತಕಗಳಲ್ಲಿ ಈ ಪ್ರಕಾರ ವಿವರಿಸಲ್ಪಟ್ಟಿವೆ.

ಅದ್ಭಿರ್ವಾಚಾ ಚ ದತ್ತಾನಾಂ ಮ್ರಿಯೇತಾಥೋ ವರೋ ಯದಿ । ಕೃತಮಂತ್ರೋಪನೀತಾಪಿ ॥ ೧ ॥ ಕುಮಾರೀ ಪಿತು ರೇವಸಾ ॥ ಯಾವಚ್ಚೇದಾಹೃತಾ ಕನ್ಯಾ ಮಂತ್ರೈರಪಿ ಸುಸಂಸ್ಕೃತಾ । ಅನ್ಯಸ್ಮೈವಿಧಿವದ್ದೇಯಾ, । ಯಥಾಕನ್ಯಾ ತಥೈವಸಾ ॥ ೨ ॥

ಪರಂತು ಈಗಿನ ಕಾಲದ ಕೆಲವು ಪುಸ್ತಕಗಳಲ್ಲಿ "ನಚಮಂತ್ರೋಪನೀತಾಸ್ಯಾತ್" "ಮಂತ್ರೈರ್ಯದಿ ನ ಸಂಸ್ಕೃತಾ" ಎಂಬ ಪಾಠ ಭೇದವಿದೆ. ಆದರೆ "ಪಾಣಿಗ್ರಹೇಮೃತೇಬಾಲಾ" ಶ್ಲೋಕದಲ್ಲಿ ಯಾವ ಪಾಠಾಂತರವೂ ಕಂಡುಬರುವುದಿಲ್ಲ. ಇತ್ತೀಚಿಗಿನ ಸ್ಮೃತಿಗಳಲ್ಲಿ ಕೂಡಾ "ಮಂತ್ರಸಂಸ್ಕೃತಾ" ಮತ್ತು "ಸಾಚೇದಕ್ಷತಯೋನಿ" ಎಂದೇ ಬರೆದಿದೆ. ಮಂತ್ರಸಂಸ್ಕೃತ ಅಕ್ಷತಯೋನಿ ವಿಧವೆಗೆ ಪುನರ್ವಿವಾಹವು ವಿಧಿಯುಕ್ತವಾದುದು. ರೂಪಾಂತರವಾಗಿರುವ ಮೇಲಿನ ಎರಡು ಶ್ಲೋಕಗಳನ್ನೇ ಸರಿಯೆಂದು ಸ್ವೀಕರಿಸುವುದಾದರೆ ಪರಸ್ಪರ ವಿರುದ್ಧಭಿಪ್ರಾಯ ಉಂಟಾಗುವವು. ವಿಧವಾವಿವಾಹ ವಿರೋಧಿಗಳೇ ಶ್ಲೋಕಗಳಲ್ಲಿ ಈ ತರದ ಭೇದಗಳನ್ನುಂಟುಮಾಡಿರಬೇಕು. ವಿಧವಾ ವಿವಾಹ ಪ್ರಚಾರಕರು ಇವುಗಳನ್ನು ಸೇರಿಸಿದ್ದೆಂದು ಯಾರಾದರೂ ಆಕ್ಷೇಪಿಸುವುದಾದರೆ ಮೂಲಗ್ರಂಥದ ಶ್ಲೋಕಗಳು ಪರಸ್ಪರ ವಿರುದ್ಧವಾಗಿ ನಿಲ್ಲುವವು. ವಸಿಷ್ಠಸ್ಮೃತಿಯ ಮೂಲಶ್ಲೋಕವೇ ಅನುಕೂಲವಾಗಿರುವಾಗ ಪ್ರತ್ಯೇಕ ಶ್ಲೋಕವನ್ನು ಸೇರಿಸುವ ಅಗತ್ಯವೇನು? ಇದಲ್ಲದೆ ವಸಿಷ್ಠ ಧರ್ಮಶಾಸ್ತ್ರದ ೫೧ನೇ ಪುಟದಲ್ಲಿ ಬರೆದಿರುವುದೇನಂದರೆ—

ಪ್ರೇತಪತ್ನೀ ಷಣ್ಮಾಸಾನ್ ವ್ರತಚಾರಿಣ್ಯಕ್ಷಾರಲವಣಂ
ಭುಂಜಾನಾಧಃಶಯಿಈತ ॥
ಊರ್ಧ್ವಂ ಷಡ್ಭ್ಯೋ ಮಾಸೇಭ್ಯಃ ಸ್ನಾತ್ವಾಶ್ರಾದ್ಧಂಚ ಪತ್ಯೇ
ದತ್ವಾ ವಿದ್ಯಾಕರ್ಮ ಗುರುಯೋನಿಸಂಬಂಧಾನ್ ಸನ್ನಿ
ಪಾತ್ಯಪಿತಾ ಭ್ರಾತಾ ವಾ ನಿಯೋಗಂ ಕಾರಯೇತ್ ॥

ಅರ್ಥ:—ಮೃತಪುರುಷನ ಸ್ತ್ರೀಯು ಆರು ತಿಂಗಳುಗಳ ವರೆಗೆ ಉಪ್ಪು ಹಾಕದ ಆಹಾರವನ್ನು ಸೇವಿಸಬೇಕು. ನೆಲದಲ್ಲಿ ಮಲಗಬೇಕು. ಮತ್ತು ಆರು ತಿಂಗಳಲ್ಲಿ ಸ್ನಾನಮಾಡಿ ಪತಿಗಾಗಿ ಶ್ರಾದ್ಧ ಕೊಟ್ಟು ವಿದ್ಯಾ, ಗುಣ, ಕರ್ಮ, ಗೋತ್ರ ಇತ್ಯಾದಿಗಳನ್ನು ವಿಚಾರಿಸಿ ತಂದೆ ಅಥವಾ ಅವಳ ಅಣ್ಣನು ಅವಳ ನಿಯೋಗವನ್ನು ಮಾಡಿಸಬೇಕು.

ಬಾಲಾಚ್ಚೇತ್ ಪ್ರಹೃತಾ ಕನ್ಯಾ ಮಂತ್ರೈರ್ಯದಿ ನ
ಸಂಸ್ಕೃತಾ ।
ಅನ್ಯಸ್ಮೈ ವಿಧಿವದ್ದೇಯಾ ಯಥಾ ಕನ್ಯಾ ತಥೈವಸಾ ॥
ನಿಸೃಷ್ಟಾಯಾಂ ಹುತೇ ವಾಪಿ ಯಸ್ಮೈ ಭರ್ತ್ರಾ ಮ್ರಿಯೇ
ತ ಸಃ ॥
ಸಾ ಚೇದಕ್ಷತಯೋನಿಃ ಸ್ಯಾದ್ ಗತಪ್ರತ್ಯಾಗತಾ ಸತೀ ।
ಪೌನರ್ಭವೇನ ವಿಧಿನಾ ಪುನಃ ಸಂಸ್ಕಾರಮರ್ಹತಿ ॥

ಅರ್ಥ:—ಒಂದು ವೇಳೆ ಯಾರಾದರೊಬ್ಬನು ಕನ್ಯೆಯನ್ನು ಬಲಾತ್ಕಾರದಲ್ಲಿ ಇಟ್ಟುಕೊಂಡಲ್ಲಿ ಮಂತ್ರವಿಧಿ ಪ್ರಕಾರ ಆಕೆಯ ವಿವಾಹಸಂಸ್ಕಾರವಾಗದಿದ್ದಲ್ಲಿ ಅಂಥವಳನ್ನು ವಿಧಿಪ್ರಕಾರ ಇನ್ನೊಬ್ಬನೊಡನೆ ವಿವಾಹಮಾಡಿಕೊಡಬೇಕು. ಯಾವಾಕೆಯ ವಿವಾಹ ಸಂಸ್ಕಾರವಾಗಿದ್ದು ಪತಿ ಸತ್ತುಹೋಗಿರುವನೋ ಮತ್ತು ಆಕೆಯು ಅಕ್ಷತಯೋನಿಯಾಗಿರುವಳೋ ಅಂಥವಳಿಗೆ ವಿಧಿಪ್ರಕಾರ ಪುನರ್ವಿವಾಹವಾಗಬೇಕು.

ಉದ್ವಾಹಿತಾ ಚ ಯಾ ಕನ್ಯಾ ನ ಸಂಪ್ರಾಪ್ತಾ ಚ ಮೈಥು
ನಮ್ ।

ಭರ್ತಾರಂ ಪುನರಭ್ಯೇತಿ ಯಥಾ ಕನ್ಯಾ ತಥೈವ ಸಾ ॥
ಸಮುದ್ಧೃತ್ಯ ತು ತಾಂ ಕನ್ಯಾಂ ಸಾಚೇದಕ್ಷತಯೋನಿಕಾ ।
ಕುಲ ಶೀಲವತೇ ದದ್ಯಾದಿತಿ ಶಾತಾತಪೋಽಬ್ರವೀತ್ ॥

ಲಘುಶಾತಾತಪಸ್ಮೃತಿ ಪುಟ ೧೨೯.

ಅರ್ಥ:— ಯಾವ ಕನ್ಯೆಯ ವಿವಾಹವಾಗಿರುವುದೋ ಪರಂತು ಮೈಥುನವಾಗಿರುವುದಿಲ್ಲವೋ ಅಂಥವಳಿಗೆ ಪುನರ್ವಿವಾಹವಾಗಬೇಕು. ಅವಳು ಅಕ್ಷತಯೋನಿಯಾಗಿದ್ದರೆ ಉತ್ತಮ ಕುಲ ಗೋತ್ರ ಮತ್ತು ಒಳ್ಳೆಯ ನಡತೆಯ ಪುರುಷನಿಗೆ ಕೊಟ್ಟು ಪುನರ್ವಿವಾಹಮಾಡಿಕೊಡಬೇಕು. (ಈ ಸ್ಮೃತಿಯು ಪೂನೆಯ ಆನಂದಾಶ್ರಮ ಮುದ್ರಣಾಲಯದಲ್ಲಿ ಕ್ರಿಸ್ತಶಕ ೧೯೦೫ರಲ್ಲಿ ಪ್ರಕಟಿಸಲ್ಪಟ್ಟದ್ದು.)

ವರಯಿತ್ವಾ ತು ಯಃ ಕಶ್ಚಿತ್ ಪ್ರಣಶ್ಯೇತ್ ಪುರುಷೋ ಯದಾ, । ಋತ್ವಾಗಮಾಂಸ್ತ್ರೀನತೀತ್ಯ, ಕನ್ಯಾಽನ್ಯಂ ವರಯೇದ್ವರಂ ॥

ಕಾತ್ಯಾಯನಸ್ಮೃತಿ.

ಯಾವಾತನು ಕನ್ಯೆಯನ್ನು ವಿವಾಹವಿಧಿಯಿಂದ ಸ್ವೀಕರಿಸಿ ಮರಣಹೊಂದಿರುವನೋ ಅಂಥವನ ಸ್ತ್ರೀಯು ಮುಂದಿನ ಮೂರು ಋತುಗಳನ್ನು ಬಿಟ್ಟು ಬೇರೆ ವರನೊಡನೆ ವಿವಾಹಮಾಡಿಕೊಳ್ಳಬಹುದು.

ಯದಿ ಸಾ ಬಾಲವಿಧವಾ, ಬಲಾತ್ ತ್ಯಕ್ತಾಽಥ ವಾ ಕ್ವಚಿತ್ ।
ತದಾ ಭೂಯಸ್ ತು ಸಂಸ್ಕಾರ್ಯಾ, ಗೃಹೀತ್ವಾಯೇನಕೇನಚಿತ್ ॥ ಪ್ರಜಾಪತಿ.

ಅರ್ಥ:— ಯಾವಾಕೆಯು ಬಾಲವಿಧವೆಯಾಗಿರುವಳೋ ಅಥವಾ ಪತಿಯಿಂದ ಬಲಾತ್ಕಾರವಾಗಿ ತ್ಯಜಿಸಲ್ಪಟ್ಟಿರುವಳೋ ಅಂಥವಳು ಅಕ್ಷತಯೋನಿಯಾಗಿದ್ದರೆ ಅಂಥವಳನ್ನು ಸ್ವೀಕಾರಮಾಡಿ ಯಾರೂ ಪುನರ್ವಿವಾಹ ಮಾಡಿಕೊಳ್ಳಬಹುದು.

**ಭರ್ತೃರ್ಭಾವೇ, ವಯಃ ಸ್ತ್ರೀಣಾಂ ಪುನಃ ಪರಿಣಯೋ ಮಿತಃ ।**
**ನ ತತ್ರಪಾಪಂ ನಾರೀಣಾಮನ್ಯಥಾ ತದ್ಗತೀರ್ನ ಹಿ ॥**

ಅಗಸ್ತ್ಯ.

ಅರ್ಥ:—ಪತಿಯ ಅಭಾವದಲ್ಲಿ ಅಂದರೆ ದೇಹಾಂತ ಅಥವಾ ಇತರ ರೀತಿಯಲ್ಲಿ ನಾಶಹೊಂದಿದ ನಂತರ ಯೌವನ ಪ್ರಾಯದ ಸ್ತ್ರೀಯರಿಗೆ ಪುನಃ ವಿವಾಹಸಂಸ್ಕಾರವಾಗುವುದು ಶಾಸ್ತ್ರಸಮ್ಮತವು. ಇದರಲ್ಲಿ ಸ್ತ್ರೀಯರದ್ದೇನೂ ದೋಷವಿಲ್ಲ. ಹೀಗೆ ಮಾಡದಿದ್ದಲ್ಲಿ ಸ್ತ್ರೀಯರಿಗೆ ಏನೂ ಗತಿಯಿಲ್ಲದಂತಾಗುವುದು.

**ನಷ್ಟೇ, ಸನ್ಯಾಸಮಾಪನ್ನೇ, ವ್ಯಾಧಿಗ್ರಸ್ತೇ ಚ ಭರ್ತರಿ, ।**
**ಪುನಃ, ಸ್ತ್ರೀಣಾಂ ವಿವಾಹಃ ಸ್ಯಾತ್, ಕಲಾವಪಿ ನ ಸಂಶಯಃ ॥**

ಅತ್ರಿ.

ಅರ್ಥ:—ಯಾವಾತೆಯ ಪತಿಯು ದೇಶಾಂತರಕ್ಕೆ ಹೋಗಿರುತ್ತಾನೋ, ಮತ್ತು ಅವನ ಏನೊಂದು ವರ್ತಮಾನವೂ ಸಿಕ್ಕುವುದಿಲ್ಲವೋ, ಸನ್ಯಾಸಿಯಾಗಿರುವನೋ, ಸದಾಸಮಯ ಭಯಂಕರವಾದ ರೋಗದಲ್ಲಿ ಬಿದ್ದಿರುವನೋ ಆಕೆಗೆ ಕಲಿಯುಗದಲ್ಲಿಯೂ ಪುನರ್ವಿವಾಹವನ್ನು ಮಾಡಿಕೊಡುವುದು ನ್ಯಾಯಾನುಕೂಲವಾಗಿರುತ್ತದೆ.

ವಾಚಕಮಹಾಶಯರೇ, ಎಲ್ಲಾ ತರದ ವಿಧವೆಯರಿಗೆ ಮತ್ತು ಸ್ತ್ರೀಯರಿಗೆ ಅವರವರ ಅವಶ್ಯಕತೆಗಳಿಗನುಸರಿಸಿ, ಪುನರ್ವಿವಾಹವನ್ನು ಮಾಡಿಕೊಡಬಹುದೆಂಬುದರ ಕುರಿತು ಇದುವರೆಗೆ ಕೊಟ್ಟಿರುವ ಸ್ಮೃತಿಗಳಲ್ಲದೆ, ಕಾಶ್ಯಪ, ವಿಶ್ವಾಮಿತ್ರ, ಬ್ರಹಸ್ಪತಿ, ಋಷ್ಯಶೃಂಗ, ವ್ಯಾಘ್ರಪಾತ್, ವೈಶಂಪಾಯನ, ಗೌತಮ, ವಿಷ್ಣು, ಹರೀತ ಮುಂತಾದ ಎಲ್ಲಾ ಸ್ಮೃತಿಗಳಲ್ಲಿಯೂ ಬೇಕಾದಷ್ಟು ಪ್ರಮಾಣಗಳು ದೊರೆಯುತ್ತವೆ. ಗ್ರಂಥವಿಸ್ತಾರದ ಭಯದಿಂದ ಎಲ್ಲವನ್ನೂ ಇಲ್ಲಿ ಪೋಣಿಸಿಲ್ಲ. ಈಗ ನಾವು ವಿಧವಾವಿವಾಹದ ಕುರಿತು ಪುರಾಣಗಳಲ್ಲೇನಾದರೂ ಪ್ರಮಾಣಗಳು ದೊರೆಯುತ್ತವೋ ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವೇಚಿಸೋಣ.

---

## ೧೨. ವಿಧವಾವಿವಾಹವು ಪುರಾಣೋಕ್ತವೇ?

ವಿಧವಾವಿವಾಹವನ್ನು ವಿರೋಧಿಸುವವರು ಪ್ರಚಲಿತಕಾಲದಲ್ಲಿ ರೂಢಿಯಲ್ಲಿರುವ ಪುರಾಣಗಳಲ್ಲಿ ಪ್ರಬಲವಾದ ವಿಶ್ವಾಸವನ್ನಿಡುವವರೇ ಹೆಚ್ಚಿನವರಾಗಿರುವರು. ಒಂದುವೇಳೆ ವೇದಗಳಲ್ಲಿ ವಿಧವಾವಿವಾಹಕ್ಕೆ ಆಜ್ಞೆ ಇರುವುದಾದರೂ ಪುರಾಣಗಳಲ್ಲಿ ಧರ್ಮವಿರುದ್ಧವೆಂದು ಕಾಣು ವುದರಿಂದ ಹೀಗೆ ಮಾಡುವುದು ಸರಿಯಲ್ಲ. ಕಾರಣವೇನೆಂದರೆ—ಈ ಕಾಲದಲ್ಲಿ ಪುರಾಣಗಳಲ್ಲಿರುವ ವ್ಯವಹಾರಗಳೇ ಪ್ರಚಾರಕ್ಕೆ ಬರುವುದು ಯೋಗ್ಯವಾಗಿರುತ್ತದೆ ಎಂಬಿತ್ಯಾದಿ ಅಭಿಪ್ರಾಯಗಳನ್ನು ಪುರಾಣಮತ ವಾದಿಗಳು ಎಲ್ಲೆಲ್ಲಿಯೂ ಪ್ರಚುರಗೊಳಿಸುತ್ತಿದ್ದಾರೆ.

ಇಂಥವರಲ್ಲಿ ನಾವು ವಿನಯಪೂರ್ವಕವಾಗಿ ಹೇಳುವುದೇನೆಂದರೆ ಪುರಾಣಗಳು ವಿಧವಾವಿವಾಹವನ್ನು ಎಲ್ಲಿಯೂ ಖಂಡಿಸಿಲ್ಲ. ಶ್ರೀಮ ದ್ಭಾಗವತ ನವಮಸ್ಕಂದದಲ್ಲಿಯೂ, ಮಹಾಭಾರತ ಅರಣ್ಯಪರ್ವ ಅಧ್ಯಾಯ ಎಪ್ಪತ್ತರ ಶ್ಲೋಕ ೨೨ ಮತ್ತು ೨೭ರಲ್ಲಿಯೂ, ಭೀಷ್ಮಪರ್ವ ಅಧ್ಯಾಯ ೯೦ರ ಶ್ಲೋ. ೬ರಿಂದ ೧೪ರ ವರೆಗೂ, ಅಧ್ಯಾಯ ೯೧ರ ಶ್ಲೋಕ ೮೨ರಲ್ಲಿಯೂ, ಅಧ್ಯಾಯ ೮ರ ಶ್ಲೋಕ ೨೨ರಲ್ಲಿಯೂ ವಿಧವಾ ವಿವಾಹದ ಸಮರ್ಥನೆಯು ಉತ್ತಮರೀತಿಯಲ್ಲಿ ಮಾಡಲ್ಪಟ್ಟಿದೆ. ಇದೇ ಪ್ರಕಾರ ಅಗ್ನಿಪುರಾಣದ ೧೫೪ನೆಯ ಅಧ್ಯಾಯದ ೫೬ನೇ ಶ್ಲೋಕ ದಲ್ಲಿಯೂ, ಬ್ರಹ್ಮಪುರಾಣದಲ್ಲಿಯೂ ಪುನರ್ವಿವಾಹವನ್ನು ಚೆನ್ನಾಗಿ ಸಮರ್ಥಿಸಿರುತ್ತದೆ. ಈಗ ನಾವು ಪದ್ಮಪುರಾಣದ ಒಂದು ಪ್ರಬಲ ಪ್ರಮಾಣವನ್ನು ಕೊಟ್ಟು ವಿಧವಾವಿವಾಹವು ಪುರಾಣಸಮ್ಮತವೆಂಬು ದನ್ನು ಸಂಕ್ಷಿಪ್ತದಲ್ಲಿ ವಿವರಿಸಿ ಈ ಅಧ್ಯಾಯವನ್ನು ಕೊನೆಗೊಳಿಸುವೆವು.

ಉಜ್ವಲ ಉವಾಚ:—

ಪ್ಲಕ್ಷದ್ವೀಪೇ ಮಹಾರಾಜ! ಆಸೀತ್ಪುಣ್ಯಮತಿಃ ಸದಾ । ದಿವೋ ದಾಸೇತಿ ವಿಖ್ಯಾತಃ ಸತ್ಯ ಧರ್ಮ ಪರಾಯಣಃ ॥ ೫೦ ॥ ತಸ್ಯಾ ಪತ್ಯಂ ಸಮುತ್ಪನ್ನಂ ನಾರೀಣಾಮುತ್ತಮಂ ತದಾ । ಗುಣರೂಪ

## ೧೧. ಸ್ಮೃತಿಗಳು ಏನು ಹೇಳುತ್ತವೆ?

ಪ್ರಾಚೀನ ಸ್ಮೃತಿಗಳಲ್ಲಿಯೂ ಅಕ್ಷತಯೋನಿ ವಿಧವೆಯರ ಪುನರ್ವಿವಾಹವನ್ನು ಮಾಡಬಹುದೆಂಬ ವಿಧಾನವು ಕಂಡುಬರುತ್ತದೆ. ಕ್ಷತಯೋನಿ ವಿಧವೆಯರ ಪುನರ್ವಿವಾಹಕ್ಕೆ ಸರ್ವಸಾಧಾರಣವಾಗಿ ಎಲ್ಲಾ ಸ್ಮೃತಿಗಳೂ ಸಮ್ಮತಿಯನ್ನು ಕೊಡುತ್ತವೆ. ಸ್ಮೃತಿಗಳಲ್ಲಿ ಮನುಸ್ಮೃತಿಯೇ ಅತ್ಯಂತ ಪ್ರಾಚೀನವಾಗಿರುತ್ತದೆ. ಅದರ ಕುರಿತು "ಯದ್ವೈ ಕಿಂಚನ ಮನುರವದತ್ತದ್ಭೇಷಜಂ ಭೇಷಜಾತಾಯಾಃ ।"

ಅಂದರೆ ಮನುಮಹಾರಾಜರಿಂದ ಹೇಳಲ್ಪಟ್ಟುದೆಲ್ಲವೂ ಔಷಧಿಗಳ ಔಷಧಿಯಾಗಿರುತ್ತದೆ ಎಂದು ಹೇಳಲ್ಪಟ್ಟಿದೆ. ಪ್ರಕೃತದ ವಿಷಯದ ಬಗ್ಗೆ ಮನುಸ್ಮೃತಿಯ ಕುರಿತು ಕೆಳಗೆ ಕೊಟ್ಟಿರುವ ಪ್ರಶ್ನೆಗಳೇ ವಿಚಾರಕ್ಕೆ ಯೋಗ್ಯವಾಗಿವೆ.

1. ಏನು? ಮನುಮಹಾರಾಜರು ವಿಧವಾವಿವಾಹಕ್ಕೆ ಆಜ್ಞೆ ಕೊಡುತ್ತಾರೋ?

2. ಮನುಸ್ಮೃತಿಯಲ್ಲಿ ಕೆಲವು ಶ್ಲೋಕಗಳು ವಿಧವಾ ವಿವಾಹವನ್ನು ಸಮರ್ಥಿಸಿಯೂ, ಇನ್ನು ಕೆಲವು ಖಂಡಿಸಿಯೂ— ಈ ರೀತಿ ಎರಡು ವಿಧಗಳಲ್ಲಿವೆಯೇ?

3. ಪುನರ್ವಿವಾಹಮಾಡಿಕೊಳ್ಳುವ ವಿಧವೆಯರು ನೀಚರೆಂಬುದಾಗಿ ಮನುಸ್ಮೃತಿಯು ಹೇಳುತ್ತದೆಯೇ?

4. ವಿಧವೆಯರೊಡನೆ ವಿವಾಹಮಾಡಿಕೊಳ್ಳುವ ಪುರುಷನು ನೀಚನೆಂಬುದಾಗಿ ಮನುಸ್ಮೃತಿಯಲ್ಲಿ ವರ್ಣನೆಯಿದೆಯೇ?

5. ಮನುಸ್ಮೃತಿಯ ಆಧಾರಪ್ರಕಾರ, ಪುನರ್ವಿವಾಹಮಾಡಿಕೊಳ್ಳುವ ವಿಧವೆಗೆ ಪೈತ್ರೃಕ (ತಂದೆಯ) ಸಂಪತ್ತಿನಲ್ಲಿ ಅಧಿಕಾರ ವಿದೆಯೇ?

ಯಾವದಾದರೊಂದು ಅಭಿಪ್ರಾಯದ ಸರಿಯಾದ ನಿರ್ಣಯ ವೇದಗಳಿಗಿಂತ ಮಿಕ್ಕಾದ ಪ್ರಮಾಣಗಳಿಲ್ಲವೆಂಬುದಾಗಿ ಮನುಮಹ ರಾಜರೇ ಚೆನ್ನಾಗಿ ವಿವರಿಸಿರುವರು. ಎಲ್ಲಾ ಸ್ಮೃತಿಗಳೂ ವೇ ಗಳನ್ನೇ ಅನುಕರಣೆಮಾಡುತ್ತವೆ! ಕವಿಸಾರ್ವಭೌಮನಾದ ಕಾ ದಾಸನು ಸಹ ಏನು ಹೇಳಿದ್ದಾನೆಂದರೆ:

"ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛನ್"

ಅಂದರೆ ವೇದಗಳನ್ನನುಸರಿಸುವುದೇ ಸ್ಮೃತಿಗಳ ಕರ್ತವ್ಯವಾಗಿರುತ್ತ

ಮನುಮಹಾರಾಜರು ಸಹ ಈ ಕುರಿತು

"ಧರ್ಮಜಿಜ್ಞಾಸ ಮಾನಾನಾಂ ಪ್ರಮಾಣಂ ಪರಮಂ ಶ್ರುತಿಃ।"

"ಧರ್ಮಜಿಜ್ಞಾಸುಗಳಿಗೆ ಶ್ರುತಿ "(ವೇದ)ವೇ ಪರಮಪ್ರಮಾ ವಾಗಿರುತ್ತದೆ." "ಅಂತಹ ವೇದಗಳನ್ನು ತಿರಸ್ಕರಿಸುವವನು ನಾಸ್ತಿ ನಾಗಿರುತ್ತಾನೆ".

"ನಾಸ್ತಿಕೋ ವೇದ ನಿಂದಕಃ"। (ಮನು)

ಕಲಿಯುಗದಲ್ಲಿ ಅಥವಾ ಇತರ ಯುಗಗಳಲ್ಲಿಯಾಗಲಿ ವೇ ವನ್ನು ಅಪ್ರಮಾಣವೆಂದು ಭಾವಿಸುವಂತೆ ಬೋಧಿಸುವ ಒಂ ಶ್ಲೋಕವಾದರೂ ಮನುಸ್ಮೃತಿಯಲ್ಲಿ ಕಂಡುಬರುವುದಿಲ್ಲ. ಒಂ ವೇಳೆ ಅದರಲ್ಲಿ ವಿಧವಾವಿವಾಹದ ಸಮರ್ಥನೆಗೆ ಪ್ರಮಾಣಗಳಿ ಹೋದರೂ ಮನುಮಹಾರಾಜರನ್ನು ನಾವು ವಿಧವಾವಿವಾಹ ಸಮರ್ಥಕರೆಂದೇ ಹೇಳುವೆವು. ಯಾಕಂದರೆ--ಅವರು ವೇದ ಸಂಪೂರ್ಣ ಸಿದ್ಧಾಂತವನ್ನು ಒಪ್ಪುತ್ತಾರೆ. ಅದರಲ್ಲಿ ದ್ವಿತೀಯ ಗೇನೇ "ದೇವರ" "ಅನ್ಯಪತಿ" ಇತ್ಯಾದಿ ಶಬ್ದಗಳು ಬಂದಿರುತ್ತ ಇಷ್ಟು ಮಾತ್ರವಲ್ಲದೆ, ಮನುಸ್ಮೃತಿಯಲ್ಲಿಯೇ ಪುನರ್ವಿವಾ ಸಮರ್ಥನೆಗೆ ಬೇಕಾದ ಅನೇಕ ಶ್ಲೋಕಗಳು ಸ್ಪಷ್ಟವಾಗಿ ಕಂ ಬರುತ್ತವೆ.

ಯಾ ಪತ್ಯಾ ವಾ ಪರಿತ್ಯಕ್ತಾ ವಿಧವಾವಾ ಸ್ವೇಚ್ಛಯಾ ।
ಉತ್ಪಾದಯೇತ್ ಪುನರ್ಭೂರ್ತ್ವಾ ಸ ಪೌನರ್ಭವ ಉಚ್ಯತೇ॥
ನಾ ಚೇ ದಕ್ಷತ ಯೋನಿಃ ಸ್ಯಾದ್ ಗತ ಪತ್ಯಾಗತಾಪಿವಾ ।
ಪೌನರ್ಭವೇನ ಭರ್ತ್ರಾ ನಾಪುನಃ ಸಂಸ್ಕಾರಮರ್ಹತಿ ॥

ಮನು ಅ. ೯. ೧೭೫, ೧೭೬.

ಕುಲ್ಲೂಕ ಭಟ್ಟಾಚಾರ್ಯರು "ಮನ್ವರ್ಥ ಮುಕ್ತಾವಲಿ" ಎಂಬ ಗ್ರಂಥದಲ್ಲಿ ಮೇಲಿನ ಶ್ಲೋಕಕ್ಕೆ ಈ ರೀತಿ ಅರ್ಥ ಮಾಡಿದ್ದಾರೆ:—

"ಯಾ" ಭರ್ತ್ರಾ "ಪರಿತ್ಯಕ್ತಾ" ಮೃತ ಭರ್ತೃಕಾ "ವಾ" "ಸ್ವೇಚ್ಛಯಾ" ಅನ್ಯಸ್ಯ ಪುನರ್ಭಾರ್ಯಾ ಭೂತ್ವಾಯಮುತ್ಪಾದ ಯೇತ್ಸಉತ್ಪಾದ ಪೌನರ್ಭವಃ ಪುತ್ರ ಉಚ್ಯತೇ ॥ ೧೭೫ ॥

"ಸಾ ಸ್ತ್ರೀ ಯದ್ಯಕ್ಷತಯೋನಿಃ ಪತ್ಯಸ್ಯ ಮಾಶ್ರಯೇತ್ತದಾತೇನ ಪೌನರ್ಭವೇನ ಭರ್ತ್ರಾ ಪುನರ್ವಿವಾಹಾಖ್ಯಂ ಸಂಸ್ಕಾರ ಮರ್ಹತಿ । ಯದ್ವಾ ಕೌಮಾರಂ ಪತಿಮುತ್ಸೃಜ್ಯಾನ್ಯ ಮಾಶ್ರಿತ್ಯ ಪುನಸ್ತಮೇವ ಪ್ರತ್ಯಾಗತಾ ಭವತಿ ತದಾತೇನ ಕೌಮಾರೇಣ ಭರ್ತ್ರಾ ಪುನರ್ವಿವಾಹಾಖ್ಯಂ ಸಂಸ್ಕಾರಮರ್ಹತಿ ॥ ೧೭೬ ॥

ಭಾಷಾರ್ಥ:—ಒಬ್ಬ ಸ್ತ್ರೀಯು ಪತಿಯಿಂದ ತ್ಯಜಿಸಲ್ಪಟ್ಟರೆ ಅಥವಾ ಪತಿಯು ಮೃತನಾದರೆ ಅವಳು ತನ್ನ ಇಚ್ಛಾಪೂರ್ವಕವಾಗಿ ಪುನರ್ಭಾರ್ಯೆಯಾಗಿ "ಪುನರ್ವಿವಾಹ" ಮಾಡಿಕೊಂಡು ಯಾವ ಪುತ್ರನನ್ನು ಪಡೆಯುತ್ತಾಳೋ ಆ ಪುತ್ರನು "ಪೌನರ್ಭವ ಪುತ್ರ"ನೆಂದು ಕರೆಯಲ್ಪಡುವನು. ಪುನಸ್ಸಂಸ್ಕಾರ ಮತ್ತು ಪುನರ್ವಿವಾಹದಲ್ಲಿ ಯಾವ ಭೇದವೂ ಇಲ್ಲ. ಯಾಕೆಂದರೆ ಇಲ್ಲಿ ಸಂಸ್ಕಾರವೆಂಬುವುದು ವಿವಾಹ ಸಂಸ್ಕಾರದ್ದೇ ತಾತ್ಪರ್ಯವಾಗಿರುತ್ತದೆ. ವಾಗ್ದತ್ತಾ ಮತ್ತು ಸಂಸ್ಕೃತಾ ಪದದಲ್ಲಿ ಭೇದವಿದೆ. ಬರೇ ವಾಗ್ದಾನವನ್ನು ವಿವಾಹ ಸಂಸ್ಕಾರವೆಂದು ಹೇಳಲಾಗುವುದಿಲ್ಲ. ಪಾಣಿಗ್ರಹಣ, ಸಪ್ತಪದಿ, ಇತ್ಯಾದಿ ಕ್ರಿಯೆಗಳು ಸಂಪೂರ್ಣವಾಗಿ ನೆರವೇರಿದರೆ ಮಾತ್ರ ವಿವಾಹ ಸಂಸ್ಕಾರವು ಸಂಪೂರ್ಣವಾಗುತ್ತದೆ.

"ಆ ಸ್ತ್ರೀಯು ಒಂದುವೇಳೆ ಅಕ್ಷತಯೋನಿಯಾಗಿದ್ದು ಇನ್ನೊಬ್ಬನ ಆಶ್ರಯವನ್ನು ಹೊಂದಿದರೆ ಆ ಪೌನರ್ಭವ ಪತಿಯೊಡನೆ ಪುನರ್ವಿವಾಹ ಸಂಸ್ಕಾರಕ್ಕೆ ಅಧಿಕಾರಿಣಿಯಾಗುತ್ತಾಳೆ."

ಇಲ್ಲಿ ಕುಲ್ಲೂಕ ಭಟ್ಟರು– ಸ್ತ್ರೀಯು ಅಲ್ಪವಯಸ್ಸಿನ ಪತಿಯನ್ನು ತ್ಯಜಿಸಿ, ಇನ್ನೊಬ್ಬನೊಡನೆ ಪುನರ್ವಿವಾಹವನ್ನು ಮಾಡಿಕೊಳ್ಳಬಹುದೆಂದು ಹೇಳುತ್ತಾರೆ. ಆದರೆ ಇದು ಮಾತ್ರ ಸರಿಯಲ್ಲ. ಕಾರಣವೇನೆಂದರೆ—ಮನುಸ್ಮೃತಿಯ ಆಧಾರದಂತೆ ಸಂಸ್ಕಾರಪೂರ್ವಕ ವರಿಸಿದ ಪತಿಯನ್ನು ತ್ಯಜಿಸುವ ವಿಧಾನವು ಎಲ್ಲಿಯೂ ಇಲ್ಲ. ಇದು ಹೊರತು ಕೌಮಾರಾವಸ್ಥೆಯಲ್ಲಿ ವಿವಾಹವಾಗುವ ಪದ್ಧತಿಯೂ ಇಲ್ಲ. ಆದುದರಿಂದ ಭಟ್ಟರ ಅಭಿಪ್ರಾಯವು ಸರಿಯಲ್ಲ. ಅವರು ಆಗಿನಕಾಲದಲ್ಲಿದ್ದ ಸಂಪ್ರದಾಯಕ್ಕೆ ಅಧೀನರಾಗಿದ್ದುದರಿಂದ ಅದಕ್ಕನುಸರಿಸಿ ಈ ರೀತಿ ಅರ್ಥಮಾಡಿರುವರು. ಇದೇ ಪ್ರಕಾರ ಪ್ರಚಲಿತಕಾಲದಲ್ಲಿಯೂ ಮನುಸ್ಮೃತಿಯ ಅರ್ಥವನ್ನು ತಮತಮಗೆ ತೋರಿದ ರೀತಿಯಲ್ಲಿ ಮಾಡುತ್ತಿದ್ದಾರೆ.

ಪ್ರಶ್ನೆ:—ವಿಧವಾ ವಿವಾಹವನ್ನು ನಿಷೇಧಿಸುವ ಕುರಿತು ಮನುಸ್ಮೃತಿಯಲ್ಲಿ ಯಾವ ಪ್ರಮಾಣವೂ ದೊರೆಯುವುದಿಲ್ಲವೋ?

ಉತ್ತರ:—ಈ ಕುರಿತು ಎರಡು ಮಾತುಗಳು ವಿಚಾರಕ್ಕೆ ಯೋಗ್ಯವಾಗಿವೆ. ಯಾವುವೆಂದರೆ:—

(1) ಈಗಿನ ಕಾಲದಲ್ಲಿ ದೊರೆಯುವ ಮನುಸ್ಮೃತಿಯಲ್ಲಿ ಈಗಿನ ಪ್ರತಿಯೊಂದು ಸಂಪ್ರದಾಯದವನೂ ತನಗೆ ಬೇಕಾದ ಅಭಿಪ್ರಾಯಗಳನ್ನು ಸಂದರ್ಭದೊರೆತಲ್ಲೆಲ್ಲಾ ಸೇರಿಸಿರುತ್ತಾನೆ. ಪ್ರಾಚೀನ ಮತ್ತು ಅರ್ವಾಚೀನ ಪ್ರತಿಗಳನ್ನು ಹೋಲಿಸಿ ನೋಡಿದರೆ, ಈ ವಿಷಯವು ಸರಿಯಾಗಿ ತಿಳಿದುಬರುವುದು. ಈಗಿನ ಸ್ಮೃತಿಯಲ್ಲಿ ಒಂದರಲ್ಲೆ ಅನೇಕ ಕಡೆ ಪರಸ್ಪರ ವಿರೋಧಾಭಿಪ್ರಾಯಗಳು ಕಂಡುಬರುತ್ತವೆ.

(2) ಯಾವ ಶ್ಲೋಕವು ವಿಧವಾ ವಿವಾಹ ಅಥವಾ ನಿಯೋಗದ ವಿರುದ್ಧವಾಗಿ ಬರೆದಿರುವುದೋ ಅದರ ಅರ್ಥವೇ ಬೇರೆಯಿದೆ. ವಿರೋಧಸೂಚಕವಾದ ಅರ್ಥವನ್ನೇ ಮಾಡುವ ಹಠವನ್ನು ನೀವು ಕೈಕೊಳ್ಳುವಿರಾದರೆ,—ಎಂದರೆ, "ಮನುಸ್ಮೃತಿಯಲ್ಲಿ ಒಂದು ಕಡೆ ವಿರೋಧ, ಇನ್ನೊಂದು ಕಡೆ ಸಮರ್ಥನೆ" ಈ ರೀತಿಯ ಅರ್ಥವನ್ನೇ ಸ್ವೀಕರಿಸುವಿರಾದರೆ, ಒಂದರಲ್ಲೇ ಪರಸ್ಪರ ವಿರುದ್ಧಾಭಿಪ್ರಾಯವುಳ್ಳ ಸ್ಮೃತಿಗ್ರಂಥವು ಪ್ರಮಾಣವೆಂದೆನ್ನಲಾಗದು. ಬುದ್ಧಿವಂತರು ತಮ್ಮ ಒಂದೇ ಗ್ರಂಥದಲ್ಲಿ, ಒಂದೇ ವಿಷಯದ ಕುರಿತು ಪರಸ್ಪರ ವಿರೋಧಾಭಿಪ್ರಾಯಗಳನ್ನು ಕೊಡಲಾರರು. ಹೀಗಿರುವಲ್ಲಿ ಅತ್ಯಂತ ಪ್ರಾಚೀನ ಪುರುಷರಾದ ಮನುಮಹಾರಾಜರು ತನ್ನ ಸ್ಮೃತಿಯಲ್ಲಿ ಪೂರ್ವಾಪರ ವಿರುದ್ಧರೀತಿಯಲ್ಲಿ ಬರೆಯುವರೋ?

ನಿಯೋಗದ ಕುರಿತು ಯಾವ ಶ್ಲೋಕವು ನಿಷೇಧಸೂಚಕವಾಗಿರುವುದೋ ಅದನ್ನು ಇಲ್ಲಿ ಸ್ವಲ್ಪ ಮಾತ್ರ ವಿವರಿಸುವೆವು;

**"ನಿಯುಕ್ತೌ ಯೌ ವಿಧಿಂ ಹಿತ್ವಾ ವರ್ತೇಯಾತಾಂತು ಕಾಮತಃ ।**
**ತಾ ವುಭೌ ಪತಿತೌ ಸ್ಯಾತಾಂ ಸ್ನುಷಾಗ ಗುರು ತಲ್ಪಗೌ ॥"**

(ಮನು ಅ. ೯, ೬೩.)

"ನಿಯೋಗದ ಮೂಲಕ ಸಂಬಂಧಿತರಾದ ಯಾವ ಸ್ತ್ರೀಪುರುಷರು ನಿಯಮವನ್ನುಲ್ಲಂಘಿಸಿ ಕಾಮ ಚೇಷ್ಟೆಯನ್ನು ಮಾಡುತ್ತಾರೋ ಅವರಿಬ್ಬರು ಪುತ್ರ ವಧುವಿನೊಡನೆ ಅಥವಾ ಗುರುಪತ್ನಿಯೊಡನೆ ಸಂಸರ್ಗ ಗೈಯ್ಯುವವರಂತೆ ಪತಿತರಾಗುತ್ತಾರೆ." ಇಲ್ಲಿ ನಿಯೋಗವು ವಿಧಿಯುಕ್ತವಾಗಿ ಆಚರಿಸಲ್ಪಡಬೇಕೆಂಬುದನ್ನು ಸ್ಪಷ್ಟವಾಗಿ ಹೇಳಿರುವುದು. ಇದೇ ಪ್ರಕಾರ ಒಬ್ಬ ಕುಮಾರನು ಕುಮಾರಿಯೊಡನೆ ನಿಯಮವನ್ನು ಮೀರಿ ಸಂಸರ್ಗ ಮಾಡಿದರೆ ಪಾಪಿಯಾಗುತ್ತಾನೆಂಬುದನ್ನು ವಿವಾಹವಿಧಿಯಲ್ಲಿಯೂ ವಿವರಿಸಿರುವುದು. ಮೇಲಿನ ಶ್ಲೋಕವು ನಿಯೋಗವಿಧಿಯನ್ನು ಮೀರಬಾರದೆಂಬುದನ್ನು ಸೂಚಿಸಿರುವುದಲ್ಲದೆ ವಿಧಿಯನ್ನು ನಿಷೇಧಿಸಿಲ್ಲ.

"ನಾನ್ಯಸ್ಮಿನ್ ವಿಧವಾ ನಾರೀ ನಿಯೋಕ್ತವ್ಯಾದ್ವಿಜಾತಿಭಿಃ ।
ಅನ್ಯಸ್ಮಿನ್ ಹಿ ನಿಯುಂಜಾನಾ, ಧರ್ಮಂ ಹನ್ಯುಃ
ಸನಾತನಮ್ ॥"
(ಮನು ಅ. ೯, ೬೪.)

ತಾತ್ಪರ್ಯ:—"ದ್ವಿಜರು (ಬ್ರಾಹ್ಮಣ, ಕ್ಷತ್ರಿಯ, ವೈಶ್ಯ) ಅನ್ಯ ಜಾತಿಯ ಸ್ತ್ರೀಯೊಡನೆ ನಿಯೋಗ ಮಾಡಬಾರದು; ಹಾಗೆ ಮಾಡುವವರು ಸನಾತನ ಧರ್ಮವನ್ನು ನಾಶಮಾಡುತ್ತಾರೆ." ಸವರ್ಣದವರಲ್ಲಿಯೇ ನಿಯೋಗಮಾಡುವುದು ಯೋಗ್ಯವೆಂಬುದನ್ನು ಈ ಶ್ಲೋಕದಲ್ಲಿ ವಿವರಿಸಿರುವುದು. ಇದರಲ್ಲಿಯೂ ನಿಯೋಗ ಪದ್ಧತಿಯನ್ನು ನಿಷೇಧಿಸಿಲ್ಲ. ಬ್ರಾಹ್ಮಣನು ತನ್ನ ಪುತ್ರಿಯನ್ನು ಇತರ ಜಾತಿಯವನಿಗೆ ವಿವಾಹ ಮಾಡಿಕೊಡಬಾರದೆಂದು ಯಾರಾದರೂ ಹೇಳಿದ್ದಲ್ಲಿ ಆಕೆಗೆ ವಿವಾಹವೇ ಬೇಡವೆಂಬ ಅರ್ಥವಾಗುವುದಿಲ್ಲ.

"ನೋ ದ್ವಾಹಿಕೇಷು ಮಂತ್ರೇಷು ನಿಯೋಗಃ ಕೀರ್ತ್ಯತೇ
ಕ್ವಚಿತ್ ।
ನ ವಿವಾಹ ವಿಧಾವುಕ್ತ ವಿಧವಾ ವೇದನಂ ಪುನಃ ॥"
(ಮನು ಅ. ೯, ೬೫.)

ತಾತ್ಪರ್ಯ.—ವಿವಾಹದ ಮಂತ್ರಗಳಲ್ಲಿ ನಿಯೋಗಮಾಡಲಾಗುವುದಿಲ್ಲ. ವಿವಾಹವಿಧಿಯಲ್ಲಿ "ಪುನಃ ವಿಧವಾ ವೇದನಂ" ಎಂದರೆ ನಿಯೋಗವನ್ನು ಹೇಳಿಲ್ಲ. ಇಲ್ಲಿ ವಿವಾಹ ಮತ್ತು ನಿಯೋಗದ ವಿಧಿಯು ಬೇರೆಬೇರೆ ಎಂಬುದನ್ನು ತೋರಿಸಿರುತ್ತದೆ. ಸಂತಾನೋತ್ಪತ್ತಿಗಾಗಿಯೇ ವಿಧವೆಯನ್ನು ಸ್ವೀಕರಿಸಬೇಕು ಎಂಬ ತಾತ್ಪರ್ಯವೇ ವಿಧವಾ ವೇದನಂ ಪುನಃ ಎಂಬದಾಗಿರುತ್ತದೆ. ವಿವಾಹವಿಧಿಯಲ್ಲಿ ನಿಯೋಗವಿಲ್ಲ; ನಿಯೋಗವಿಧಿಯಲ್ಲಿ ಮಾತ್ರ ನಿಯೋಗವಿದೆ.

ಅಯಂ ದ್ವಿಜೈರ್ಹಿ ವಿದ್ವದ್ಭಿಃ ಪಶುಧರ್ಮೋ ವಿಗರ್ಹಿತಃ ।
ಮನುಷ್ಯಾಣಾಮಪಿಪ್ರೋಕ್ತೋ ವೇನೆ ರಾಜ್ಯ ಪ್ರಶಾಸತಿ ॥

ಸ ಮಹೀ ಮಖಿಲಾಂ ಭುಂಜನ್ ರಾಜರ್ಷಿ ಪ್ರವರ ಪುರಾ ।
ವರ್ಣಾನಾಂ ಸಂಕರಂ ಚಕ್ರೇ ಕಾಮೋಪಹತ ಚೇತನಃ ॥
ತತಃ ಪ್ರಭೃತಿಯೋ ಮೋಹಾತ್ ಪ್ರಭೀತ ಪತಿಕಾಂ
ಸ್ತ್ರಿಯಮ್ ।
ನಿಯೋಜಯತ್ಯ ಪತ್ಯಾರ್ಥ ತಂ ವಿಗರ್ಹಂತಿ ಸಾಧವಃ ॥
(ಮನು ಅ. ೯, ೬೬, ೬೮.)

ತಾತ್ಪರ್ಯ:—"ವೇನ ರಾಜನ ರಾಜ್ಯದಲ್ಲಿ ನಿಯೋಗಪದ್ಧತಿಯನ್ನು ವಿದ್ವಾಂಸರಾದ ಬ್ರಾಹ್ಮಣರು ಮನುಷ್ಯರ ಬಗ್ಗೆ ಬಹಿಷ್ಕರಿಸಿದ್ದರು. ಆ ಪ್ರವರರಾಜಋುಷಿಯು ಇಡೀ ಜಗತ್ತನ್ನು ಭೋಗಿಸುತ್ತ ಕಾಮಚೇಷ್ಟೆಯಿಂದ ಪ್ರೇರಿತನಾಗಿ ವರ್ಣಸಂಕರತೆಯನ್ನುಂಟುಮಾಡಿದನು. ಆ ಸಮಯದಲ್ಲಿ ಮೋಹಾತುರರಾಗಿ ಮತ್ತು ಸಂತಾನವನ್ನು ಉಂಟುಮಾಡಲಿಕ್ಕಾಗಿ ಯಾರು ನಿಯೋಗವನ್ನು ಮಾಡುತ್ತಿದ್ದರೋ ಅಂತಹವರನ್ನು ಜನರು ಸರಿಯಾಗಿ ಬಹಿಷ್ಕರಿಸುತ್ತಿದ್ದರು."

ಈ ಮೂರು ಶ್ಲೋಕಗಳ ತಾತ್ಪರ್ಯವೇನೆಂದರೆ,—ವೇನರಾಜನು ಕೇವಲ ಕಾಮಾತುರನಾಗಿ ನಿಯೋಗವನ್ನು ಮಾಡಿ ವರ್ಣಸಂಕರತೆಯನ್ನುಂಟುಮಾಡಿದುದರಿಂದ ಅವನ ಕಾಲಾನಂತರ ನಿಯೋಗವಿಧಿಯು ತಿರಸ್ಕರಿಸಲಾಯಿತು. ಮೇಲಿನ ಶ್ಲೋಕದಿಂದ ಮುಖ್ಯವಾದ ಮೂರು ತಾತ್ಪರ್ಯಗಳು ಗೊತ್ತಾಗುತ್ತವೆ.

೧. ವೇನರಾಜನಿಗಿಂತ ಮೊದಲು ನಿಯೋಗವಿಧಿಯನ್ನು ಪಶುಧರ್ಮವೆಂದು ಎಣಿಸುತ್ತಿದ್ದಿಲ್ಲ.

೨. ವೇನನೇ ಈ ವಿಧಿಯನ್ನು ದುರುಪಯೋಗಗೊಳಿಸಿದನು.

೩. ಅವನ ಕಾಲಾನಂತರವೇ ಇದನ್ನು ಅಧರ್ಮವೆಂದು ಭಾವಿಸತೊಡಗಿದರು.

ಮನುಸ್ಮೃತಿಯ ಇವೇ ಶ್ಲೋಕಗಳ ಕುರಿತು ಋಷಿಕುಮಾರ ಪಂಡಿತ ರಾಮಸ್ವರೂಪರೆಂಬವರು ಬರೆದಿರುವ ಟಿಪ್ಪಣಿಯೇನೆಂದರೆ— "ಕಲಿಯುಗದ ಹೊರತು ಇತರ ಯಾವ ಯುಗಗಳಲ್ಲಿಯೂ ನಿಯೋಗ

ವಿಧಿಯು ಶಾಸ್ತ್ರಾನುಕೂಲವಾಗಿದೆ; ಕಲಿಯುಗದಲ್ಲಿ ಮಾತ್ರ ನಿಯೋಗ ರಹಿತವಾಗಿರುವುದೇ ಲೇಸು." ಇವರ ಅಭಿಪ್ರಾಯವು ಕೂಡಾ ಮೊದಲಿನ ಕಾಲದಲ್ಲಿ ನಿಯೋಗವು ಧರ್ಮಾನುಕೂಲವಾಗಿತ್ತೆಂಬು ದನ್ನು ಸ್ಪಷ್ಟಗೊಳಿಸುತ್ತದೆ. ಮನುಷ್ಯನಿಗೆ ನಿದ್ರೆಯು ಲಾಭದಾಯಕ ವಾಗಿರುವುದು. ಆದರೆ ರಾತ್ರಿಹಗಲೂ ನಿದ್ರಿಸುವುದರಿಂದ ಶರೀರವೇ ಕೆಟ್ಟುಹೋಗುವುದು. ಈ ಪ್ರಕಾರ ಒಬ್ಬನು ತನ್ನ ಜೀವನವನ್ನು ಕೆಡಿಸು ತ್ತಿರುವುದನ್ನು ಕಂಡು ಮನುಷ್ಯನಿಗೆ ನಿದ್ರೆಯೇ ಎಷ್ಟಕ್ಕೂ ಯೋಗ್ಯ ವಲ್ಲವೆಂದು ತೀರ್ಮಾನಿಸುವುದು ಸರಿಯಲ್ಲ. ಇದೇ ಪ್ರಕಾರ, ನಿಯೋಗದ ವಿಧಿಯನ್ನು ಕೆಡಿಸುವಂತಹ ಕುತ್ಸಿತ ಪ್ರವೃತ್ತಿಯನ್ನು ಖಂಡಿಸುವುದೂ, ಧರ್ಮಾನುಕೂಲ ಮತ್ತು ನೀತಿಯುಕ್ತವಾದ ರೀತಿ ಯಲ್ಲಿ ನಿಯೋಗವಿಧಿಯನ್ನು ವ್ಯವಸ್ಥಿತರೀತಿಯಲ್ಲಿಡುವುದೂ, ವಿದ್ವಾಂ ಸರ ಮುಖ್ಯ ಕರ್ತವ್ಯವಾಗಿರುತ್ತದೆ.

ನದತ್ವಾಕಸ್ಯ ಚಿತ್ಕನ್ಯಾಂ ಪುನರ್ದದ್ಯಾದ್ವಿಚಕ್ಷಣಃ ।
ದತ್ವಾಪುನಃಪ್ರಯಚ್ಛನ್ಹಿ ಪ್ರಾಪ್ನೋತಿ ಪುರುಷಾನೃತಂ ॥

ಮನು ಅ. ೯, ೭೧.

ಅರ್ಥ:—ಯಾರಾದರೊಬ್ಬನಿಗೆ ಬುದ್ಧಿವಂತನಾದವನು ಒಮ್ಮೆ ಕನ್ಯೆಯನ್ನು ಕೊಟ್ಟು ಪುನಃ ಕೊಡಬಾರದು. ಕೊಟ್ಟದ್ದನ್ನು ಪುನಃ ಕೊಡುವುದರಿಂದ ಮನುಷ್ಯನು ಸುಳ್ಳುಗಾರನಾಗುತ್ತಾನೆ." ಈ ಶ್ಲೋಕವು ವಿಧವಾವಿವಾಹವನ್ನು ಖಂಡಿಸುವುದಿಲ್ಲ. ಇಲ್ಲಿ ವಿಧವೆಯ ವರ್ಣನೆಯೇ ಕಂಡುಬರುವುದಿಲ್ಲ. ಹಾಗೆ ಕಂಡುಬರುವುದಾದರೆ ಸಮರ್ಥನಾಯುಕ್ತವಾದ ಮುಂದಿನ ಶ್ಲೋಕವನ್ನು ಹೇಗೆ ಸಮರ್ಥಿಸ ಬಹುದು? ಒಬ್ಬನು ತನ್ನ ಕನ್ಯೆಯನ್ನು ಒಬ್ಬನಿಗೆ ವಿವಾಹಮಾಡಿಕೊಟ್ಟ ಮೇಲೆ ಪುನಃ ಆಕೆಯನ್ನು ಆತನಿಂದ ತಪ್ಪಿಸಿ ಇನ್ನೊಬ್ಬನಿಗೆ ಕೊಡಬಾರ ದೆಂಬುದೇ ಮೇಲಿನ ಶ್ಲೋಕದ ನಿಜವಾದ ಅರ್ಥವು. ಇನ್ನು ಪುನರ್ವಿ ವಾಹದ ಸಮರ್ಥನೆಯನ್ನು ಮನುಸ್ಮೃತಿಯು ಹೇಗೆ ಮಾಡುತ್ತದೆಂಬು ದನ್ನು ನೋಡಿರಿ:—

ಪ್ರೋಷಿತೋ ಧರ್ಮ ಕಾರ್ಯಾರ್ಥಂ ಪ್ರತೀಕ್ಷ್ಯೋಽಷ್ಟೌ
ನರಃ ಸಮಾಃ ।
ವಿದ್ಯಾರ್ಥಂ ಷಟ್ ಯಶೋಽರ್ಥಂ ವಾ ಕಾಮಾರ್ಥಂ
ತ್ರೀಂಸ್ತು ವತ್ಸರಾನ್ ॥

ಮನು ಅ. ೯, ೭೬.

ಅರ್ಥ:— "ಧರ್ಮಕಾರ್ಯಾರ್ಥವಾಗಿ ಪರದೇಶಕ್ಕೆ ಹೋದ ಪತಿಯ ಬರೋಣವನ್ನು ಎಂಟು ವರ್ಷಗಳ ವರೆಗೂ, ವಿದ್ಯೆ ಅಥವಾ ಯಶಸ್ಸನ್ನು ಸಂಪಾದಿಸಲಿಕ್ಕೆ ಹೋದವನನ್ನು ಆರು ವರ್ಷಗಳ ವರೆಗೂ, ಇತರ ಕಾರ್ಯಗಳಲ್ಲಿ ಹೋದವನನ್ನು ಮೂರು ವರ್ಷಗಳ ವರೆಗೂ ನಿರೀಕ್ಷಣೆ ಮಾಡಿಕೊಂಡಿರತಕ್ಕದ್ದು."

ಈ ಅವಧಿಯ ಅನಂತರ ಆಕೆಯು ಬೇರೆ ಪತಿಯನ್ನು ವರಿಸಿಕೊಳ್ಳಬೇಕೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಈ ಅಭಿಪ್ರಾಯವನ್ನು ನಾರದಸ್ಮೃತಿಯು ಇನ್ನಷ್ಟು ಉತ್ತಮರೀತಿಯಲ್ಲಿ ಸಮರ್ಥಿಸುತ್ತದೆ.

ಅಷ್ಟೌ ವರ್ಷಾಣ್ಯುದೀಕ್ಷೇತಬ್ರಾಹ್ಮಣೀ ಪ್ರೋಷಿತಂ ಪತಿಂ ।
ಅಪ್ರಸೂತಾ ತು ಚತ್ವಾರಿ ಪರತೋಽನ್ಯಂ ಸಮಾಶ್ರಯೇತ್ ॥

ನಾರದಸ್ಮೃತಿ ಅ. ೧೨, ಶ್ಲೋ. ೯೮.

"ಕ್ಷತ್ರಿಯಾ ಷಟ್‌ಸಮಾಸ್ತಿಷ್ಠೇದಪ್ರಸೂತಾ ಸಮಾಶ್ರಯಂ ।
ವೈಶ್ಯಾಪ್ರಸೂತಾ ಚತ್ವಾರಿ ದ್ವೇವರ್ಷೇ ತ್ವಿತರಾವಸೇತ್ ॥
ನ ಶೂದ್ರಾಯಾ ಸ್ಮೃತಾಃ ಕಾಲಯೇಷ ಪ್ರೋಷಿತ
ಯೋಷಿತಾಮ್ ।
ಜೀವತಿ ಶ್ರೂಯಮಾಣೇತು ಸ್ಯಾದೇತ ದ್ವಿಗುಣೋಽವಧಿಃ ॥"

ನಾರದಸ್ಮೃತಿ, ಅ. ೧೨, ಸೂ. ೯೯, ೧೦೦.

ಪಂಡಿತ ವಿಷ್ಣು ಶಾಸ್ತ್ರಿಯವರ ಭಾಷ್ಯ:—

ನಷ್ಟ ಇತಿ । ನಷ್ಟಾದಿಷು ಪಂಚಸ್ವಾಪತ್ಸು ನಾರೀಣಾಂ ವಿವಾಹಿತ ಸ್ತ್ರೀಣಾಂ ಅನ್ಯಃ ಪತಿರ್ವಿಧೀಯತೇ ಕರ್ತವ್ಯತಯಾ ಪ್ರತಿ

ಪಾದ್ಯತೇ । ಅಪ್ರವೃತ್ತಾ ವಿತ್ಯಸ್ಯ ಪ್ರವತ್ಯಭಾವೇ ನಾಮ ವಾರ್ತಾ ಭಾವೇ ಇತ್ಯರ್ಥಃ । ಉಕ್ತಂಚಾಮರಸಿಂಹೇನ ವಾರ್ತಾ ಪ್ರವೃತ್ತಿ ವೃತ್ತಾಂತ ಉದಂತ ಇತಿ । ಜೀವತಿ ಶ್ರೂಯ ಮಾಣೇತು ಇತಿ– ಪೂರ್ವಾರ್ಧೇನಜೀವದ್ವಾರ್ತಾಯಾಂ ಶ್ರೂಯಮಾಣಾಯಾಂ ದ್ವಿಗುಣ ಕಾಲ–ಪ್ರತೀಕ್ಷಾಮುಕ್ತ್ವಾ ಅಶ್ರೂಯಮಾಣಾಯಾಂ ತಸ್ಯಾಂ ಪ್ರಜಾ ಪತೇರ್ಬ್ರಹ್ಮಣಃ ಏಷಾ ಅಷ್ಟವರ್ಷಾದಿ ಕಾಲಾಪೇಕ್ಷಾ ಕಾರ್ಯೇತಿ ದೃಷ್ಟಿರ್ದರ್ಶನಂ ಮತಮಸ್ತೀತಿ ಪ್ರತಿಜಾನೀತ ಇತ್ಯರ್ಥಃ ।

ಭಾಷಾರ್ಥ:—"ಬ್ರಾಹ್ಮಣಸ್ತ್ರೀಯು, ಪರದೇಶಕ್ಕೆ ಹೋದ ತನ್ನ ಪತಿಯನ್ನು ಎಂಟು ವರ್ಷಗಳ ವರೆಗೂ, ಸಂತಾನರಹಿತಳಾಗಿದ್ದರೆ ನಾಲ್ಕು ವರ್ಷಗಳ ವರೆಗೂ ಕಾದು ನಂತರ ಬೇರೆ ಪತಿಯ ಆಶ್ರಯ ವನ್ನು ಪಡೆಯಬೇಕು. ಇದೇ ಪ್ರಕಾರ ಕ್ಷತ್ರಿಯ ಸ್ತ್ರೀಯು ಮೂರು ಯಾ ಆರು ವರ್ಷಗಳ ವರೆಗೂ, ವೈಶ್ಯಸ್ತ್ರೀಯು ನಾಲ್ಕು ವರ್ಷಗಳ ವರೆಗೂ ಕಾಯತಕ್ಕದ್ದು. ಶೂದ್ರ ಸ್ತ್ರೀಗೆ ಈ ತರದ ಕಾಲವಿಧಿ ಇಲ್ಲ. ಪರಂತು, ತನ್ನ ಪತಿಯು ಪರದೇಶದಲ್ಲಿ ಜೀವಂತನಾಗಿದ್ದಾನೆಂಬುದು ತಿಳಿದುಬಂದ ಕೂಡಲೇ ಇದಕ್ಕಿಂತ ಎರಡು ಪಾಲು ಅವಧಿಯ ವರೆಗೆ ಕಾಯಬೇಕು."

ಉದ್ವಾಹಿತಾಪಿ ಸಾಕನ್ಯಾನಚೇತ್

ಸಂಪ್ರಾಪ್ತ { ಮೈಥುನಾ / ಯೌವನಾ }

ಪುನಃ ಸಂಸ್ಕಾರ ಮರ್ಹೇತ { ಯಥಾಕನ್ಯಾ ತಥೈವಸಾ }
ಲಭೇತ ನ್ಯಾಯ್ಯಾನ್ಯಂ ಭರ್ತಾರಂ

ಪಂಡಿತ ವಿಷ್ಣುಶಾಸ್ತ್ರಿಯವರ ಭಾಷ್ಯ:—

"ವಿವಾಹಿತಾಪಿ ಕನ್ಯಾಯದಿ ಜಾತ ಪುರುಷ ಸಂಗಾ ನ ಸ್ಯಾತ್ತದಾ ಸಾಕನ್ಯೇವೇತಿ। ಪುನಃಸಂಸ್ಕಾರಂ ಪುನರ್ವಿವಾಹಾಂ ಸಂಸ್ಕಾರ ಮರ್ಹೇಶ್ಚೈವ । ಏವಕಾರಣೇ ತಸ್ಯಾಸುತರಾಂ ಗೌಣತ್ವಾಭಾವೋ ಬೋಧ್ಯತೇ ॥"

ಭಾವಾರ್ಥ:— "ಕನ್ಯೆಯು ವಿವಾಹವಾಗಿದ್ದು ಪತಿಯೊಡನೆ ಸಂಸರ್ಗವಾಗದಿದ್ದಲ್ಲಿ ಅವಳಿಗೆ ಪುನರ್ವಿವಾಹ ಮಾಡಬೇಕು. ಯಾಕೆಂದರೆ ಅವಳು ಅವಿವಾಹಿತ ಕನ್ಯೆಗೆ ಸಮಾನಳು."

ಈ ಪ್ರಮಾಣವು ಸಹ ಮನುಸ್ಮೃತಿಗೆ ಅನುಕೂಲವಾಗಿದೆ. ಇದು ಹೊರತು ಮನುಸ್ಮೃತಿಯ ಆಧಾರದಿಂದಲೇ ನಾರದಸ್ಮೃತಿಯು ರಚಿತವಾಗಿದೆ. ಅದರಲ್ಲಿರುವ ೮೫೪ ಶ್ಲೋಕಗಳಲ್ಲಿ ೫೭ ಶ್ಲೋಕಗಳು ಮನುಸ್ಮೃತಿಯ ಶ್ಲೋಕಗಳಂತೆಯೇ ಇವೆ.

ಈಗ ನಾವು ಮೂರನೆಯ ಮತ್ತು ನಾಲ್ಕನೆಯ ಪ್ರಶ್ನೆಗಳ ಕುರಿತು ವಿವರಿಸುವೆವು. ಪುನರ್ವಿವಾಹ ಮಾಡಿಕೊಳ್ಳುವ ಸ್ತ್ರೀಪುರುಷರನ್ನು ಜಾತಿಬಹಿಷ್ಕೃತರನ್ನಾಗಿ ಮಾಡುವ ಒಂದು ಶ್ಲೋಕವನ್ನೂ ವಿವರಿಸಿಲ್ಲ. ಹಾಗೆ ವಿವರಿಸುವದಾದರೆ ಇತರ ಶ್ಲೋಕಗಳಲ್ಲಿ ಪುನರ್ವಿವಾಹ ಮತ್ತು ನಿಯೋಗದ ವಿಧಿಗಳನ್ನು ಹೇಗೆ ಸಮರ್ಥಿಸುತ್ತಿದ್ದರು? ಆದುದರಿಂದ ಮನುಸ್ಮೃತಿಯ ಆಧಾರದಂತೆ ವಿಧವಾವಿವಾಹವು ಶಾಸ್ತ್ರ ವಿರುದ್ಧವೆಂದು ಹೇಳಲ್ಪಡುವುದಿಲ್ಲ.

ನಾಲ್ಕನೆಯ ಪ್ರಶ್ನೆ ಏನೆಂದರೆ:— ಪುನರ್ವಿವಾಹಿತಳಾದ ವಿಧವಾ ಸ್ತ್ರೀಯ ಮೊದಲಿನ ಪತಿಯ ದಾಯಭಾಗವು ಸಂತಾನಕ್ಕೆ ದೊರೆಯುತ್ತದೋ?

ಈ ಕುರಿತು ವಿಸ್ತೃತ ವಿಚಾರವನ್ನು ಮುಂದಕ್ಕೆ ಕೊಡುವೆವು. ಮೊದಲಾಗಿ ಯಾಜ್ಞವಲ್ಕ್ಯಸ್ಮೃತಿಯ ಆಚಾರ ಅಧ್ಯಾಯ ೬೭ನೇ ಶ್ಲೋಕವನ್ನು ನೋಡೋಣ.

**ಅಕ್ಷತಾ ಚ ಕ್ಷತಾ ಚೈವ ಪುನರ್ಭೂಃ ಸಂಸ್ಕೃತಾ ಪುನಃ ।**
**ಸ್ವೈರಿಣೀ ಯಾಪತಿಂ ಹಿತ್ವಾ ಸವರ್ಣಂ ಕಾಮತಃ ಶ್ರಯೇತ್ ॥**
**ಈ ಶ್ಲೋಕಕ್ಕೆ ಮಿತಾಕ್ಷರೀ ಟೀಕೆ ಹೇಗಿರುವುದೆಂದರೆ:—**

"ಅನ್ಯಪೂರ್ವಾದ್ವಿವಿಧಾ ಪುನರ್ಭೂಃ ಸ್ವೈರಿಣೀಚೇತಿ । ಪುನರ್ಭೂರಪಿ ದ್ವಿವಿಧಾಕ್ಷತಾ ಚಾಕ್ಷತಾಚ । ತತ್ರಕ್ಷತಾ ಸಂಸ್ಕಾರಾತ್ಪ್ರಾ

**ಗೇವ ಪುರುಷ ಸಂಬಂಧ ದೂಷಿತಾ । ಯಾಪುನಃ ಕೌಮಾರೇ ಪತಿಂ ತ್ಯಕ್ತ್ವಾ ಕಾಮತಃ ಸವರ್ಣಮಾಶ್ರಯತಿ ಸಾ ಸ್ವೈರಿಣೀತಿ ।।"**

ತಾತ್ಪರ್ಯ:—ಇಲ್ಲಿ ಎರಡು ವಿಧದ ಸ್ತ್ರೀಯರ ಕುರಿತು ವರ್ಣಿಸಲ್ಪಟ್ಟಿದೆ. 'ಅನನ್ಯಪೂರ್ವಾ ಮತ್ತು ಅನ್ಯಪೂರ್ವಾ' ಯಾರ ವಿವಾಹ ಸಂಸ್ಕಾರದ ಮೊದಲು ಯಾರ ಕೂಡೆಯೂ ವಿವಾಹ ಅಥವಾ ಸಂಸರ್ಗ (ಅನನ್ಯಪೂರ್ವಿತಾಂ ದಾನೇನೋಪಭೋಗೇನ ವ ಪುರುಷಾಂತರ ಪರಿಗ್ರಹಿತಾಮಿತಿ ಮಿತಾಕ್ಷರಾ)ಆಗಿಲ್ಲವೋ ಅವಳು "ಅನನ್ಯ ಪೂರ್ವಳೆಂದೂ" ಯಾವಾಕೆಗೆ ವಿವಾಹದ ಮೊದಲು ಅನ್ಯಪುರುಷನೊಡನೆ ಸಂಬಂಧವಾಗಿತ್ತೋ ಅಂಥವಳು ಅನ್ಯಪೂರ್ವಾ ಎಂದೂ ಕರೆಯಲ್ಪಡುತ್ತಾಳೆ. ಅನ್ಯಪೂರ್ವಾ ಸ್ತ್ರೀಯಲ್ಲಿಯೂ ಎರಡು ಭೇದಗಳಿವೆ. ಒಬ್ಬಳು ಸ್ವೈರಿಣಿ, ಇನ್ನೊಬ್ಬಳು ಪುನಭೂರ್ಃ ಎಂದು ಕರೆಯಲ್ಪಡುತ್ತಾಳೆ.

ಪ್ರಶ್ನೆ:—ಪುನಭೂರ್ಃ ಎಂದರೇನು?

**ಅಕ್ಷತಾ ಭೂಯಃ ಸಂಸ್ಕೃತಾ ಪುನಭೂರ್ಃ ।।**

ಬೌಧಾಯನ ಶಾಸ್ತ್ರ.

"ಲಗ್ನವಾಗಿ ಬ್ರಹ್ಮಚಾರಿಣಿಯಾಗಿದ್ದರೆ ಪುನಃಸಂಸ್ಕಾರವನ್ನು ಹೊಂದುವವಳು ಪುನಭೂರ್ಃ ಎಂದು ಕರೆಯಲ್ಪಡುತ್ತಾಳೆ."

**ಅಕ್ಷತಾಚಕ್ಷತಾ ಚೈವ ಪುನಭೂರ್ಃ ಸಂಸ್ಕೃತಾಪುನಃ ।**

ಯಾಜ್ಞವಲ್ಕ್ಯಸ್ಮೃತಿ.

"ಅಕ್ಷತಯೋನಿಯಾಗಿರಲಿ ಅಥವಾ ಕ್ಷತಯೋನಿಯಾಗಿರಲಿ ಪುನಃಸ್ಸಂಸ್ಕಾರದಿಂದ ಆಕೆಯು ಪುನಭೂರ್ಃ ಎನ್ನಲ್ಪಡುವಳು."

**ಯಾ ಚ ಕ್ಲೀಬಂ ಪತಿತ ಮುನ್ಮತ್ತಂ ವಾ ಪತಿಮುತ್ಸೃಜ್ಯ ।**
**ಯಾನ್ಯಂ ಪತಿಂ ವಿಂದತೇ ಮೃತೇವಾ ನಾ ಪುನಭೂರ್ಭವತಿ ॥**

ವಸಿಷ್ಠಧರ್ಮಶಾಸ್ತ್ರ.

"ನಪುಂಸಕನಾದ ಕಾರಣ, ಪತಿತನಾದ ಕಾರಣ, ಇಲ್ಲವೆ ಉನ್ಮತ್ತನಾದ ಕಾರಣ ಪತಿಯನ್ನು ಬಿಟ್ಟು ಬೇರೆಯವನನ್ನು ಲಗ್ನವಾದವಳನ್ನು ಅಥವಾ ಗಂಡನ ಮರಣದ ಮೂಲಕ ಬೇರೆ ಲಗ್ನವಾದವಳನ್ನು ಪುನರ್ಭೂಃ ಎಂದು ಕರೆಯುತ್ತಾರೆ.

ಪುನರ್ಭೂಃಸ್ತ್ರೀಯಲ್ಲಿಯೂ ಮತ್ತೆರಡು ಭೇದಗಳಿವೆ:—ಒಬ್ಬಳು ಕ್ಷತಾ ಅಂದರೆ ಮೊದಲಿನ ಪತಿಯೊಡನೆ ಸಂಸರ್ಗಮಾಡಿಸಿದವಳು. ಇನ್ನೊಬ್ಬಳು ಅಕ್ಷತಾ ಅಂದರೆ ವಿವಾಹಸಂಸ್ಕಾರ ಮಾತ್ರವೇ ಆಗಿದ್ದು ಸಂಸರ್ಗ ಆಗದವಳು. ಈ ಎರಡು ಪ್ರಕಾರದ ಸ್ತ್ರೀಯರನ್ನೂ ಪುನರ್ವಿವಾಹಕ್ಕೆ ಅಧಿಕಾರಿಣಿಗಳೆಂದು ಸ್ಪಷ್ಟವಾಗಿ ಹೇಳಿರುವರು. ಇದು ಹೊರತು ಈ ಸ್ಮೃತಿಯು ನಿಯೋಗವನ್ನು ಸಹ ಸಮರ್ಥಿಸುತ್ತದೆ.

ಅಪುತ್ರಾಂಗುರ್ವನುಜ್ಞಾತೋ ದೇವರಃ ಪುತ್ರಕಾಮ್ಯಯಾ ।
ಸಪಿಂಡೋ ವಾ ಸಗೋತ್ರೋ ವಾ ಘೃತಾಭ್ಯಕ್ತಾಋತಾವಿಯಾತ್ ॥
ಆಗರ್ಭ ಸಂಭವಾದ್ಗಚ್ಛೇತ ಪತಿತಸ್ತ್ವನ್ಯಥಾ ಭವೇತ್ ।
ಅನೇನ ವಿಧಿನಾ ಜಾತಃ ಕ್ಷೇತ್ರ ಜ್ಯೋಽಸ್ಯ ಭವೇತ್ ಸುತಃ॥

ಯಾ. ಸ್ಮೃ. ಅಧ್ಯಾಯ, ವಿವಾಹ ಪ್ರಕರಣ ೬೮, ೬೯.

ಮಿತಾಕ್ಷರಿ ಟಿಪ್ಪಣಿ:— "ಅಪುತ್ರಾಮ ಲಬ್ಧ ಪುತ್ರಾಂ ಪಿತ್ರಾದಿಭಿಃ ಪುತ್ರಾರ್ಥ ಮನುಜ್ಞಾತೋ ದೇವರೋಭರ್ತುಃ ಕನೀಯಾನ ಭ್ರಾತಾ ಸಪಿಂಡೋವಾ ಉಕ್ತಲಕ್ಷಣಃ ಸಗೋತ್ರೋವಾ । ಏತೇಷಾಂ ಪೂರ್ವಸ್ಯ ಪೂರ್ವಸ್ಯಾಭಾವೇ ಪರಃ ಪರಃ ಘೃತಾ ಭ್ಯಕ್ತ ಸರ್ವಾಂಗಃ ಋತಾವೇವ ವಕ್ಷ್ಯಮಾಣ ಲಕ್ಷಣೇ ಇಯಾದ್ ಗಚ್ಛೇತ್ ಆಗರ್ಭೋತ್ಪತ್ತೇಃ । ಊರ್ಧ್ವಂ ಪುನರ್ಗಚ್ಛನ್ ಅನ್ಯೇನ ವಾ ಪ್ರಕಾರೇಣ ತದಾ ಪತಿತೋಭವತಿ । ಅನೇನವಿಧಿನೋತ್ಪನ್ನಃ ಪೂರ್ವಪರಿಣೇತುಃ ಕ್ಷೇತ್ರಜಃ ಪುತ್ರೋಭವೇತ್ ॥

ಅರ್ಥಾತ್:—ಸಂತಾನರಹಿತಳಾದ ಸ್ತ್ರೀಯೊಂದಿಗೆ ವಿದ್ವಾಂಸರ ಆಜ್ಞೆಯಂತೆ ಪುತ್ರೇಚ್ಛೆಯಿಂದ ಪತಿಯ ತಮ್ಮನು ಸಪಿಂಡ ಅಥವಾ ಸಗೋತ್ರದವನಾಗಿದ್ದು ಶರೀರಕ್ಕೆ ಘೃತವನ್ನು ಲೇಪಿಸಿ ಋತುಕಾಲದಲ್ಲಿ ಸಮಾಗಮನವನ್ನು ಗರ್ಭವು ನಿಲ್ಲುವ ತನಕ ಮಾಡತಕ್ಕದ್ದು. ಇದನ್ನು ಮಿಕ್ಕಿ ನಡೆದಲ್ಲಿ ಪತಿತರಾಗುವರು. ಈ ಪ್ರಕಾರ ಉತ್ಪನ್ನನಾದ ಪುತ್ರನು ಕ್ಷೇತ್ರಜನೆಂದು ಹೇಳಲ್ಪಡುವನು.

ಇನ್ನು ನಾವು ಪರಾಶರಸ್ಮೃತಿಯ ಪ್ರಮಾಣವನ್ನು ಕೊಡುತ್ತೇವೆ. ಏಕೆಂದರೆ:—

**ಕೃತೇತುಮಾನವಾ ಧರ್ಮಾಸ್ತ್ರೇತಾಯಾಂ ಗೌತಮಾಃಸ್ಮೃತಾಃ।**
**ದ್ವಾಪರೇ ಶಂಖಲಿಖಿತಾಃ ಕಲೌಪರಾಶರಾಸ್ಮೃತಾಃ ॥**

ಪ. ಸ್ಮೃ. ಅಧ್ಯಾಯ ೧, ಶ್ಲೋ. ೨೪, ೨೫.

ಅರ್ಥಾತ್:– ಸತ್ಯಯುಗದಲ್ಲಿ ಮನುಸ್ಮೃತಿ, ತ್ರೇತದಲ್ಲಿ ಗೌತಮ ಸ್ಮೃತಿ, ದ್ವಾಪರದಲ್ಲಿ ಶಂಖಲಿಖಿತ ಮತ್ತು ಕಲಿಯುಗದಲ್ಲಿ ಪರಾಶರ ಸ್ಮೃತಿಯು ಪ್ರಮಾಣವಾಗಿರುತ್ತದೆ.

ಒಂದೊಂದು ಯುಗಗಳಿಗೆ ಬೇರೆಬೇರೆ ಸ್ಮೃತಿಗಳು ಬೇಕೆಂಬುದು ನಮ್ಮಭಿಪ್ರಾಯವಲ್ಲ. ಇದರ ಅನಾವಶ್ಯಕತೆಯ ಕುರಿತು ಕಪಿಲಮುನಿಗಳು ಸಾಂಖ್ಯದರ್ಶನದಲ್ಲಿ ಸ್ಪಷ್ಟವಾಗಿ ಬರೆದಿದ್ದಾರೆ. ಏನೆಂದರೆ:—

**ನ ಕಾಲಯೋಗ ತೋ ವ್ಯಾಪಿನೋ ನಿಸ್ಯ ಸರ್ವ ಸಂಬಂಧಾತ್ ।**

**ಸಾಂಖ್ಯ ಅ. ೧, ಸೂ. ೧೨.**

ಕಾಲಭೇದದಿಂದ ಮನುಷ್ಯನ ಕರ್ತವ್ಯದಲ್ಲಿ ಭೇದಬರುವುದಿಲ್ಲ.

**ಅನ್ಯೇ ಕೃತಾಯುಗೇ ಧರ್ಮಾಸ್ತ್ರೇತಾಯಾಂ ದ್ವಾಪರೇಽಪರೇ ।**
**ಅನ್ಯೇ ಕಲಿಯುಗೇ ನೃಣಾಂ ಯುಗಃಹ್ರಾನುಪರೂಪತಃ ॥**

**ಮ. ಅ. ೧, ೮೫.**

ಕೃತ, ತ್ರೇತ, ದ್ವಾಪರ ಮತ್ತು ಕಲಿಯುಗದ ಧರ್ಮಗಳು ಬೇರೆ ಬೇರೆಯಾಗಿವೆ. ಈ ಅಭಿಪ್ರಾಯವನ್ನು ಸರಿಯೆಂದು ತಿಳಿದುಕೊಂಡರೂ

ಮನುಸ್ಮೃತಿಯು ಕೇವಲ ಕೃತಯುಗಕ್ಕಾಗಿ ಬರೆಯಲ್ಪಟ್ಟಿದೆಯೆಂದು ಎಲ್ಲಿಯೂ ಹೇಳಿಲ್ಲ. ಇದು ಹೊರತು ಕೃತಯುಗದ ಯಾವಯಾವ ಧರ್ಮಗಳನ್ನು ಕಲಿಯುಗದಲ್ಲಿ ಆಚರಿಸಬಾರದೆಂಬುದನ್ನೂ ಮನು ಮಹಾರಾಜರು ತನ್ನ ಗ್ರಂಥದಲ್ಲಿ ಎಲ್ಲಿಯೂ ತೋರಿಸಿಕೊಟ್ಟಿಲ್ಲ. ಈಗಿನ ಕಾಲದ ಒಂದೊಂದು ಸಂಪ್ರದಾಯದವರು ಕೆಲವೊಂದು ಸ್ಮೃತಿಗಳನ್ನು ಮಾನಿಸುವ ಕಾರಣದಿಂದಲೇ ನಮಗೆ ಸಾಧ್ಯವಾದ ಮಟ್ಟಿಗೆ ಪ್ರತಿಯೊಂದು ಸ್ಮೃತಿಯ ಆಧಾರಗಳನ್ನು ಇಲ್ಲಿ ಸಂಗ್ರಹಿಸಿದ್ದೇವೆ.

ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಪತಿತೇಪತೌ ।
ಪಂಚತ್ಸ್ವಾಪತ್ಸು ನಾರೀಣಾಂ ಪತಿರನ್ಯೋವಿಧೀಯತೇ ॥

(೧೯೩೫ನೇ ಸಂವತ್ಸರದಲ್ಲಿ ಮುಂಬಾಯಿಯ ವೆಂಕಟೇಶ್ವರ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟ ಪಾರಾಶರಸ್ಮೃತಿ ಅಧ್ಯಾಯ ೪, ಶ್ಲೋ. ೩೦.)

ಅರ್ಥ:—ಪತಿ ಕಾಣದೆ ಹೋದಲ್ಲಿ, ಮರಣಪಟ್ಟರೆ, ಸನ್ಯಾಸಿಯಾದರೆ, ನಪುಂಸಕ ಅಥವಾ ಪತಿತನಾದರೆ ಈ ಐದು ವಿಧದ ಆಪತ್ಕಾಲಗಳಲ್ಲಿ ಸ್ತ್ರೀಯರಿಗೆ ಎರಡನೇ ವಿವಾಹವನ್ನು ಮಾಡಿಕೊಳ್ಳುವ ಅಧಿಕಾರವಿದೆ.

ಪಾರಾಶರಸ್ಮೃತಿಯು ವಿಧವಾವಿವಾಹ ವಿರೋಧಿಗಳಾಗಿರುವ ಪೌರಾಣಿಕರೆಲ್ಲರಿಗೂ ಪ್ರಮಾಣಗ್ರಂಥವಾಗಿದ್ದರೂ ಅವರೆಲ್ಲರೂ ಉಪರ್ಯುಕ್ತ ವಿಷಯವನ್ನು ಸಮರ್ಥಿಸುವ ಈ ಪ್ರಮಾಣವನ್ನು ಕಣ್ಣು ಮುಚ್ಚಿಕೊಂಡು ಓದಿಬಿಡುತ್ತಾರೆ. ಇವರು ವಿಧವಾವಿವಾಹವನ್ನು ಸಮರ್ಥಿಸುವುದೂ ಇಲ್ಲ. ಪಾರಾಶರಸ್ಮೃತಿಯನ್ನು ತ್ಯಜಿಸುವುದೂ ಇಲ್ಲ. ಪರಂತು, ತಮ್ಮ ಸ್ವಾರ್ಥಸಿದ್ಧಿಗೋಸ್ಕರ ಇದೊಂದು ಶ್ಲೋಕದ ಅರ್ಥವನ್ನು ಅಡಿಮೇಲುಮಾಡಿ ವಿಧವಾವಿವಾಹವನ್ನು ಶಾಸ್ತ್ರವಿರುದ್ಧವೆಂದು ಸಿದ್ಧಗೊಳಿಸಲು ವ್ಯಾಕರಣಾದಿ ಸಾಹಿತ್ಯಗಳನ್ನು ಎಳೆದೆಳೆದು ಪ್ರಯಾಸಪಟ್ಟಷ್ಟು ಬೇರೆ ಯಾವ ಕೆಲಸಕ್ಕೂ ಕೈಹಾಕಲಿಲ್ಲವೆನ್ನಬಹುದು. ಆದರೂ ಸ್ಮೃತಿವಚನವು ಇದ್ದಂತೆಯೇ ಉಳಿಯಿತು. ಇಂತಹವರ ಕುರಿತು ಭರ್ತೃಹರಿಯು ಹೇಳಿರುವುದೇನಂದರೆ:—

ಪುರಾ ವಿದ್ವತ್ತಾಸೀದುಪಶಮವಿಶಾಂ ಕ್ಲೇಶ ಹತಯೇ ।
ಗತಾಕಾಲೇನಾಸೌ ವಿಷಯ ಸುಖ ಸಿದ್ಧ್ಯೈ ವಿಷಯಿಣಾಂವ್ ॥

ಮೊದಲು ವಿದ್ಯೆಯು ದುಃಖಿಗಳ ದುಃಖನಿವಾರಣೆಗಾಗಿ ಉಪಯೋಗಿಸಲ್ಪಡುತ್ತಿತ್ತು. ಪರಂತು ಈಗ ಕಾಲಗತಿಯಿಂದ ಅದು ವಿಷಯಾಭಿಲಾಷಿಗಳ ವಿಷಯ ಸುಖಗಳಿಗೆ ಉಪಯೋಗಿಸಲ್ಪಡುತ್ತಿದೆ.

ಈಗಿನಕಾಲದ ಅನೇಕ ಪಂಡಿತ ಮಂಡಳಿಗಳು ವಿಷಯ ಸುಖಕ್ಕಾಗಿಯೇ ವಿವಾಹವನ್ನು ಸಮರ್ಥಿಸುತ್ತವೆ. ಉತ್ತಮ ಜಾತಿಯ ಒಬ್ಬನು ಆರೇಳು ಸಲ ಮದುಮಗನಾಗುವುದಕ್ಕೂ ಸ್ವಲ್ಪವೂ ಸಂಕೋಚಿಸುವುದಿಲ್ಲ. ಪರಂತು, ಒಬ್ಬ ವಿಧವೆಯ ಹೃದಯಕಮಲದಲ್ಲಿ ಅನುದಿನವೂ ಉರಿಯುತ್ತಿರುವ ದುಃಖಾಗ್ನಿಯನ್ನು ಸಮಾಧಾನಗೊಳಿಸಲು ಯಾರೊಬ್ಬನೂ ಯತ್ನಿಸುವುದಿಲ್ಲ. ಇದಕ್ಕೆ ಬದಲಾಗಿ ಉರಿಯುವ ಅಗ್ನಿಗೆ ಘೃತಾಹುತಿಯನ್ನೀಯುವಂತೆ ಅಭಾಗಿನಿ ವಿತಂತುಗಳನ್ನು ತರತರದ ಪೀಡೆಗಳಿಗೆ ಒಳಪಡುವಂತೆ ತಮ್ಮ ಸಂಪೂರ್ಣ ಪಾಂಡಿತ್ಯವನ್ನು ಉಪಯೋಗಿಸುವರು. ಹಿಂದೂಸಮಾಜದಲ್ಲೆಲ್ಲಿಯೂ ಒಂದು ವರ್ಷದ ಶಿಶುವಿನ ಮೊದಲ್ಗೊಂಡು ನವಯೌವ್ವನೆಯರಾದ ಬಾಲಿಕೆಯ ವರೆಗಿನವರು ಬಲಾತ್ಕಾರದ ವೈಧವ್ಯದೀಕ್ಷಾವಿಧಿಯನ್ನು ಸಹಿಸಲಾರದೆ ಅನುದಿನವೂ ಕಣ್ಣೀರು ಸುರಿಸುತ್ತಿದ್ದಾರೆ. ಅವರಲ್ಲಿ ಕೆಲವರು ತಮ್ಮಲ್ಲಿನ ಮಾನಸಿಕ ವೇಗವನ್ನು ತಡೆಯಲಾರದೆಯೂ, ಇನ್ನು ಕೆಲವರು ಅತ್ತೆ, ಮಾವ, ಭಾವ, ಮೈದುನ ಮೊದಲಾದ ಸಂಬಂಧಿಕರ ನರಕಯಾತನೆಯನ್ನು ಸಹಿಸಲಾರದೆಯೂ ವಿಷಯ ಸುಖಾಭಿಲಾಷಿಯರ ಬಲೆಗೆ ಬಿದ್ದು ತಮ್ಮ ಸತೀತ್ವವನ್ನು ಕೆಡಿಸಿಕೊಂಡು ಭ್ರೂಣಹತ್ಯೆ, ಆತ್ಮಹತ್ಯೆ ಮುಂತಾದ ಘೋರ ಕೃತ್ಯಗಳನ್ನು ಮಾಡಿ ಈಶ್ವರಪ್ರದತ್ತವಾದ ಜೀವನವನ್ನೇ ವ್ಯರ್ಥಗೊಳಿಸುತ್ತಾರೆ. ಅದೃಷ್ಟವಶಾತ್ ಈ ತರದ ಅನಾಹುತಗಳಿಂದ ತಪ್ಪಿದ ಹಲಕೆಲವರು ಜೀವನಸ್ವಾತಂತ್ರ್ಯಕ್ಕಾಗಿ ಕ್ರೈಸ್ತ ಅಥವಾ ಮಹಮ್ಮದೀಯ ಮತವನ್ನು

ಸ್ವೀಕರಿಸುತ್ತಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿಯೂ ಸ್ವಾರ್ಥಾಂಧರು, ಉದರಂಭರರೂ ಆಗಿರುವ ಕೆಲವು ಪಂಡಿತವರ್ಗದವರು ತಮ್ಮ ಕೆಲವು ಕಪೋಲಕಲ್ಪಿತ ಗ್ರಂಥಗಳ ಆಧಾರದಿಂದ ವಿಧವೆಯರನ್ನು ಮತ್ತಷ್ಟು ತಮ್ಮ ಅಧೀನದಲ್ಲಿಟ್ಟುಕೊಂಡು ಅವರ ಕೂಗು ಯಾರಿಗೂ ಕೇಳದಂತೆಯೂ ಅವರು ಸುರಿಸುತ್ತಿರುವ ಕಣ್ಣೀರನ್ನು ಯಾರೊಬ್ಬರೂ ನೋಡದಂತೆಯೂ ಮಾಡುವ ಪ್ರಯತ್ನದಲ್ಲಿ ಮಗ್ನರಾಗಿದ್ದಾರೆ. ಒಂದುವೇಳೆ ಒಬ್ಬ ಪಂಡಿತನು ಬಹಳವಾಗಿ ಹಸಿದು ಬಂದು ಭೋಜನ ವನ್ನು ಕೇಳಿದಲ್ಲಿ ಅವನಿಗೆ ಊಟಕೊಡುವ ಬದಲಾಗಿ ಭೋಜನ ಶಬ್ದದ ಅರ್ಥವನ್ನು ವ್ಯಾಕರಣ ಸೂತ್ರಕ್ಕೆ ಸರಿಯಾಗಿ ಹಚ್ಚಬೇಕೆಂದು ಹೇಳಿ ದರೆ ಆ ಮನುಷ್ಯನ ಮನಸ್ಸು ಹೇಗಾದೀತು?

ಇದೇ ಪ್ರಕಾರ ಲಕ್ಷಗಟ್ಟಳೆ ವಿಧವೆಯರ ದುಃಖದಿಂದ ಅಖಿಲ ಭಾರತವರ್ಷವು ಪೀಡನೆಗೊಳಗಾಗಿರುವಲ್ಲಿ ನಾವು ಧರ್ಮಗ್ರಂಥ ಗಳಲ್ಲಿನ ವ್ಯಾಕರಣಸೂತ್ರಗಳಿಗಾಗಿ ಅರ್ಥವನ್ನು ಬಿಟ್ಟು ಅನರ್ಥವನ್ನು ಕೈಕೊಂಡರೆ ಅಕ್ಕಿಯನ್ನು ಬಿಸುಟು ತೌಡನ್ನು ಮುಕ್ಕಿದಂಥಾಗುವು ದಿಲ್ಲವೇ? ಈ ರೀತಿಯ ವರ್ತನವು ಮಾನವನಿಗೆ ಯೋಗ್ಯವಾದುದಲ್ಲ ವೆಂಬುದನ್ನು ಬುದ್ಧಿವಂತರಾದವರು ಅಲ್ಲಗಳೆಯರು. ಇಂತಹ ತಿಳು ವಳಿಕೆಯನ್ನು ತಂದುಕೊಂಡು ಹಿಂದೂ ವಿಧವೆಯರ ದುಃಖನಿವಾರಣೆ ಗಾಗಿ ಸಕಲ ಪ್ರಯತ್ನವನ್ನು ಮಾಡುವುದು ಧರ್ಮಾಭಿಮಾನಿಯಾದ ಪ್ರತಿಯೊಬ್ಬನ ಕರ್ತವ್ಯವಾಗಿರುತ್ತದೆ. ಇನ್ನು, ಮೇಲೆ ವಿವರಿಸಿದ ಶ್ಲೋಕದ ಕುರಿತು ವಿಧವಾವಿವಾಹ ವಿರೋಧಿಗಳ ಆಕ್ಷೇಪಗಳ ಕಡೆಗೆ ಗಮನ ಕೊಡೋಣ.

ಪ್ರಶ್ನೆ:—(೧) "ಪತಿ" ಶಬ್ದದ ಸಪ್ತಮ್ಯಂತ ಪದವು "ಪತ್ಯೌ" ಎಂದಾಗುತ್ತದೆ. ಆದರೆ ಇಲ್ಲಿ "ಪತೌ" ಎಂದಿದೆ. ನಿಜವಾಗಿಯೂ ಈ ಶಬ್ದವು ಹಾಗಲ್ಲ. "ಅಪತೌ" ಎಂದಾಗಬೇಕು. ಪರಂತು ಪತಿತೇ ಶಬ್ದದ ನಂತರ ಅಕಾರವು ಲೋಪವಾಗಿದೆ. ಆದುದರಿಂದ ಅದನ್ನು

"ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇಽಪತೌ" ಎಂದು ಓದತಕ್ಕದ್ದು.

ಉತ್ತರ:– ಈ ರೀತಿ ಆಕ್ಷೇಪಿಸುವವರು "ಅಪತಿ" ಶಬ್ದದ ಅರ್ಥವೇನೆಂಬುದನ್ನು ಪಾತ್ರ ಯೋಚಿಸುವುದಿಲ್ಲ. ಮತ್ತು ಇದರ ಸಂಯೋಗದ ಆವಶ್ಯಕತೆ ಏನೆಂಬುದು ಕೂಡಾ ಕಂಡುಬರುವುದಿಲ್ಲ. ಇದುಹೊರತು ಈ ಶಬ್ದವು ಯಾವ ಕೋಶದಲ್ಲಿದೆ ಎಂಬುದು ಗೊತ್ತಾಗುವುದಿಲ್ಲ.

ಪ್ರಶ್ನೆ:—ವಿವಾಹವಾಗದೆ ಬರೀ ಸಂಬಂಧ ಮಾತ್ರ ನಿಶ್ಚಯವಾದವನಿಗೆ "ಅಪತಿ" ಎನ್ನುತ್ತಾರೆ. ಪತಿ ಅಲ್ಲದವನಿಗೆ ಮತ್ತು ಇದುವರೆಗೆ ಯಾರ ಪತಿಯೂ ಆಗದಂತಹವನಿಗೆ ಅಪತಿ ಎಂಬದಾಗಿ ಕೋಶದಲ್ಲಿ ಹೇಳಿಲ್ಲವೇ?

ಉತ್ತರ:—ನಿಮ್ಮ ಆ ಕೋಶದೊಳಗಿನ ಹೊಸದ ಅರ್ಥವು ಈ ಶ್ಲೋಕಕ್ಕೆ ತಗಲುವುದಿಲ್ಲ. ನಿಮ್ಮ ಅರ್ಥದಂತೆ ನಾವು ನಿರ್ಣಯ ಮಾಡುವುದಾದರೆ ಅವಿವಾಹಿತ ಪುರುಷನನ್ನು ಅಪತಿ ಎನ್ನಬೇಕಾಗುತ್ತದೆ ಹೊರತು ವಿವಾಹ ಸಂಬಂಧವನ್ನು ನಿಶ್ಚಯಿಸಿಕೊಂಡವನಿಗೆ ಈ ಅರ್ಥವು ಸರಿಹೋಲಲಿಕ್ಕಿಲ್ಲ. ಇಲ್ಲಿ "ಅಪತೌ" ಶಬ್ದವಿರದೆ "ಪತ್ಯೌ" ಎಂದೇ ಇದೆ. ಮತ್ತು ಇದೇ ಸರಿಯಾದ ಅರ್ಥವಾಗಿರುತ್ತದೆ.

ಈ ಕುರಿತು ಮೇಲಿನ ಶ್ಲೋಕದ ರೂಪಾಂತರವೇ ಜೈನಮತದ ಒಂದು ಗ್ರಂಥದಲ್ಲಿ ಕೊಟ್ಟಿರುತ್ತದೆ.

ಪತ್ಯೌ ಪ್ರವ್ರಜಿತೇ ಕ್ಲೀವೇ ಪ್ರನಷ್ಟೇ ಪತಿತೇ ಮೃತೇ ।
ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥

ಪ್ರಶ್ನೆ:—ಜೈನರು ನಾಸ್ತಿಕರಾಗಿರುವುದರಿಂದ ಅವರ ಗ್ರಂಥವನ್ನು ನಾವು ಮನ್ನಿಸುವುದಿಲ್ಲ ಆದುದರಿಂದ ನಾವು ಹೇಳುವ "ಅಪತೌ" ಶಬ್ದವೇ ಸರಿಯಾದುದು.

ಉತ್ತರ:–ಒಳ್ಳೆಯದು. ಅದು ಹೋಗಲಿ, "ಪಾರಾಶರಮಾಧವೀ" ಗ್ರಂಥವಾದರೋ ಜೈನರದ್ದಲ್ಲವಷ್ಟೆ!. ಅದರ ೪೯೧ನೇ ಪುಟದಲ್ಲಿ ಬರೆದಿರುವುದನ್ನು ನೋಡಿರಿ.

ನಷ್ಟೇ ಮೃತೇ ಪ್ರವ್ರಜಿತೇ ಕ್ಲೀವೇ ಚ ಪತಿತೇ ತಥಾ ಪಂಚ ಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ ॥

ಇಲ್ಲಿ ನೀವು "ಅಪತಿ" ಶಬ್ದವನ್ನು ಹೇಗೆ ಜೋಡಿಸುವಿರಿ?

ಪ್ರಶ್ನೆ:—ನಿಮ್ಮ ಅಭಿಪ್ರಾಯವನ್ನು ಒಂದು ವೇಳೆ ಒಪ್ಪುವುದಾದರೂ ಸ್ಮೃತಿಕಾರರು ಇಂಥಾ ತಿಳಿಗೇಡಿತನವನ್ನು ಏತಕ್ಕೆ ಮಾಡಿದರು? "ಪತಿ" ಶಬ್ದದ ರೂಪವು ಏಳನೇ ವಿಭಕ್ತಿಯಲ್ಲಿ ಹೇಗೆ ತಗಲುತ್ತದೆ?

ಉತ್ತರ:—ಛಂದಸ್ಸಿನಲ್ಲಿ ಕವಿಗಳು ವ್ಯಾಕರಣದ ನಿಯಮಗಳನ್ನು ಸಹ ಒಂದೊಂದು ವೇಳೆ ತ್ಯಜಿಸಿಬಿಡುತ್ತಾರೆ. ಕವಿಕುಲ ಸಾರ್ವಭೌಮ ಕಾಳಿದಾಸನ ಕಾವ್ಯಗಳಲ್ಲಿ ಸಹ ಈ ರೀತಿಯ ವರ್ತನೆಗಳು ಕಂಡುಬರುತ್ತವೆ. ಆರ್ಷಗ್ರಂಥಗಳು ಅನೇಕ ಭಾಗಗಳಲ್ಲಿ ವ್ಯಾಕರಣದಿಂದ ಪ್ರತ್ಯೇಕವಿರುತ್ತವೆ. ಪಾರಾಶರ ಸ್ಮೃತಿಯನ್ನು ಆರ್ಷಗ್ರಂಥವೆಂದು ನೀವು ಒಪ್ಪುವುದಾದರೆ ಇಂಥಾ ಆಕ್ಷೇಪಗಳನ್ನು ನಮ್ಮ ಮುಂದಿಡುವುದು ಸರಿಯಲ್ಲ. ಪಾರಾಶರ ಸ್ಮೃತಿಯಲ್ಲಿ "ಪತಿ" ಶಬ್ದದ ಸಪ್ತಮ್ಯಂತಪದವು "ಪತೌ" ಮತ್ತು "ಪತ್ಯೌ" ಎಂಬ ಎರಡು ವಿಧದಲ್ಲಿಯೂ ಇದೆ. "ಪತ್ಯೌ" ಪದದ ಉದಾಹರಣೆ:—

ತದ್ವತ್ಪರಸ್ತ್ರೀಯಃ ಪುತ್ರೌ ದ್ವೌ ಸುತೌ ಕುಂಡಗೋಲಕೌ ।
ಪತ್ಯೌ ಜೀವತಿ ಕುಂಡಸ್ತು ಮೃತೇ ಭರ್ತ್ತರಿ ಗೋಲಕಃ ॥

ಪಾ. ಸ್ಮೃ. ಅ. ೪, ಶ್ಲೋ. ೨೩.

೨ನೇ ಉದಾಹರಣೆ:—

ಜಾರೇಣ ಜನಯೇದ್ಗರ್ಭಂ ಮೃತೇ ತ್ಯಕ್ತೇ ಗತೇಪತೌ ॥

ಪಾ. ಸ್ಮೃ. ೧೦, ಶ್ಲೋ. ೩೧.

ಇಲ್ಲಿ "ಅಪತೌ" ಶಬ್ದವು ಯಾವ ವಿಧದಲ್ಲಿಯೂ ಸಂಬಂಧಿಸಲಿಕ್ಕಿಲ್ಲ.

ಪ್ರಶ್ನೆ:— ಈ ವಿಧದ ಅರ್ಥಗಳನ್ನು ನಾವು ಎಂದಿಗೂ ಒಪ್ಪಲಾರೆವು. ನಾವು ವೈಯಾಕರಣಿಗಳಾಗಿರುವುದರಿಂದ ಎಂದಿನ ವರೆಗೆ ನೀವು ಯಾವುದಾದರೊಂದು ವ್ಯಾಕರಣ ಸೂತ್ರಾಧಾರದಿಂದ ನಿಮ್ಮ ಅಭಿಪ್ರಾಯವನ್ನು ಸಮರ್ಥಿಸುವುದಿಲ್ಲವೋ ಅದುವರೆಗೆ ನಾವು ಈ ವಿಷಯವನ್ನು ಹೇಗೆ ಮಾನಿಸಲಿ?

ಉತ್ತರ:—ಬಹಳ ಒಳ್ಳೆಯದು. ವ್ಯಾಕರಣವನ್ನೇ ನಿಮ್ಮ ಮುಂದೆ ಸಾಕ್ಷಿಯಾಗಿ ಇಡುತ್ತೇವೆ. ಆದರೆ ಮುಂದಕ್ಕೆ ನೀವು ಎಂದಿಗೂ ವಿಧವಾವಿವಾಹವನ್ನು ವಿರೋಧಿಸಬಾರದು. ಏತಕ್ಕೆಂದರೆ ಪಕ್ಷಪಾತದಿಂದ ತುಂಬಿರುವ ಸಂಸ್ಕೃತಜ್ಞರು ಸಹ ಅವಿದ್ಯಾವಂತರಿಗೆ ಸರಿಸಮಾನರಾಗಿರುವರು.

"ಸಿದ್ಧಾಂತ ಕೌಮುದಿ"ಯಲ್ಲಿ ಕೊಟ್ಟಿರುವ ಅಷ್ಟಾಧ್ಯಾಯಿಯ "ಪತಿಃ ಸಮಾಸ ಏವಾ" ೧, ೪, ೮.

ಈ ಸೂತ್ರದ ಮೇಲೆ ತತ್ವಬೋಧಿನಿಯ ಟೀಕೆಯನ್ನು ಸರಿಯಾಗಿ ಅವಲೋಕಿಸಿರಿ.

ಪತಿಃ ಸಮಾಸ ಏವ ॥ ಏವಕಾರ ಇಷ್ಟತೋಽವಧಾರಣಾರ್ಥಃ । ಅನ್ಯಥಾಹಿ 'ಸಮಾಸೇ ಪತಿರೇವ' ಇತಿ ನಿಯಮ ಸಂಭಾವ್ಯತೇ । ತತಶ್ಚ ಮಹಾಕವಿನೇತ್ಯಾದಿ ಪ್ರಯೋಗೋ ನಸಿಧ್ಯೇತ್ । 'ಅನಲ್ವಿದಾ' 'ಧಾತ್ವಾದೇಃ' ಇತ್ಯಾದಿ ವ್ಯಾಕರಣಾನುಸರಣೇತು ಪ್ರತಿಪತ್ತಿ ಗೌರವಂ ಸ್ಯಾದಿತಿ ಭಾವಃ ॥ ಪ್ರತ್ಯೇತ್ಯಾದಿ ॥ ನನ್ವೇವಂ 'ಶೇಷೋಽಧಯಸಖಿ ಪತೀ' ಇತ್ಯೇವೋಚ್ಯತಾಮ್ । ಕಿಮನೇನ । ಪತಿಃಸಮಾಸ ಏವ' ಇತಿ ಸೂತ್ರೇಣೇತಿಚೇನ್ನ । ಸಮುದಾಯಸ್ಯ ಪತಿರೂಪತ್ವಾಭಾವೇನ ಬಹುಚ್ಪೂರ್ವಕಪತಿಶಬ್ದಸ್ಯಾಪಿ ಧಿ ಸಂಜ್ಞಾಸ್ಯಾತ್ । ತತಶ್ಚ ಸುಸಖಿನೇತ್ಯಾದಿ ವದ ಬಹುಪತಿನೇತ್ಯಾದಿ ಪ್ರಸಜ್ಯೇತ । ಇಷ್ಯತೇತು

ಬಹುಪತ್ನೀತ್ಯಾದಿ । ನಾಪಿ । ಸಖಿಪತೀ ಸಮಾಸಏವ" ಇತ್ಯೇವ ಸೂತ್ರ್ಯತಾಮಿತಿ ಶಂಕ್ಯಮ್ । ಬಹುಪತ್ಯೇತ್ಯಾದಿವದ್ಬಹುಸಖ್ಯೇತ್ಯಾದ್ಯಾಪತ್ತೇಃ ಇಷ್ಯತೇ ತು ಬಹುಸಖಿನೇತ್ಯಾದಿ । ಅಥ ಕಥಂ 'ಸೀತಾಯಾಃ ಪತಯೇ ನಮಃ' ಇತಿ 'ನಷ್ಟೇಮೃತೇ ಪ್ರವ್ರಜಿತೇ ಕ್ಲೀವೇಚ ಪತಿತೇ ಪತೌ । ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ' ಇತಿಪರಾಶರಶ್ಚ ॥ ಅತ್ರಾಹುಃ ॥ ಪರಿತಿತ್ಯಖ್ಯಾತಃಪತಿಃ— "ತತ್ಕರೋತಿ ತದಾಚಷ್ಟೇ" ಇತಿ ಣಿಚಿ ಟಿಲೋಪೆ 'ಅಚ' ಇಃ "ಇತ್ಯೌಣಾದಿಕ ಪ್ರತ್ಯಯೇ 'ಣೇರನಿಟಿ' ಇತಿಣಿಲೋಪೇಚ, ನಿಷ್ಪನ್ನೋಽಯಂ ಪತಿಶಬ್ದಃ 'ಪತಿಃಸಮಾಸ ಏವ' । ಇತ್ಯತ್ರನ ಗೃಹ್ಯತೇ । ಲಾಕ್ಷಣಿಕತ್ವಾದಿತಿ."

ಇಲ್ಲಿ ಕೇವಲ "ಪತಿ"ಯ ಸಪ್ತಮ್ಯಂತ "ಪತೌ" ಶಬ್ದವನ್ನು ಸಿದ್ಧಪಡಿಸಿದುದು ಮಾತ್ರವಲ್ಲದೆ "ಚತುರ್ಥ್ಯಾಂತ ಪತಯೇ ಶಬ್ದವನ್ನು ಸಿದ್ಧಗೊಳಿಸಿರುವೆವು. ನೀವು ಸನಾತನ ಧರ್ಮತತ್ವಗಳನ್ನು ಸ್ವೀಕರಿಸುವಿರಾದರೆ ವೇದಸ್ಮೃತಿ ಆದಿ ವೈದಿಕ ಗ್ರಂಥಗಳಂತೆಯೇ ಆಚರಿಸತಕ್ಕದ್ದು. ಮೇಲೆ ವಿವರಿಸಿದ ಐದು ವಿಧ ಆಪತ್ತುಗಳ ಪೈಕಿ "ಪತಿತೇಪತೌ" ಅಂದರೆ ಪತಿಯು ಪತಿತನಾಗುವನೆಂಬುದು. ಪತಿಯು ಪತಿತನಾದಲ್ಲಿ ಪತ್ನಿಗೆ ತನ್ನ ಜೀವನಕ್ಕೆ ಬೇಕಾದ ಎಲ್ಲಾ ವ್ಯವಸ್ಥೆಗಳು ಬೇಕೇಬೇಕು. ಇಲ್ಲವಾದರೆ ಅವಳೂ ಪತಿತಳಾಗುವಳು. ಸನಾತನ ಧರ್ಮದ ಸೋಗನ್ನು ಹಾಕಿಕೊಂಡು ಅಸಂಖ್ಯಸ್ತ್ರೀಯರನ್ನು ವಿಧವೆಯರನ್ನಾಗಿ ಮಾಡಿಟ್ಟು ಕಡೆಗೆ ಬಹುವಿಧದ ಕುಕರ್ಮಗಳು ರಹಸ್ಯವಾಗಿಯೇ ನಡಿಯುವಂತೆ ಮಾಡುವ ಧರ್ಮವು ಸನಾತನ ಧರ್ಮವಲ್ಲ. ನಿಜವಾಗಿಯೂ ಅದು ರಾಕ್ಷಸೀಯ ಕೃತ್ಯವಾಗಿರುತ್ತದೆ. ಮನುಸ್ಮೃತಿಯಲ್ಲಿ ಹೇಳಿರುವಂತೆ "ಆಚಾರಃ ಪ್ರಥಮೋ ಧರ್ಮಃ ಶ್ರುತ್ಯುಕ್ತ ಸ್ಮಾರ್ತ ಏವಚ" ಎಂಬ ವಚನಕ್ಕನುಸರಿಸಿ ವರ್ತಿಸುವುದೇ ನಿಜವಾದ ಸನಾತನಧರ್ಮ.

ಈ ರೀತಿಯಲ್ಲಿ ವಿಧವೆಯರಿಗೆ ಅವರ ಇಚ್ಛಾನುಸಾರ ಪುನರ್ವಿವಾಹಕ್ಕೆಡೆಕೊಡದೆ ತರತರದ ಬಂಧನದಲ್ಲಿಡುವುದು ಅವರಿಗೆ ಮಾತ್ರವಲ್ಲ ಇಡೀ ಸಮಾಜಕ್ಕೇನೇ ಹಾನಿಕರವು. ವಿಧವೆಯರಿಗೆ ನಿರ್ಬಂಧದಿಂದ ಪುನರ್ವಿವಾಹವನ್ನು ಮಾಡಬೇಕಾಗಿ ನಾವು ಹೇಳುವುದಿಲ್ಲ: ಒಂದು ವೇಳೆ ಅವರು ಜೀವನ ಪರ್ಯಂತ ಬ್ರಹ್ಮಚಾರಿಣಿಯಾಗಿರುವುದಾದರೆ ಇದಕ್ಕಿಂತಲೂ ಉತ್ತಮಕಾರ್ಯವು ಬೇರೆ ಯಾವುದಿದೆ? ಕುಮಾರಿಯರು ಕೂಡಾ ಆಜನ್ಮಪರ್ಯಂತ ಇಂದ್ರಿಯನಿಗ್ರಹಿಗಳಾದರೆ ಅತ್ಯಂತ ಪ್ರಶಂಶನೀಯಕಾರ್ಯವೆಂಬುದನ್ನು ನಾವು ನಿಸ್ಸಂದೇಹವಾಗಿ ಹೇಳುವೆವು. ಪರಂತು ಇದು ಸಾಧ್ಯವಾಗದೆ ಗರ್ಭಪಾತಾದಿ ದುಷ್ಕೃತ್ಯಗಳು ಆಗುವಂಥಾ ಸಂದರ್ಭಗಳಿದ್ದರೆ, ಅಂದರೆ ಯಾರಲ್ಲಿ ಮಾನಸಿಕ ವೇಗವನ್ನು ವಶದಲ್ಲಿಟ್ಟುಕೊಳ್ಳಲು ಸಾಮರ್ಥ್ಯವಿಲ್ಲವೋ ಅಂಥವರನ್ನು ಬೀಗಮುದ್ರೆಯಲ್ಲಿಟ್ಟಂತೆ ಬಂಧಿಸಿಟ್ಟು ಪುನರ್ವಿವಾಹ ಮಾಡದಿರುವುದು ಸರ್ವಥಾ ಅನ್ಯಾಯವೇ ಸರಿ.

ಪ್ರತಿಯೊಂದು ವಿಧಿಗೂ ತಾರತಮ್ಯವಿದೆ. ಎಲ್ಲಾ ವಿಧಿಗಳೂ ಮಿತಿಯಾಗಿರಬೇಕು. ದಾನಕೊಡುವುದು ಪುಣ್ಯಕಾರ್ಯವಷ್ಟೇ. ಒಬ್ಬನು ತನ್ನ ಸರ್ವಸ್ವವನ್ನು ಅನ್ಯರಿಗೆ ದಾನಮಾಡುತ್ತಾನೆ. ಇನ್ನೊಬ್ಬನು ತನ್ನ ಆದಾಯದ ಸ್ವಲ್ಪಾಂಶವನ್ನು ಕೊಡುತ್ತಾನೆ. ಮೂರನೇಯವನು ಏನೂ ಕೊಡುವುದಿಲ್ಲ. ಆದರೆ ಈ ಮೂವರು ಜಾತಿ ಬಹಿಷ್ಕಾರ ಅಥವಾ ಇತರ ದಂಡನೆಗೆ ಗುರಿಯಾಗಲಾರರು. ಮೂರನೇಯವನಿಗಿಂತ ಎರಡನೇಯವನೂ ಅವನಿಗಿಂತ ಮೊದಲನೇಯವನೂ ಉತ್ತಮನಾಗಿರುತ್ತಾನೆ. ಇದೇ ಪ್ರಕಾರ ಬಾಲ್ಯದಲ್ಲಿ ವಿಧವೆಯರಾಗಿ ನಂತರ ಸಮಾಜದ ನಿರ್ಬಂಧಗಳನ್ನೂ ಅತ್ಯಾಚಾರಗಳನ್ನೂ ಸಹಿಸದೆ ಮನೆಯಿಂದ ಹೊರಬಿದ್ದು ವೇಶ್ಯಾವೃತ್ತಿಯನ್ನವಲಂಬಿಸಿ ಅಥವಾ ಇತರ ರೀತಿಯಲ್ಲಿ ಜೀವನವನ್ನು ಕೆಡಿಸಿಕೊಳ್ಳುವುದಕ್ಕಿಂತ ಪುನರ್ವಿವಾಹವನ್ನು ಮಾಡಿಕೊಂಡು ಸದಾಚಾರದಲ್ಲಿರುವುದು ಉತ್ತಮ

ಸಮಾಯುಕ್ತಾ ಸುಶೀಲಾ ಚಾರುಮಂಗಲಾ ॥ ದಿವ್ಯಾದೇವೀತಿ ವಿಖ್ಯಾತಾ ರೂಪೇಣಾಪ್ರತಿಮಾ ಭುವಿ ॥ ೫೧ ॥ ಪಿತ್ರಾ ವಿಲೋಕಿತಾ ಸಾತು ರೂಪಲಾವಣ್ಯ ಸಂಯುಕ್ತಾ । ಪ್ರಥಮೇ ವಯಸಿ ದಿವ್ಯಾವರ್ತತೇ ಚಾರುಮಂಗಲಾ ॥ ೫೨ ॥ ಸ ತಾಂ ದೃಷ್ಟ್ವಾ ದಿವೋದಾಸೋ ದಿವ್ಯಾದೇವೀಂ ಸುತಾಂ ತದಾ । ಕಸ್ಮೈ ಪ್ರದೀಯತೇ ಕನ್ಯಾಸುವರಾಯ ಮಹಾತ್ಮನೇ ॥ ೫೩ ॥ ಇತಿ ಚಿಂತಾಪರೋ ಭೂತ್ವಾ ಸಮಾಲೋಚ್ಯ ನೃಪೋತ್ತಮಃ । ರೂಪದೇಶಸ್ಯ ರಾಜಾನಂ ಸಮಾಲೋಕ್ಯ ಮಹೀಪತಿಃ ॥ ೫೪ ॥ ಚಿತ್ರಸೇನಂ ಮಹಾತ್ಮಾನಂ ಸಮಾಹೂಯ ನರೋತ್ತಮಃ । ಕನ್ಯಾಂ ದದೌ ಮಹಾತ್ಮಾಽಸೌ ಚಿತ್ರಸೇನಾಯ ಧೀಮತೇ ॥ ೫೫ ॥ ತಸ್ಯಾ ವಿವಾಹಯಜ್ಞಸ್ಯ ಸಂಪ್ರಾಪ್ತೇ ಸಮಯೇ ನೃಪ । ಮೃತೋಽಸೌ ಚಿತ್ರಸೇನಸ್ತು ಕುಲಧರ್ಮೇಣ ವೈಕಿಲ ॥ ೫೬ ॥ ದಿವೋ ದಾಸಸ್ತು ಧರ್ಮಾತ್ಮಾ ಚಿಂತಯಾಮಾಸ ಭೂಪತಿಃ । ಬ್ರಾಹ್ಮಣಾನ್ಸ ಸಮಾಹೂಯ ಪಪ್ರಚ್ಛ ನೃಪನಂದನಃ ॥ ೫೭ ॥ ಅಸ್ಯಾ ವಿವಾಹಕಾಲೇತು ಚಿತ್ರಸೇನೋ ದಿವಂಗತಃ । ಅಸ್ಯಾಸ್ತು ಕೀದೃಶಂ ಕರ್ಮ ಭವಿಷ್ಯಂ ತದ್ಬ್ರುವಂತು ಮೇ ॥ ೫೮ ॥

ಪದ್ಮಪುರಾಣ ಭೂಮಿಖಂಡ ಅಧ್ಯಾಯ ೮೫.

ಉಜ್ವಲನು ಹೇಳುತ್ತಾನೆ:—

ಪ್ಲಕ್ಷದ್ವೀಪದಲ್ಲಿ ಯಾವಾಗಲೂ ಉತ್ತಮ ವಿಚಾರವಂತನೂ, ಸತ್ಯಧರ್ಮನಿಷ್ಟನೂ ಆಗಿರುವ ದಿವೋದಾಸನೆಂಬ ಒಬ್ಬ ಪ್ರಸಿದ್ಧ ರಾಜನಿರುತ್ತಿದ್ದನು. ಆವನಿಗೆ ಸ್ತ್ರೀಯರಲ್ಲಿ ಉತ್ತಮಳೂ, ಸದ್ಗುಣ ಸಂಪನ್ನಳೂ, ರೂಪಲಾವಣ್ಯದಲ್ಲಿ ಅತ್ಯಂತ ಸುಂದರಿಯೂ, ಜಗತ್ತಿನಲ್ಲಿ ಪ್ರಸಿದ್ಧಳೂ ಆಗಿರುವ ದಿವ್ಯಾದೇವಿಯೆಂಬ ಪುತ್ರಿಯು ಜನಿಸಿದಳು. ಈಕೆಯು ಪೂರ್ಣ ಯುವತಿಯೂ, ಲಾವಣ್ಯಯುಕ್ತಳೂ ಆದುದನ್ನು ತಂದೆಯು ತಿಳಿದು ಈಕೆಯನ್ನು ಯಾರಿಗೆ ವಿವಾಹಮಾಡಿಕೊಡುವುದೆಂದು ಯೋಚಿಸುತ್ತಾ, ಕಡೆಗೆ ರೂಪದೇಶದ ರಾಜನಾದ ಚಿತ್ರಸೇನನು

ಬಹಳ ವಿದ್ಯಾವಂತನೆಂಬುದನ್ನರಿತು, ಆತನಿಗೆ ಆಕೆಯನ್ನು ಮದುವೆ ಮಾಡಿಕೊಟ್ಟನು. ಪರಂತು, ಕಾಲಗತಿಯಿಂದಾಗಿ ಅವಳ ವಿವಾಹ ಸಂಸ್ಕಾರದ ಸಮಯದಲ್ಲಿಯೇ ಚಿತ್ರಸೇನನು ಮೃತಪಟ್ಟನು. ಆಗ ಧರ್ಮಾತ್ಮನಾದ ದಿವೋದಾಸನು ಬ್ರಾಹ್ಮಣರನ್ನು ಕರೆಯಿಸಿ, ಈಕೆಯ ವಿವಾಹದ ಸಮಯದಲ್ಲಿ ಚಿತ್ರಸೇನನು ಸತ್ತುಹೋದನು. ಈಗ ನಾನೇನು ಮಾಡಬೇಕೆಂಬುದನ್ನು ಹೇಳಿರೆನ್ನಲು ಬ್ರಾಹ್ಮಣರು ಈ ರೀತಿಯ ಉತ್ತರವನ್ನಿತ್ತರು:—

ವಿವಾಹೋ ಜಾಯತೇ ರಾಜನ್ ಕನ್ಯಾ ಯಾಸ್ತು ವಿಧಾನತಃ । ಪತಿರ್ಮೃತ್ಯುಂ ಪ್ರಯಾತ್ಯಸ್ಯಾ ಸೋಽಚೇತ್ಸಂಗಂ ಕರೋತಿಚ ॥ ೫೯ ॥ ಮಹಾವ್ಯಾಧ್ಯಭಿಭೂತಶ್ಚ ತ್ಯಾಗಂ ಕೃತ್ವಾಪ್ರಯಾತಿವಾ । ಪ್ರವ್ರಜಿತೋ ಭವೇದ್ರಾಜನ್ ಧರ್ಮಶಾಸ್ತ್ರೇಷು ದೃಶ್ಯತೇ ॥೬೦॥ ಉದ್ವಾಹಿತಾಯಾಂ ಕನ್ಯಾಯಾಮುದ್ವಾಹಃ ಕ್ರಿಯತೇ ಬುಧೈಃ । ನ ಸ್ಯಾದ್ರಜಸ್ವಲಾ ಯಾವದನ್ಯೇಷ್ವಪಿ ವಿಧೀಯತೇ ॥ ವಿವಾಹಂ ತು ವಿಧಾನೇನ ಪಿತಾ ಕುರ್ಯಾನ್ನ ಸಂಶಯಃ ॥ ೬೧ ॥ ಏವಂ ರಾಜಾ ಸಮಾದಿಷ್ಟೋ ಧರ್ಮ ಶಾಸ್ತ್ರಾರ್ಥ ಕೋವಿದೈಃ । ವಿವಾಹಾರ್ಥಂ ಸಮಾಯಾತ ಇಂದ್ರ ಪ್ರಸ್ಥಂ ದ್ವಿಜೋತ್ತಮೈಃ ॥ ೬೨ ॥ ದಿವೋದಾಸಃ ಸುಧರ್ಮಾತ್ಮಾ ದ್ವಿಜಾನಾಂಚ ನಿದೇಶತಃ । ವಿವಾಹಾರ್ಥಂ ಮಹಾರಾಜ ಉದ್ಯಮಂ ಕೃತವಾಂಸ್ತದಾ ॥ ೬೩ ॥ ಪುನರ್ದತ್ತಾ ತದಾತೇನ ದಿವ್ಯಾದೇವೀ ದ್ವಿಜೋತ್ತಮಾಃ । ರೂಪಸೇನಾಯ ಪುಣ್ಯಾಯ ತಸ್ಮೈ ರಾಜ್ಞೇ ಮಹಾತ್ಮನೇ ॥ ಮೃತ್ಯುಧರ್ಮಂ ಗತೋರಾಜಾ ವಿವಾಹಸ್ಯ ಸಮೀಪತಃ ॥ ೬೪ ॥ ಯದಾಯದಾ ಮಹಾಭಾಗೋ ದಿವ್ಯಾದೇವ್ಯಾಶ್ಚ ಭೂಮಿಪಃ । ಚಕ್ರೇವಿವಾಹಂ ತದ್ ಭರ್ತಾ ಮ್ರಿಯತೇ ಲಗ್ನಕಾಲತಃ ॥ ೬೫ ॥ ಏಕವಿಂಶತಿ ಭರ್ತಾರಃ ಕಾಲೇ ಕಾಲೇ ಮೃತಾಸ್ತದಾ । ತತೋರಾಜಾ ಮಹಾದುಃಖೀ ಸಂಜಾತಃ ಖ್ಯಾತ ವಿಕ್ರಮಃ ॥ ೬೬ ॥ ಸಮಾ

ಲೋಚ್ಯ ಸಮಾಹೂಯ ಮಂತ್ರಿಭಿಃ ಸಹನಿಶ್ಚಿತಃ । ಸ್ವಯಂವರೇ
ತದಾಬುದ್ಧಿಂ ಚಕಾರ ಪೃಥಿವೀಪತಿಃ ॥ ೧೭ ॥ ಪ್ಲಕ್ಷದ್ವೀಪಸ್ಥ
ರಾಜಾನಃ ಸಮಾಹೂತಾ ಮಹಾತ್ಮನಾ । ಸ್ವಯಂವರಾರ್ಥ
ಮಾಹೂತಾಸ್ತಥಾ ತೇ ಧರ್ಮತತ್ಪರಾಃ ॥ ೧೮ ॥ ತಸ್ಯಾಸ್ತು
ರೂಪಂ ಸಂಶ್ರುತ್ಯ ರಾಜಾನೋ ಮೃತ್ಯುನೋದಿತಾಃ । ಸಂಗ್ರಾ
ಮಂ ಚಕ್ರಿರೇ ಮೂಢಾಸ್ತೇ ಮೃತಾಃ ಸಮರಾಂಗಣೇ ॥ ಏವಂ
ತಾತಕ್ಷಯೋಜಾತಃ ಕ್ಷತ್ರಿಯಾಣಾಂ ಮಹಾತ್ಮನಾ ॥ ೧೯ ॥
ದಿವ್ಯಾದೇವೀ ಸುದುಃಖಾತರ್ಾ ಗತಾ ಸ್ವಾಚಲ ಕಂದರಮ್ ।
ರುರೋದ ಕರುಣಾಂ ಬಾಲಾದಿವ್ಯಾದೇವೀ ಮನಸ್ವಿನೀ ॥ ೨೦ ॥

ಅರ್ಥ:—ಎಲೈ ರಾಜನೇ, ಕನ್ಯೆಯ ವಿವಾಹವು ವಿಧಿಯುಕ್ತವಾಗಿಯೇ ಆಗುತ್ತದೆ. ಒಂದುವೇಳೆ ಆಕೆಯ ಪತಿಯು ಮೃತನಾದರೆ ಮತ್ತು ಪತಿಯೊಡನೆ ಆಕೆಯ ಸಂಸರ್ಗವಾಗದಿದ್ದರೆ, ಪತಿಗೆ ಮಹಾರೋಗವು ತಗಲಿದ್ದರೆ, ಪತಿಯು ಆಕೆಯನ್ನು ತ್ಯಜಿಸಿ ಹೋಗಿದ್ದರೆ, ಅಥವಾ ಸನ್ಯಾಸಿಯಾಗಿದ್ದರೆ, ಆ ಕನ್ಯೆಗೆ ಬುದ್ಧಿವಂತರಾದವರು ಅವಳು ರಜಸ್ವಲೆಯಾಗುವುದರೊಳಗಾಗಿ ಪುನರ್ವಿವಾಹ ಮಾಡಿಕೊಡುವರು. ಈ ರೀತಿ ಶಾಸ್ತ್ರದಲ್ಲಿ ಬರೆದದೆ. ಅವಳ ತಂದೆಯು ವಿಧಿಯುಕ್ತವಾಗಿ ಅವಳ ಪುನರ್ವಿವಾಹವನ್ನು ಮಾಡಬೇಕೆಂಬುದರಲ್ಲಿ ಏನೂ ಸಂದೇಹವಿಲ್ಲ.

ಧರ್ಮಶಾಸ್ತ್ರಜ್ಞರಾದ ಪಂಡಿತರೆಲ್ಲರ ಅಭಿಪ್ರಾಯವನ್ನು ತಿಳಿದು ದಿವೋದಾಸನು ತನ್ನ ಕನ್ಯೆಯ ಪುನರ್ವಿವಾಹದ ಕುರಿತು ಯತ್ನಿಸಿ ರಾಜಾರೂಪಸೇನನೊಡನೆ ವಿವಾಹಮಾಡಿಕೊಟ್ಟನು. ಪರಂತು, ವಿವಾಹದ ಸ್ವಲ್ಪ ಸಮಯದಲ್ಲೇ ಆ ರಾಜನೂ ಮೃತಪಟ್ಟನು. ಈ ಪ್ರಕಾರ ವಿವಾಹವಾದ ಹಾಗೆಲ್ಲಾ ಪತಿಗಳು ಸಾಯುತ್ತಿದ್ದರು. ಇಪ್ಪತ್ತೊಂದು ಮಂದಿ ಪತಿಗಳು ಸತ್ತ ನಂತರ ರಾಜನು ದುಃಖಿತನಾಗಿ ಪುನಃ ಸ್ವಯಂವರದ ಸಿದ್ಧತೆಗಳನ್ನು ಮಾಡಿ ಪ್ಲಕ್ಷದ್ವೀಪದ ಎಲ್ಲಾ

ಸಾಮಂತರಿಗೆ ಆಮಂತ್ರಣವಿತ್ತನು. ಆಕೆಯ ಸೌಂದರ್ಯಕ್ಕೆ ಮೆಚ್ಚಿ ಸ್ವಯಂವರ ಪದ್ಧತಿಗನುಸಾರವಾಗಿ ಆವಳನ್ನು ವರಿಸುವ ಉದ್ದಿಶ್ಯ ದಿಂದ ಪರಸ್ಪರ ಯುದ್ಧಮಾಡಿ ಎಲ್ಲರೂ ಸತ್ತುಹೋದರು. ಎಲೈ ತಾತನೇ, ಈ ಪ್ರಕಾರ ಧರ್ಮಾತ್ಮ ಕ್ಷತ್ರಿಯರು ನಾಶವಾದರು. ಆಕೆಯು ಅಚಲವಾದ ಕಂದರವನ್ನು ಪ್ರವೇಶಿಸಿ ದುಃಖಿಸುತ್ತಿದ್ದಳು.

ನಾವಿಲ್ಲಿ ಪದ್ಮಪುರಾಣದ ದಿವ್ಯಾದೇವಿಯ ಸಂಪೂರ್ಣ ವೃತ್ತಾಂತ ವನ್ನು ವರ್ಣಿಸಿದ್ದೇವೆ. ಇದರಿಂದಾಗಿ ವಾಚಕರಲ್ಲಿನ್ನು ಯಾವ ತರದ ಸಂದೇಹವೂ ಉಳಿಯಲಿಕ್ಕಿಲ್ಲ. ಇಲ್ಲಿ ವಿಚಾರಣೀಯವಾದ ಒಂದೆರಡು ಮಾತುಗಳಿವೆ. ಅದಾವುದೆಂದರೆ:—

ದಿವೋದಾಸನು ತನ್ನ ಕನ್ಯೆಯ ಪುನರ್ವಿವಾಹಕ್ಕೆ ಬ್ರಾಹ್ಮಣ ರಿಂದ ಅನುಮತಿಯನ್ನು ಪಡೆದುದು. ಒಂದುವೇಳೆ ಕನ್ಯೆಯ ಪತಿಯು ಸತ್ತುಹೋಗಿದ್ದರೆ, ಮತ್ತು ಅವಳಲ್ಲಿ ಸಂಸರ್ಗವಾಗದಿದ್ದರೆ, ಅಥವಾ ಇತರ ನ್ಯೂನತೆಗಳಿದ್ದರೆ ಆಕೆಯು (ವಿಧವೆಯು) ಪುನರ್ವಿವಾಹವನ್ನು ಮಾಡಿಕೊಳ್ಳಬಹುದೆಂದು ಬ್ರಾಹ್ಮಣರು ತಮ್ಮ ಸಮ್ಮತಿಯನ್ನಿತ್ತುದು. ಈ ಎಲ್ಲಾ ಪ್ರಮಾಣಗಳಿಂದ ವಿಧವಾವಿವಾಹವನ್ನು ಪುರಾಣಗಳೂ ಹೇಗೆ ಸಮರ್ಥಿಸುತ್ತಿವೆ ಎಂಬುದು ಸರಿಯಾಗಿ ವಿದಿತವಾಗುತ್ತವೆ. ಈಗ ವಿಧವಾವಿವಾಹದ ಕುರಿತು ನಮ್ಮ ಬ್ರಿಟಿಷ್ ಸರಕಾರವು ಏನು ಹೇಳುತ್ತದೆಂಬುದನ್ನು ಮುಂದಿನ ಅಧ್ಯಾಯದಲ್ಲಿ ಪರ್ಯಾಲೋಚಿಸುವ



## ೧೩. ವಿಧವೆಯರಿಗೆ ಮುಂಡನ (ಕ್ಷೌರ) ವೇತಕ್ಕೆ?

"ಗಂಡನನ್ನು ಕಳಕೊಂಡ ಅಪರಾಧಕ್ಕೆ, ಪ್ರಕೃತಿ ಇತ್ತ ಕೇಶ ರಾಶಿಯನ್ನು ಕಳಕೊಳ್ಳಬೇಕೆ? ಪುತ್ರಿಯನ್ನಾಗಲಿ, ಪುತ್ರವಧುವನ್ನಾಗಲಿ, ನಾಪಿತನೆದುರು ಕುಳ್ಳಿರಿಸುವ ಅಧಿಕಾರವು ಯಾರಿಗೂ ಇಲ್ಲ. ಅಪಮಾನಿತರಾದ ಸ್ತ್ರೀಯರಿರುವ ಮನೆಯ ಅಧಃಪಾತಕ್ಕೆ, ಪುರುಷರ ತಿಳಿಗೇಡಿತನವೇ ಕಾರಣ. ದೇವೀ ಅಹಲ್ಯಾಬಾಯಿ, ರಾಣಿ ಲಕ್ಷ್ಮೀ ಬಾಯಿಯವರಾದರೂ ಬ್ರಾಹ್ಮಣವಿಧವೆಯರೇ ಆಗಿದ್ದರು. ಅವರ ವೈಯಕ್ತಿಕ ಚರಿತ್ರವು ಎಂತಹ ಆಚಾರಪ್ರಿಯರಿಗೂ ಮಾದರಿಯೆನಿಸದಿರದು. ಆದರೆ, ಅವರಾದರೂ ತಲೆಬೋಳಿಸಿಕೊಳ್ಳದೆ, ವಿಧವಾ ಧರ್ಮವನ್ನು ಆಚರಿಸಿದ್ದರೆನ್ನುವಾಗ, ಇಂದಿನ ವಿಧವೆಯರಿಗೆ ಈ ಶಿಕ್ಷೆ ಎಂದರೆ ನಮ್ಮ ನೈತಿಕ ಪತನವಲ್ಲವೇ?" —ಸ್ವಾಮಿ ಶಿವಾನಂದ.

ಮೇಲಿನ ವಿಚಾರ ಸರಣಿಯನ್ನು ಗಂಭೀರವಾಗಿ ಯೋಚಿಸಿರಿ. ಆಗ ಇಂದಿನ ನಮ್ಮ ಧಾರ್ಮಿಕ ಕಲ್ಪನೆಗಾಗಿ ನಾವೇ ಮರುಗಬೇಕಾಗುತ್ತದೆ. ಇಲ್ಲದಿದ್ದರೆ, ೧೮೮೫ನೇ ಇಸವಿಯಲ್ಲಿ 'ಬಾಲವಿಧವಾವಿವಾಹ' ಮತ್ತು ವಿವಾಹ ವಯಸ್ಸನ್ನು ಏರಿಸುವುದು ಇತ್ಯಾದಿ ವಿಚಾರದಲ್ಲಿ ವಾದ ವೆದ್ದಿದ್ದಾಗ, ಲೋಕಮಾನ್ಯ ತಿಲಕರು ಈ ರೂಢಿಗೆ ಧಾರ್ಮಿಕಬಲವೇ ಇಲ್ಲವೆಂದು ಸಾರಿದ್ದಾರೆ. ಬುದ್ಧಭಿಕ್ಷುಣಿಯರ ಅಂಧಾನುಕರಣವಿದು. ನಮ್ಮಲ್ಲಿಯ ಅಂಧಶ್ರದ್ಧೆಯಿಂದ ಬಲಿತಿರುವ ರೂಢಿ ಇದಾದುದರಿಂದ ಇದನ್ನು ಕಿತ್ತೊಗೆಯಲು ಯಾವ ಅಡಚಣೆಯೂ ಇಲ್ಲ. ಇರುವುದೆಂದರೆ ರೂಢಿಪ್ರಿಯರಾದವರದು. ಹಲಕೆಲವು ರೂಢಿಗಳು ಬಳಕೆಗೆ ಬಂದಿರುವುದರಿಂದ ಬಿಡಲು ಮನಸ್ಸಿಲ್ಲದೆ ಧಾರ್ಮಿಕ ಆಧಾರವಿದೆ ಯೆಂದು ಗಲಭೆ ಎಬ್ಬಿಸುವವರದ್ದು. "ಧಾರ್ಮಿಕ ಪ್ರಶ್ನೆಯಲ್ಲ"ವೆಂದ ಮಾತ್ರಕ್ಕೆ ಇದರ ಇತ್ಯರ್ಥವಾಗದು. ಆದುದರಿಂದ ಈ 'ವಿಧವಾ ಕ್ಷೌರ'ಕ್ಕೆ ನಮ್ಮಲ್ಲಿಯ (೧) ಧರ್ಮಪ್ರವರ್ತಕರೇನಾದರೂ ಅಂದಿದ್ದಾರೆಯೇ? (೨) ಇಲ್ಲದಿದ್ದರೆ ಅದರ ಪ್ರವೃತ್ತಿಯು ಎಲ್ಲಿಂದ ಬಂತು?

(೩) ಶಾಸ್ತ್ರತರ್ಕರಲ್ಲಿ ಈ ವಿಧಿಯ ಕುರಿತು ಮತಭೇದವಿದೆಯೇ? (೪) ಹಾಗಿದ್ದರೆ ನಮಗೆ ಪ್ರಮಾಣವಾದುದು ಯಾವುದು? ಈ ರೂಢಿಯು ಅಶಾಸ್ತ್ರೀಯವೆಂದಾದರೆ, ಪ್ರಕೃತ ಇದು ನಮ್ಮ ದಕ್ಷಿಣದೇಶದಲ್ಲಿ ಮಾತ್ರ ಇರುವುದೆಂದಾದರೆ, ಇದನ್ನು ಇನ್ನೂ ಇನ್ನೂ ಬೆಳೆಯಗೊಡದೆ, ವಿಧವಾಕ್ಷೌರಮಾತ್ರವಲ್ಲ ಸ್ತ್ರೀಕ್ಷೌರವನ್ನೇ ನಿಷೇಧಿಸಬೇಕಾಗುತ್ತದೆ.

ನಮ್ಮ ಹಿಂದೂಗಳಲ್ಲಿ ಸ್ತ್ರೀಯರ ಕುರಿತು ಇಷ್ಟೊಂದು ದುರ್ವ್ಯವಹಾರವು ಮೊದಲಾಗಲು ಸ್ತ್ರೀಯರ ದೌರ್ಬಲ್ಯವೇ ಕಾರಣವಾಯಿತು. ಪ್ರಜಾಸಂಗೋಪನದ ಮಹತ್ಕಾರ್ಯವು ಅವರ ಮೇಲೆಯೇ ಬಿದ್ದುದರಿಂದ, ಬಾಹ್ಯವ್ಯವಹಾರವನ್ನೇ ತೊರೆದು ಪೂರ್ಣತಃ ಪುರುಷರ ಅಂಕಿತರಾದರು. ಎಂದಿನ ತನಕ ಪುರುಷವರ್ಗದಲ್ಲಿ ಸಾಮ್ಯತೆಯ ಉಚ್ಚ ಭಾವನೆ ಇತ್ತೋ, ಪ್ರಕೃತಿದೇವಿಯ ವಿಧೇಯತೆ ಇತ್ತೋ, ಧರ್ಮದ ಭಯವಿತ್ತೋ ಅಲ್ಲಿಯ ತನಕ ಹಿಂದೂಸ್ತ್ರೀಯರ ಭವಿಷ್ಯವು ಉಜ್ವಲವಾಗಿಯೇ ಇತ್ತು. ಮನುವಿನಂತಹ ಮೊದಲನೆಯ ಧರ್ಮಪ್ರವರ್ತಕನು ಕೆಲವೆಡೆ ಸ್ತ್ರೀಯರ ವ್ಯವಹಾರಕ್ಷೇತ್ರವನ್ನು ಸಂಕುಚಿಸಿದ್ದಾನೆ. ಸ್ವತಂತ್ರತೆಗೆ ಮೇರೆ ಹಾಕಿದ್ದಾನೆ. ಪುರುಷನ ಸ್ವಾಮಿತ್ವವನ್ನು ನಿರ್ಣಯಿಸಿದ್ದಾನೆ. ಆದರೆ ಈ ಮನುಮಹಾರಾಜನ ಅಭಿಪ್ರಾಯವನ್ನು ಗಂಭೀರವಾಗಿ ಅಧ್ಯಯನಿಸಿದರೆ ದುಷ್ಟವಾಗಿದ್ದಿಲ್ಲವೆಂದು ಧೈರ್ಯದಿಂದ ಹೇಳಬಹುದು. ನಮ್ಮ ಪ್ರಾಚೀನ ಶಾಸ್ತ್ರಕಾರರು ಸ್ತ್ರೀಯರನ್ನು ಪ್ರಕೃತಿದೇವಿಯ 'ಪ್ರತಿಕೃತಿ' ಎಂದು ತಿಳಿದಿದ್ದರೇ ಹೊರತು, ಈಗ ನಮ್ಮ ಸಮಾಜದಲ್ಲಿ ವ್ಯವಹಾರಕ್ಕೆ ಬಂದಿರುವ ಗೊಡ್ಡುಗ್ರಂಥಕಾರರಂತೆ ಕೀಳುಪ್ರಾಣಿಗಳೆಂದು ಭಾವಿಸಿರಲಿಲ್ಲ. ಈ ಗೊಡ್ಡುಗ್ರಂಥಕಾರರ ಬಲೆಗೆ ಬಿದ್ದೇ ನಮ್ಮ ಪುರುಷಸಮಾಜವು ಸ್ತ್ರೀಜಾತಿಯನ್ನು ಇಷ್ಟೊಂದು ಹೀನಾವಸ್ಥೆಗೆ ತಳ್ಳಿತು! ರಾಜಕೀಯವಿರಲಿ, ಸಾಮಾಜಿಕವಿರಲಿ, ಶೈಕ್ಷಣಿಕವಿರಲಿ, ಧಾರ್ಮಿಕವಿರಲಿ, ವ್ಯವಹಾರಿಕವಿರಲಿ, ಯಾವುದೇ ಇರಲಿ, ಒಂದರಲ್ಲೂ ಸ್ತ್ರೀಯು ಕೈಹಾಕ

ಬಾರದೆಂಬ ವಿಧಾನವು ನಮ್ಮವರಿಗೆ ಮಾನ್ಯವಾಯಿತು. ಪುರುಷ ಸಮಾಜವನ್ನು ಇಂದು ನಾವು ಯಾವ ಸಂಬಂಧದಲ್ಲಿ ಆಕ್ಷೇಪಿಸ ತೊಡಗಿದ್ದೇವೋ, ಅದರ ವಿಚಾರದಲ್ಲಿ ಇದೆಲ್ಲವೂ ಪ್ರಕೃತವಾದ್ದಲ್ಲ. ಆದರೆ ಸ್ತ್ರೀಜಾತಿಯು ಹೊಂದಿದ ಈ ಎಲ್ಲಾ ಅನ್ಯಾಯಗಳಿಗಿಂತಲೂ, ಧರ್ಮ, ನೀತಿ ಮತ್ತು ಪ್ರಕೃತಿಯ ಕೊಲೆಯನ್ನು ಮಾಡುವಂತಹ ಅನ್ಯಾಯವೆಂದರೆ "ವಿಧವಾಧರ್ಮ"!

ಸಮಾಜದ ವ್ಯವಸ್ಥೆಯನ್ನು ಕಾಪಾಡುವುದಕ್ಕಾಗಿ ಬೇಕಾದಂತಹ ನಿಯಮಗಳನ್ನು ಪೂರ್ವಿಕರು ಮಾಡಿಟ್ಟರು. ಕೆಲವೊಂದನ್ನು ಪರಿಸ್ಥಿತಿಯನ್ನನುಸರಿಸಿ, ನಂತರದವರು ತಿದ್ದುಪಡಿಗಳನ್ನು ಮಾಡಿದರು. ಯಾರನ್ನೂ ನಿಂದಿಸುವ ಉದ್ದೇಶವು ನಮ್ಮದಲ್ಲ. ಆದರೆ, ಮೊದಲಿಗರು ಯಾವ ವಿಶಾಲಭಾವನೆಯಿಂದ ಜನಾಂಗವನ್ನು ರೂಪಿಸುವ ಜವಾಬ್ದಾರಿಯ ಇಷ್ಟ—ಅನಿಷ್ಟಗಳನ್ನು ಅರಿತು ಮುಂದುವರಿದಿದ್ದರೋ, ಅದೇ ದಾರಿಯನ್ನು ನಂತರದವರೂ ಅನುಸರಿಸಬೇಕಿತ್ತು. ಆದರೆ ಹಿಂದೂಸಮಾಜದ ಅದೃಷ್ಟವು ಬಹಳ ಕೆಟ್ಟದಾದ್ದರಿಂದ ಹಾಗಾಗಲಿಲ್ಲ. 'ಧರ್ಮ'ವೆಂದರೆ ಅದೇನೂ ಇದ್ದುದನ್ನು ಶಾಶ್ವತವಾಗಿ ಒಳ್ಳೆದಿರಲಿ ಕೆಟ್ಟದಿರಲಿ ಇರಿಸಿಕೊಳ್ಳುವುದೇ ಅಲ್ಲ. ಧರ್ಮವಿಧಾನದ ಕೆಲಸವು—ದೊಡ್ಡವರ ಹೆಸರು ಹೇಳಿ ಲಂಚ ತಿನ್ನುವ ಖಚೇರಿ ಕ್ಲಾರ್ಕರಂತಹ ನಮ್ಮ ಅನಾಮ ಗೋತ್ರರಿಗೂ ಅಲ್ಲ. ಮನು, ಪರಾಶರ, ಯಾಜ್ಞವಲ್ಕ್ಯ, ವ್ಯಾಸ, ವಾಲ್ಮೀಕಿಗಳಂತಹವರ ಹೆಸರಿನಿಂದ ಕಂಡಾಬಟ್ಟೆ ಬರದು, ಹಿಂದೂಸಮಾಜವನ್ನೇ ಹಾಳುಮಾಡಿದವರು ಎಷ್ಟೆಂದು ಹೇಳಲು ಸಾಧ್ಯವಿಲ್ಲ. ಆದರೆ ಆ ವಿಘ್ನಸಂತೋಷಿಗಳ ಮಾರ್ಗವನ್ನು ಹಿಡಿದ ನಮ್ಮವರ ದೂರದರ್ಶಿತ್ವಕ್ಕಾದರೂ ಏನನ್ನಬೇಕು? ಇರಲಿ.

ವಿಧವಾಸಮಸ್ಯೆಯು ಇಂದು ಬಹಳ ಪ್ರಬಲವಾಗಿದೆ. ರೂಢಿಗಳನ್ನು ಕಡಿದುಹಾಕಲು ಧೈರ್ಯಸಾಲದೆ ದಿನೇದಿನೇ ಎಷ್ಟೋ ಸಂಸಾರಗಳು ಒಬ್ಬೊಬ್ಬ ವಿಧವಾ ಸಮಸ್ಯೆಯನ್ನು ಹೆಚ್ಚಿಸುತ್ತಿವೆ. ಪ್ರಕೃತಿ ಶಾಸ್ತ್ರವನ್ನನುಸರಿಸುವ ಸಮಯದಲ್ಲಿ ಈ ಗೋಳು ಇದ್ದಿರ

ಲಿಲ್ಲ. ಇದ್ದರೂ ಬೆರಳಲ್ಲೆಣಿಸುವಷ್ಟು ವಿಧವೆಯರಿದ್ದರು. ಅಥವಾ ಅಂತಹ ಆಕಸ್ಮಿಕ ಘಟನೆಗಳಲ್ಲಿ ಮಾತ್ರ. ಮನುವು ವಿಧವೆಗೆ ಬ್ರಹ್ಮ ಚರ್ಯವೇ ಪ್ರಶಸ್ತವೆಂದೂ, ನಿಯೋಗ ಅಥವಾ ಪುನರ್ವಿವಾಹವು ಗೌಣವಾದುದರಿಂದ ಅಪ್ರಶಸ್ತವೆಂದೂ ಹೇಳಿದ್ದಾನೆ. ಪ್ರೌಢವಿಧವೆ ಯರ ಮಟ್ಟಿಗೆ ಇದೇನೂ ಅನ್ಯಾಯವಲ್ಲ. ಆದರೆ, ಕಾಲವು ಕ್ರಮಿಸಿ ದಂತೆ ಪರಾಶರ, ಯಾಜ್ಞವಲ್ಕ್ಯರಿಗೂ ತೋರದ ಯುಕ್ತಿಗಳನ್ನು ಮುಂದೆಮಾಡಿ ನಮ್ಮ ಶಾಸ್ತ್ರಕಾರರು 'ಸಹಗಮನ'ವನ್ನು ವಿಧಿಸಿದರು. ಅಂದರೆ ಪತಿಶವದೊಡನೆ ಭಸ್ಮವಾಗುವುದೇ ಪರಮ ಧರ್ಮವೆಂದು ವಿಧಿಸಿದರು. ಸ್ವಭಾವತಃ ಪತಿ–ಪತ್ನಿಯರ ಐಹಿಕ ಸಂಬಂಧವು ಅಷ್ಟೊಂದು ದೃಢವಾಗಿದ್ದರೆ ವಿರಹದ ಅಸಹನೆಯಿಂದ ಸಹಗಮನ ವನ್ನು ಮಾಡುವ ಪದ್ಧತಿಯು ಜಾರಿಗೆ ಬಂದಿದ್ದರೂ ಇರಬಹುದು. ಈ ಚಿತಾಪ್ರವೇಶದ ವಾಡಿಕೆಯು ಪುರುಷವರ್ಗದಲ್ಲೂ ಇದ್ದಂತೆ ಸ್ಪಷ್ಟವಾಗುತ್ತದೆ. ಪ್ರೇಮ ಪ್ರತಿಜ್ಞೆ ಅಥವಾ ಇನ್ನಿತರ ದುರ್ಘಟ ಪ್ರಸಂಗಗಳಲ್ಲಿ ಈ ಅಗ್ನಿಪ್ರವೇಶವು ಬಳಕೆಗೆ ಬಂತು. ಇದರ ವಿಕೃತ ಸ್ವರೂಪವು ಈಗಲೂ ನಮ್ಮ ದೇಶದಲ್ಲಿ ಕಂಡುಬರುತ್ತಲೇ ಇದೆ. ಅಂತೂ ವಿಧವೆಗೆ ಬ್ರಹ್ಮಚರ್ಯ, ಪುನರ್ವಿವಾಹವೆಂಬುದೊಂದು ಪಕ್ಷ. ಬ್ರಹ್ಮಚರ್ಯ, ಸಹಗಮನವೆಂಬುದೊಂದು ಪಕ್ಷ. ಮತ್ತೊಂದು ಉಗ್ರಪಕ್ಷವೆಂದರೆ— "ನಾಧ್ವೀನಾ ಮಿಹ ನಾರೀಣಾಂ ಅಗ್ನಿ ಪ್ರಪತ ನಾದೃತೆ । ನಾನ್ಯೋ ಧರ್ಮೋಽಸ್ತಿ ವಿಜ್ಞೆಯೊ ಮೃತೆ ಭರ್ತರಿ ಕಕು ಚಿತ್" ಸಹಗಮನದ ಹೊರತು ವಿಧವೆಗೆ ಗತಿಯೇ ಇಲ್ಲವೆಂದು ಇದರ ಅರ್ಥ. ನಮ್ಮ ಕಣ್ಣ ಮುಂದೆ ಇಂದು ಕ್ರೀಡಿಸುತ್ತಿರುವ ಬಾಧಿತ ವೈಧವ್ಯದ ಪ್ರಥಮ ಆವೃತ್ತಿ ಇದು! ಸ್ಮೃತಿಕಾರರಿರಲಿ ಯಾ ತತ್ಕಾಲೀನ ಶಾಸ್ತ್ರಕಾರರ ಸಾಹಸವು ಇಲ್ಲಿಗೇ ನಿಂತಿತ್ತು. ಆದರೆ ಸೂತ್ರಕಾರರ "ಅನುಭಾವಿನಾಂ ಪರಿವಾಪನಂ" ಎಂಬುದಕ್ಕೆ ಅನರ್ಥವನ್ನು ಕಲ್ಪಿಸಿ, ಇದ್ದಿದ್ದೆಲ್ಲ ಪೌರಾಣಿಕ ವಚನಗಳಿಗೆ ಎಡೆಕೊಟ್ಟು ಪುತ್ರಕ್ಷೌರದ ಜೊತೆಗೆ ಪತ್ನೀಕ್ಷೌರವನ್ನೂ ಸೃಷ್ಟಿಸಿದ್ದಾರೆ.

ಇಲ್ಲೀಗ ಒಂದು ಪ್ರಶ್ನೆ ಏಳಬಹುದು. ನಮ್ಮ ವಾಕ್ಯ ಸರಣಿಯು ಇಲ್ಲಿ ಕೊಂಚ ಸಂದೇಹವನ್ನುಂಟುಮಾಡಬಹುದು. ಅಂದರೆ 'ಅನು ಭಾವಿ' ಎಂದುದರಿಂದ ಪುತ್ರ ಮೊದಲಾದವರಂತೆ ಪತ್ನಿಗೂ ಗ್ರಹಿಸ ಬೇಕೆಂಬುದು. ಆದರೆ, ಈ ಪುತ್ರಾದಿಗಳು ವಪನಮಾಡುವ ಕುರಿತು (ಔರ್ಧ್ವದೇಹಿಕ ಪ್ರಕರಣದಲ್ಲಿ) ನಮ್ಮ ಪ್ರಾಚೀನ ಶಾಸ್ತ್ರಗಳ ಮತ ವೇನಿದೆ ಎಂಬುದನ್ನು ಸಂಕ್ಷೇಪತಃ ವಿವರಿಸಬೇಕಾಗಿದೆ.

ಪ್ರಾಮಾಣಿಕ ಸ್ಮೃತಿಕಾರರಲ್ಲಿ ಯಾಜ್ಞವಲ್ಕ್ಯನೇ ಇತ್ತೀಚೆಗಿ ನವನೆಂದೂ, ಆ ಸ್ಮೃತಿಯ ಮಿತಾಕ್ಷರೀ ಟೀಕೆಯೇ ಬಹುಸಮ್ಮತ ವೆಂದೂ ನಾವಿಲ್ಲಿ ಪ್ರತ್ಯೇಕ ಬರಿಯಬೇಕಾಗಿಲ್ಲ. ಅಂತೆಯೇ ಶ್ರೀ ವಾಲ್ಮೀಕಿರಾಮಾಯಣ, ಮಹಾಭಾರತಗಳನ್ನು ಐತಿಹಾಸಿಕ ಪ್ರಮಾಣ ಗಳೆಂದು ಉಲ್ಲೇಖಿಸಲೇ ಬೇಕು. ನಾವು ಮೇಲೆ ಹೇಳಿದ ಗ್ರಂಥಗಳಲ್ಲಿ ಔರ್ಧ್ವ ದೇಹಿಕ ಪ್ರಕರಣವು ವಿಸ್ತಾರವಾಗಿ ಹೇಳಲ್ಪಟ್ಟಿದೆ. ವ್ಯಕ್ತಿಯ ಪ್ರಾಣೋತ್ಕ್ರಮಣದಿಂದ ಹಿಡಿದು ಎಲ್ಲಾ ವಿಧಿಗಳನ್ನೂ ಪೂರೈಸುವ ವಿಧಾನವು ಸ್ಪಷ್ಟವಾಗಿರುತ್ತದೆ. ಆದರೆ, ಇಲ್ಲೆಲ್ಲಿಯೂ 'ಕ್ಷೌರ'ದ ಪ್ರಸ್ತಾಪವೇ ಇಲ್ಲ. ವಿಜ್ಞಾನೇಶ್ವರನು 'ಸ್ಮೃತ್ಯಂತರದಿಂದ' ಎಂದು ಹೇಳಿ ವಪನವನ್ನು ವಿಧಿಸಿದ್ದಾನೆ. ಆದರೆ ಸ್ಪಷ್ಟವಾಗಿ ಹೆಸರು ಹೇಳಿದ್ದು ಇಲ್ಲ. ಹೇಗೂ ಇರಲಿ, ವಿಜ್ಞಾನೇಶ್ವರನ ಕಾಲದಾರಭ್ಯ ಈ ವಾಡಿಕೆಗೆ ಸಮ್ಮತಿಯು ಸಿಕ್ಕಿತು. ನಂತರದ ಶಾಸ್ತ್ರಕಾರರು ಅದನ್ನು ಮನ್ನಿಸಿದರು. ನಮಗೆ ಅದರಲ್ಲಿ ಆಕ್ಷೇಪಿಸಲಿಕ್ಕಿಲ್ಲ. ಆದರೆ ಅನುಭಾವಿ ಶಬ್ದದಲ್ಲಿ ಪತ್ನಿಯು ಸೇರುವುದಿಲ್ಲ ಎಂಬುದನ್ನು ನೋಡಿರಿ.

**"......... ಶಾವಂದುಃಖಂ ಅನುಭವಂತೀತ್ಯನು ಭಾವಿನಃ ಸಪಿಂಡಾಃ । ತೇಷಾಂಚ ಅವಿಶೇಷೇಣ ವಪನಂ ಉತ ಅಲ್ಪವಯಸಾ ಮಿತ್ಯಪೇಕ್ಷಾಂ ಮಾಂ ಇದಮೇವ ಉಪತಿಷ್ಠತೆ, ಅನುಭಾವಿನಾಂ ಪರಿವಾಪನಮಿತಿ । ...... ಅನುಭಾವಿನಃ ಪುತ್ರಾ ಇತಿಕೇ ಚಿನ್ಮ ನ್ವಂತೆ ॥ .......॥"**

ಶ್ರೀವಿದ್ಯಾರಣ್ಯರು ಹೀಗೆ ಹೇಳುತ್ತಾರೆ:—

**"ಅನುಪಶ್ಚಾದ್ಭವಂತಿ ಜಾಯಂತೆ ಇತಿವ್ಯುತ್ಪತ್ತ್ಯಾ ಪುತ್ರಾಃ ಕನಿಷ್ಠ ಭ್ರಾತರಶ್ಚ ॥........"**

ವಿಜ್ಞಾನೇಶ್ವರನಿಗೂ, ಶ್ರೀಮದ್ವಿದ್ಯಾರಣ್ಯರಿಗೂ ತೋರದ ಅರ್ಥವು "ತೊರೊ" ಪ್ರಭೃತಿಗಳಿಗೆ ತೋರಿತು! ನಿಜವಾಗಿಯೂ ಈ ಪಂಡಿತರ ಬುದ್ಧಿಯು ಅಪೂರ್ವವಾದದ್ದೇ!

ಅಂತೂ ಸೂತ್ರಕಾರರ ವಾಕ್ಯಕ್ಕೆ ಅರ್ಥ ಹೇಳಿದವರ್‍ಯಾರೂ ವಿಧವಾ ವಪನವನ್ನು ನಿರ್ದೇಶಿಸಿರುವುದಿಲ್ಲ. ಮಾತ್ರವಲ್ಲ, ಪ್ರಾಯಶ್ಚಿತ್ತ ಪ್ರಕರಣದಲ್ಲಿ ಮುಂಡನಪ್ರಸಂಗವು ವಿಶೇಷವಾಗಿ ಬಂದದೆ. ಉದಾಹರಣೆಗಾಗಿ ನೋಡಿರಿ— ಗೋವಧ ಮಾಡಿದವನಿಗೆ 'ಗೋವ್ರತ' ವೆಂಬ ಪ್ರಾಯಶ್ಚಿತ್ತ ಹೇಳಿದ್ದಾರೆ. ಅದರಲ್ಲಿ ಮುಂಡನವೇ ಪ್ರಕೃತೋಪಾತ್ತವಾದ್ದು. ಸ್ತ್ರೀಯರಿಗೆ ಪ್ರಾಯಶ್ಚಿತ್ತ ವಿಧಿಸುವಾಗ (ಇದೇ ಸಂದರ್ಭದಲ್ಲಿ) "ವಪನಂ ನೈವನಾರೀಣಾಂ ......" ಎಂದು ಸ್ಪಷ್ಟಪಡಿಸಿದ್ದಾರೆ. ವಿಕಲ್ಪವಾಗಿ—

**ಸರ್ವಾನ್‌ಕೇಶಾನ್ ಸಮುದ್ಧೃತ್ಯ ಛೇದಯೇ ದಂಗುಲಿದ್ವಯಂ । ಸರ್ವತ್ರೈವಹಿನಾರೀಣಾಂ ಶಿರಸೊ ಮುಂಡನಂಸ್ಮೃತಂ ॥**

ಈ ಶ್ಲೋಕವನ್ನು ನೋಡುವಾಗ ಎಂತಹ ಯುಕ್ತಿವಾದಕ್ಕೂ ಕಲ್ಲು ಬೀಳದಿರುವುದಿಲ್ಲ! ಸ್ತ್ರೀವಪನ ನಿಷೇಧಪರವಾದ ವಾಕ್ಯಗಳು ಹಲವು ಸ್ಮೃತಿಗಳಲ್ಲಿ ಕಂಡುಬರುತ್ತವೆ. ಹೀಗಿದ್ದರೂ 'ವಿಧವಾವಪನ' ವನ್ನು ಶಾಸ್ತ್ರೀಯವೆನ್ನುವುದರಲ್ಲಿ ಅರ್ಥವಿದೆಯೇ ಎಂಬುದನ್ನು ವಾಚಕರೇ ಊಹಿಸಲಿ! ವ್ಯಾಸರು ಮಹಾಭಾರತದಲ್ಲಿ, ಮೃತಕೌರವ ಪತ್ನಿಯರನ್ನು ವರ್ಣಿಸುವಾಗಲೂ, ಕುಂತಿ ಮೊದಲಾದ ಪ್ರೌಢವಿಧವೆಯರನ್ನು ವರ್ಣಿಸುವಾಗಲೂ, ಸಕೇಶಿಗಳಾಗಿದ್ದರೆಂದೇ ಸ್ಪಷ್ಟವಾಗಿ ಹೇಳಿರುತ್ತಾನೆ. ಆದರೆ, ನಮ್ಮ ಕುದುರೆಗೆ ಮೂರೇ ಕಾಲು ಎನ್ನುವವರ ಮುಂದೆ ಏನುಮಾಡಬೇಕೆಂಬುದೇ ತಿಳಿಯುವುದಿಲ್ಲ!

ನಾವಿಲ್ಲಿಯ ತನಕ ಶಾಸ್ತ್ರೀಯವಿರೋಧವು ಹೇಗಿದೆ ಎಂಬುದನ್ನು ತೋರಿಸಿದೆವು. ಹಾಗಾದರೆ ಈ ಚಾಳಿಯ ಉಗಮವೆಲ್ಲಿಂದ ಬಂತೆಂಬ ಪ್ರಶ್ನೆಯುಂಟಾಗುತ್ತವೆ. ನಿಜ, ಸಹಗಮನಕ್ಕೆ ಪ್ರೇಮಾಧಿಕ್ಯದ ಕಾರಣವಾಗಿ, ಅದು ಬಳಕೆಗೆ ಬಂದ ಮೇಲೆ, ನಂತರದವರು ಅದಕ್ಕೆ ಶಾಸ್ತ್ರದ ಮುದ್ರೆಯನ್ನು ಒತ್ತಿರಬೇಕು. ಆದರೆ ಈ 'ವಪನ' ರೂಢಿಯು ಅಂತಹುದೇನೂ ಭಾವನಾದ್ಯೋತಕವಲ್ಲ. ಮನುಷ್ಯನು ಪ್ರಕೃತಿಯ ಬಾಲಕನು. ಆದುದರಿಂದಲೇ, ಎಷ್ಟೋ ಸಾರಿ ಪ್ರಬಲವಾದ ಸಭ್ಯತೆಗಳು ತತ್ಕಾಲದಲ್ಲಿ ತಮ್ಮ ಪ್ರಭಾವವನ್ನು ಸಮಾಜದ ಮೇಲೆ ಬೀರದಿರುವುದಿಲ್ಲ. ಬೌದ್ಧರ ಉನ್ನತಿಯ ಕಾಲದಲ್ಲಿ ಭಿಕ್ಷು ಮತ್ತು ಭಿಕ್ಷುಣಿಯರೇ ಧರ್ಮದ ಆಡಿಗಲ್ಲಿನಂತಿದ್ದರು. ಭಿಕ್ಷುಗಳ ಅನುಕರಣವನ್ನು ಬುದ್ಧಸ್ತ್ರೀ ಭಿಕ್ಷುಗಳೂ ಮಾಡಿದರು. ಪುರುಷಭಿಕ್ಷುಗಳಷ್ಟೇ ಪಾಂಡಿತ್ಯ ಗೌರವಗಳನ್ನು ಪಡೆದು ವೇಷಭೂಷಣಗಳನ್ನೂ ಭೇದವಿರದಂತೇರ್ಪಡಿಸಿಕೊಂಡರು. ಅಂದೇ ಸ್ತ್ರೀಕ್ಷೌರದ ಅಶ್ಲೀಲ ರೂಢಿಯು ನಮ್ಮ ರಾಷ್ಟ್ರದಲ್ಲಿ ಅವತರಿಸಿತೆನ್ನಲು ಅಡ್ಡಿಯಿಲ್ಲ. ಬುದ್ಧ ಪ್ರಾಬಲ್ಯವು ಕಡಿಮೆಯಾಯಿತು. ಪುನಃ ಸನಾತನ ಧರ್ಮದ ಧ್ವಜವು ಹಾರಾಡ ತೊಡಗಿತು. ಅಂದಿನ ಪಂಡಿತರು 'ಅಥದಿಂದ ಇತಿ'ಯ ವರೆಗಿನ ಧಾರ್ಮಿಕಸಿಂಹಾವಲೋಕನವನ್ನು ಮಾಡಿ, ಮಾಡಿದ ತಿದ್ದುಪಡಿಗಳಲ್ಲಿ ಈ ವಪನನಿಯಮವನ್ನು ಊರ್ಜಿತವಾಗಿಟ್ಟರು! ಅಹಾ ಈ ರೀತಿಯ ಅಶ್ಲೀಲ ಕಲ್ಪನೆಯು ಅವರಿಗೆ ಸಹಿಸಿತೇ? ಪ್ರಕೃತ, ಇಂತಹ ವಿಧಾನವನ್ನು ಮಾಡಿದವರು ಎಷ್ಟರಮಟ್ಟಿನ ಪ್ರಾಮಾಣಿಕರೆಂಬುದನ್ನು ನಂತರ ನೋಡುವ. ಆದರೆ, ಈ 'ವಪನಪದ್ಧತಿ'ಯು ನಮ್ಮಲ್ಲಿ ಪ್ರಾಚೀನವೂ ಅಲ್ಲ. ಪ್ರಾಚೀನ ಶಾಸ್ತ್ರ ನಿಷಿದ್ಧವೆಂಬುದಿಷ್ಟನ್ನು ನೆನಪಿನಲ್ಲಿಡಬೇಕು.

ಬುದ್ಧ ಧರ್ಮವು ಹುಟ್ಟಿದುದು, ಬೆಳೆದುದು ಉತ್ತರ ದೇಶದಲ್ಲಿ. ಆದರೆ, ಅದರ ಈ ದುಶ್ಚಾಳಿಯು ನೆಲೆಗೊಂಡುದು ನಮ್ಮಲ್ಲಿ! ಶ್ರೀಶಂಕರರಂತಹ ಘನವಿದ್ವಾಂಸರಾದುದು ನಮ್ಮಲ್ಲಿ! ಆದರೆ ವಿಘ್ನಸಂತೋಷಿಗಳಾದ ಮಹಾ ಪಂಡಿತರೂ ಆದುದು ನಮ್ಮಲ್ಲೇ ಹೆಚ್ಚು! ಆದುದ

ರಿಂದಲೇ ಈ ಕೆಟ್ಟ ಚಾಳಿಯು ನಮ್ಮ ಸ್ತ್ರೀಯರಿಗೆ ಧಾರ್ಮಿಕ ಆಚಾರವಾಗಿ ನಿಂತಿತು! ಆದುದರಿಂದಲೇ ನಾರಾಯಣ ಭಟ್ಟೀಕಾರರಾದರೂ **"ಕಂಚುಕ, ಕಂಕಣಮಾಂಗಲ್ಯಾದಿಕಂ ತತ್ರ ವಿಮೋಚಯೇತ್ ಇತ್ಯಾಚಾರಾತ್"** ಎಂದಿದ್ದಾರೆ. ಅಂದರೆ ಮೊದಲು ಕೆಟ್ಟ ಪದ್ಧತಿಯಂತೆ ಬಂದರೂ, ಈ ವೇಷಪಲ್ಲಟನ ವಿಧಿಯೂ ನಮ್ಮಲ್ಲಿ ಆಚಾರವೆಂದು ಗೃಹೀತವಾಯಿತು!

ಇತ್ತೀಚೆಗಿನ ಶಾಸ್ತ್ರಕಾರರು ಕೊಡುವ ವಿಧವಾವಪನಕ್ಕೆ ಮುಖ್ಯವಾದ ಆಧಾರಗಳಲ್ಲಿ 'ಅನುಭಾವಿ' ಶಬ್ದಕ್ಕೆ ಚಿಕ್ಕವರು ಎಂಬ ಅರ್ಥಮಾಡಿ, 'ಪತ್ನಿಗೂ ಕೂಡಾ' ಎಂದು ಮಾಡಿದ ವ್ಯಾಖ್ಯಾನವನ್ನು ಕೊಡುತ್ತಾರೆ. ಆದರೆ, ಈ ಪಂಡಿತನು ಅನುಭಾವಿ ಶಬ್ದಕ್ಕೆ "ಅನಂತರೋತ್ಪನ್ನಾಃ" ಎಂದು ಅರ್ಥಮಾಡಿ ಕಡೆಗೆ 'ಪತ್ನ್ಯಾ ಅಪಿ' ಎಂದು ಬರಿಯುವಂತೆಯೇ ಪುತ್ರ್ಯಾ ಅಪಿ ಎಂದು ಸೇರಿಸಿದರೆ ಬೇಡವೆನ್ನಲು ಆಧಾರವಿಲ್ಲ. (ಆಪಸ್ತಂಬದ ಅರ್ಥ "ತೊರೊ" ಪಂಡಿತನದು) ಶೌನಕ, ಆಶ್ವಲಾಯನ, ಜೈಮಿನಿ ಮೊದಲಾದವರು ವಪನವನ್ನು ವಿಧಿಸುವರಾದರೂ, ಪರಾಶರರ ಮತದಂತೆ **'ಸರ್ವಾನ್‌ಕೇಶಾನ್ ಸಮುದ್ಧೃತ್ಯ ಛೇದಯೇ ದಂಗುಲಿದ್ವಯಂ । ಸರ್ವತ್ರೈವ ಹಿ ನಾರೀಣಾಂ ಶಿರಸೋಮುಂಡನಂ ಸ್ಮೃತಂ ॥'** ಎಂಬುದಕ್ಕೆ ಅವರೇನೂ ವಿರೋಧಿಸಿಲ್ಲ. ಇನ್ನು ನಿರ್ಣಯ ಸಿಂಧುಕಾರರು ಬಲವಾಗಿ ಹಿಡಿದ ಆಧಾರವೆಂದರೆ–**"ವಿಧವಾ ಕಬರೀ ಬಂಧೋ ಭರ್ತುರ್ಬಂಧಾಯ ಜಾಯತೆ । ಶಿರಸೊವಪಾನಂ ತಸ್ಮಾತ್ ಕಾರ್ಯಂ ವಿಧವಯಾಸತಾ । ಕಂಚುಕಂ ನ ಪರೀದಧ್ಯಾತ್ ವಾಸೋ ನಲಿಕೃತಂ ವಸೇತ್ ॥** ಇದನ್ನು ಹೇಳಿದವರು ಮದನರತ್ನಕಾರರು ಮತ್ತು ಸ್ಕಂದಪುರಾಣಕಾರರು. ಧಾರ್ಮಿಕ ಪ್ರಸಂಗದಲ್ಲಿ ಪುರಾಣಗಳ ಹಸ್ತಕ್ಷೇಪವೇ ಆದರಣೀಯವಲ್ಲ. ಧರ್ಮಾಚರಣವೆಂದರೆ ಶ್ರುತಿ ಮತ್ತು ಸ್ಮೃತ್ಯುಕ್ತವಾದ್ದೆಂದು ಮನುವೇ ಹೇಳಿದ್ದಾನೆ. ಪ್ರಾಮಾಣಿಕ ಶಾಸ್ತ್ರಕಾರರು ಯಾರೂ ಪುರಾಣಗಳಿಂದ ಆಧಾರವನ್ನೇ ತೆಗೆದಿಲ್ಲವೆನ್ನಲಾಗುವುದಿಲ್ಲ. ಆದರೆ,

'ಏಕವಾಕ್ಯತೆ' ಇಲ್ಲದಿದ್ದಲ್ಲಿ ಅದನ್ನು ಗಮನಿಸಲು ಸಹಾ ಇಲ್ಲವೆನ್ನ ಬಹುದು. ಹೀಗಿರುತ್ತ, ಯಾವ ಸ್ಮೃತಿವಾಕ್ಯವನ್ನೂ ಹುಡುಕದೆ ಸೀದಾ ಪೌರಾಣಿಕ ಆಧಾರ ಕೊಟ್ಟವರ ತರ್ಕವು ಎಷ್ಟು ನಿರಾಧಾರ ವಾದ್ದೆಂದು ಪುನಃ ಹೇಳಬೇಕಾಗಿಲ್ಲ! ಅದೂ ಅಲ್ಲದೆ, ಯಾರೂ ಸ್ವೀಕ ರಿಸದಿದ್ದರೂ, ಶ್ರೀ ವಿದ್ಯಾರಣ್ಯರು ಸ್ವಂತ ಜವಾಬ್ದಾರಿಯಿಂದ, ಪ್ರಾಯಶ್ಚಿತ್ತ ಪ್ರಕರಣದಲ್ಲಿ 'ಸ್ತ್ರೀವಪನ'ವನ್ನು ಹೇಳಿದ್ದಾರೆ. ಆದರೆ, ಈ 'ವಿಧವಾ ಕಬರೀ ಬಂಧೊ . . . . . ॥' ಎಂಬ ವಾಕ್ಯದಂತೆ ನಮ್ಮ ವರು ಆಚರಿಸುವುದರಲ್ಲಿ ಅರ್ಥವಿಲ್ಲ. ಇದರಿಂದ ನಮ್ಮ ಸಮಾಜದ ತಿಳಿಗೇಡಿತನವು ಹೊರಬೀಳುವುದು ಮಾತ್ರವಲ್ಲದೆ, ಶಾಸ್ತ್ರದ ಘೋರ ಅಪಮಾನ ಮಾಡಿದಂತಾದೀತು!

ಧರ್ಮಸಿಂಧು, ನಿರ್ಣಯಸಿಂಧುಗಳಂತಹ ವರ್ತಮಾನ ಆಧಾರ ಗ್ರಂಥಗಳನ್ನು ಮಾತ್ರ ನೋಡಿ ವರ್ತಿಸುವವರ ಗತಿಯು ವಿಚಿತ್ರ ವಾಗುವುದೆಂಬುದಕ್ಕೆ ಹಳ್ಳಿಗಾಡಿನಲ್ಲಿ ಎಷ್ಟೋ ಉದಾಹರಣೆಗಳು ಸಿಗುತ್ತವೆ. ಇದು ನಮ್ಮಲ್ಲಿಯ ಧಾರ್ಮಿಕ ಶಿಕ್ಷಣಾಭಾವದ ಫಲ!

ಅಂತೂ ಈ ವಿಧವಾವಪನವು ಒಮ್ಮೆಗೆ ಅಪವಾದವಾಗಿ ಪರಾ ಶರರ ಮತದಂತೆ ಆಚರಿಸಬಹುದೆಂದಿದ್ದರೂ, ಈ ರೀತಿಯ ತಲೆ ಬೋಳಿಸುವುದು, ಬಳೆ ಒಡಿಯುವುದು, ಕೊರಳಿನ ಕಿವಿಗಳ ಆಭರಣ ಗಳನ್ನು ತೆಗೆದೊಯ್ಯುವುದು, ಕುಂಕುಮವನ್ನು ಅಳಿಸುವುದು, ಇದೆಲ್ಲ ಯಾವ ವೇದವ್ಯಾಸರ ಆಜ್ಞೆ! ವಿಧವಾಧರ್ಮವನ್ನು ಹೇಳುತ್ತ ಎಷ್ಟೋ ಶ್ಲೋಕಗಳನ್ನು ಬರೆದ ನಮ್ಮ ಶಾಸ್ತ್ರಕಾರರಿಗೆ ತೋರದ ಹೊಸ ಶೋಧ ವಲ್ಲವೇ ಇದು! ಪಾಪ! ಈ ಬಡಭಾಗ್ಯೆಯರು ಕುಪ್ಪಸವನ್ನೂ ತೊಡ ಬಾರದು! ಬಣ್ಣದ ಬಟ್ಟೆಯನ್ನೂ ಉಡಬಾರದೆಂದು ಮತ್ತೂ ನಿರ್ಬಂಧ! ಸ್ತ್ರೀಸೌಂದರ್ಯದ ಕಿರುಳಂತಿದ್ದ ಕೇಶಬಂಧವನ್ನೇ ತೆಗೆಯ ಹೇಳಿದ ಮೇಲೆ ಈ ಎಲ್ಲ ಉಪನಿಬಂಧನೆಗಳೇಕೆ? ಕೇಶರಾಶಿಗಿಂತ ಪ್ರಿಯವಾದ್ದು ಸ್ತ್ರೀಯಮಟ್ಟಿಗೆ ಪ್ರಾಣವೊಂದೇ ಇರಬಹುದು! ಇದರಲ್ಲೂ ವಿಚಿತ್ರತೆ ನೋಡಿ! ಪ್ರಾಯಶ್ಚಿತ್ತದಂತೆ ಒಮ್ಮೆ ಕ್ಷೌರವನ್ನೇ ಅಂಗೀಕರಿಸಿದರೂ,

ಈ 'ಸದಾ' ಕ್ಷೌರವೇಕೆ? ನೀರ ತಟಕು ಬೀಳುವಷ್ಟು ಬೆಳೆಯುವುದಕ್ಕಿಂತಲೂ ಮೊದಲೇ ಕ್ಷೌರವೆಂದರೆ, ಈಗಿನ ಫೆಶನೆಬಲ್ ಜಂಟಲ್‌ಮೆನ್ನರಂತೆ ಇವರೂ ಪ್ರಾತರ್ವಿಧಿಗಾಗಿ ಹತ್ತಿರದ 'ಹೇರ್‌ಕಟ್ಟಿಂಗ್ ಸೆಲೂನಿ'ಗೆ ಹೋಗಬೇಕಾದೀತು! ಅರ್ಥಾತ್ ಈ ಎಲ್ಲಾ ಯುಕ್ತಿವಾದಗಳು ಪೊಳ್ಳೆಂಬುದನ್ನು ಪುನಶ್ಚ ಹೇಳಬೇಕಾಗಿದೆ.

ಇಂದು ನಾವು ದಾಕ್ಷಿಣಾತ್ಯರು ನಮ್ಮಲ್ಲಿ ನೆಲೆಗೊಂಡಿರುವ ಈ ಪದ್ಧತಿಯ ನೈತಿಕನೀಚತೆಯನ್ನು ಮನಗಾಣಬೇಕು. ಶ್ರಾದ್ಧಕ್ಕೋ, ಹಬ್ಬಕ್ಕೋ, ಮೂರು ಕಾಸು ದಕ್ಷಿಣೆಗಾಗಿ ಕೈನೀಡುವ, ಊಟದಾಸೆಯಿಂದ ನಾಲಿಗೆ ಚಾಚುವ ಭಟ್ಟೋಜಿಗಳ ಉಪದೇಶಾಮೃತವನ್ನು ಅವರಿಗೇ ಬಿಟ್ಟುಬಿಡಬೇಕು! ಪುರುಷರಿಗಿಂತಲೂ ಹಿಂದೂ ಸ್ತ್ರೀಯರ ಮೇಲೆ ಈ ಭಟ್ಟೋಜಿಗಳ ಪ್ರಭಾವವು ವಿಶೇಷವಾಗಿ ಬೀಳುತ್ತದೆ. ತಲೆಬೋಳಿಸಲಿಕ್ಕೂ ಆಧಾರಹೇಳುವವರು ಇವರೇ! ಪಾಪದ ಹುಡುಗಿಗೆ ಗರ್ಭನಿಂತರೆ ಜೀರ್ಣವಾಗಲಿಕ್ಕೆ ಮದ್ದುಕೊಡುವ ಧನ್ವಂತರಿಗಳೂ ಇವರೇ. ಇದನ್ನು ವಿಸ್ತರಿಸುವ ಅಗತ್ಯವಿಲ್ಲ. ದಿನವಹಿ ನಮ್ಮ ಹಿಂದೂಸಮಾಜದಲ್ಲಿ ನಡೆಯುತ್ತಿರುವ ಘಟನೆಗಳಿವು!

ನಮ್ಮ ಸಮಾಜದಲ್ಲಿ ಈ ವಿಧವಾವಪನದಂತೆಯೇ, ತಿರುಪತಿ, ಧರ್ಮಸ್ಥಳ ಮೊದಲಾದ ಕಡೆಗಳಲ್ಲಿ, ಮತ್ತು ತುಂಗಭದ್ರೆಯ ದಕ್ಷಿಣದ ಎಷ್ಟೋ ತೀರ್ಥಕ್ಷೇತ್ರಗಳಲ್ಲಿ ಸಧವೆಯರೂ ತಲೆ ತೆಗಿಸಿಕೊಳ್ಳುತ್ತಾರೆ. ನುಣ್ಣಗೆ ಬೋಳಿಸಿದ ತಲೆಗೆ ಎಣ್ಣೆ ಹಚ್ಚಿ, ಮುಖ ತುಂಬ ಅರಸಿನ ಕುಂಕುಮ, ಕಣ್ಣಿಗೆ ಕಾಡಿಗೆಯನ್ನಿಟ್ಟು, ಸಾಲಂಕೃತೆಯರಾದ ಸೌಭಾಗ್ಯವತಿಯರನ್ನು ನೋಡುವಾಗ ದುಸ್ವಪ್ನ ಕಂಡಂತೆಯೇ ಮನಸ್ಸು ವ್ಯಥೆಗೊಳ್ಳದೆ ಇರುವುದಿಲ್ಲ! ಅಂತೂ ಈ ಕ್ಷೌರ ಪ್ರಕರಣವು ವಿಧವೆಯರಿಗಿರಲಿ, ಸಧವೆಯರಿಗಿರಲಿ, ಅಧರ್ಮವೆಂಬುದನ್ನು ಪುನಃ ನಾವಿಲ್ಲಿ ಹೇಳಬಯಸುತ್ತೇವೆ.

ಬಾಲ್ಯವಿವಾಹದ ಫಲವಾಗಿ ಬಾಲವಿಧವೆಗಳು ಹೆಚ್ಚುತ್ತಲಿದ್ದಾರೆ. ಕಾನೂನಿನಂತೆ ವಿಧವಾವಿವಾಹಕ್ಕೆ ಅಡಚಣೆಯಿಲ್ಲ.

ಧರ್ಮದ ಮಟ್ಟಿಗೆ ಆಪದ್ಧರ್ಮವೆಂದು ಎಣಿಸಿ, 'ವಿಧವಾ-ವಿಧುರ' ವಿವಾಹವನ್ನು ಮಾಡಬೇಕೆಂದು ಲೋ. ಟಿಳಕರಂತಹ ಧರ್ಮಜ್ಞರು ಸಹ ಪ್ರತಿಪಾದಿಸಿದ್ದಾರೆ. ಧರ್ಮವಿಷಯದಲ್ಲಿ ಲೋಕಮಾನ್ಯ ಟಿಳಕರ ಮಾತೆಂದರೆ ಸಪ್ರಮಾಣ ಮತ್ತು ನಿಶ್ಚಿತವೆಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಪ್ರಾಕೃತಿಕವಿರಲಿ, ಅಪ್ರಾಕೃತಿಕವಿರಲಿ, ಯಾವದೇ ತರದಲ್ಲಿಯಾದರೂ ಮಗನು ಸತ್ತನೆಂದರೆ ಮಗಳು ..... ಆಗಿಯೇ ಆಗುವಳು. ಒಂದೋ ಹುಡುಗಿಯು ಕುಲಕ್ಷಣೆಯೆಂದು ತಾಯಿಮನೆಗೆ ರವಾನಿಸಲ್ಪಡುತ್ತಾಳೆ. ಇಲ್ಲವೆ, ಮನೆಯಲ್ಲಿ "ಅತ್ತೆ ಸುವಾಸಿನಿ, ಸೊಸೆ ಮುಂಡೆ" ಎಂಬ ದೃಶ್ಯವು ಕಂಡುಬರುತ್ತದೆ. ಪ್ರೌಢೆಯಾದ ಅತ್ತೆಯು ಸುಖವಿಲಾಸಗೊಳ್ಳುವುದು, ಮತ್ತು ತಾರುಣ್ಯದ ಭರದಲ್ಲಿ ಈ ಬೋಳುವೇಷದಿಂದ ಶರೀರವನ್ನು ಸೊರಗಿಸುತ್ತ ವಿಧವೆಯಾದ ಸೊಸೆಯು ಮನೆಗೆಲಸಮಾಡುವುದು! ಸಮ್ಮತಿಯಿರಲಿ, ಇಲ್ಲದಿರಲಿ, ಧರ್ಮದ ನೆವನ ಕೇಳಿ ಈ ತರುಣಿಯು ಪ್ರತಿ ೧೫ ದಿನಕ್ಕೊಮ್ಮೆ ತಲೆ ತೆಗಿಸಲು ನಾಪಿತನೆದುರು ಕೂರಲೇಬೇಕು. ನಮ್ಮ ಶಾಸ್ತ್ರಗಳಲ್ಲಿ ವಿಧವಾಧರ್ಮವನ್ನು ಹೇಳುತ್ತಾ, ಪರಪುರುಷನ ಸ್ಪರ್ಶವಂತಿರಲಿ, ಹೆಸರು ಸಹ ಎತ್ತಬಾರದೆಂದು ಹೇಳಿರುವಾಗ, ನೀಚನಾಪಿತನ ಕೈಗೆ ತನ್ನ ಕೋಮಲಾಂಗವನ್ನೀಯುವ ಪ್ರಸಂಗವೆಂದರೆ ಏನನ್ನಬೇಕು! ತಲೆಯ ಮೇಲೆ ಕೇಶಗಳಿದ್ದರೆ ನಮ್ಮ ಬ್ರಾಹ್ಮಣ ವಿಧವೆಯರಿಗೆ ಶ್ರಾದ್ಧಾಧಿಕಾರವಿಲ್ಲ, ದೇವಪೂಜಾಧಿಕಾರವಿಲ್ಲ, ಯಾವದೇ ಧಾರ್ಮಿಕ ಯಾ ವ್ಯಾವಹಾರಿಕ ಅಧಿಕಾರವೂ ಇಲ್ಲವಂತೆ. ಅವಳ ಕೈಯಿಂದ ನೀರು ಸಹಾ ಕುಡಿಯುವುದಿಲ್ಲ. ಹೆಚ್ಚಾಗಿ ತಲೆಬೋಳಿಸಿದ ವಿಧವೆಯರು! ಅಥವಾ ಧರ್ಮಪ್ರಾಣ ಸನಾತನಿಗಳೇ ಇವರಲ್ಲಿ ಮುಖ್ಯರು!!

ಮುಸಲ್ಮಾನ ಸಾಧುವಿಗಾದರೂ ಪಂಡರಪುರನಾಥನನ್ನು ಸೇವಿಸುವ ಸೌಕರ್ಯವಿದೆ. ಆದರೆ, ನೀಚನಾಪಿತನೆದುರು ಕೂರಲು ಸಮ್ಮತಿಸದ ಫಲವಾಗಿ—ವಿಧವೆಗೆ ಈ ಅಧಿಕಾರವೂ ಇಲ್ಲ. ಯಾವ ದೇವತಾಸಂಬಂಧವಾದ ಅಧಿಕಾರವೂ ಇಲ್ಲ! ಈ ನಮ್ಮ ಭ್ರಾಂತಕಲ್ಪನೆಯನ್ನು ಏನೆಂದು ಕರೆಯೋಣವೆಂಬುದೇ ಗೊತ್ತಾಗುವುದಿಲ್ಲ.

ಇಂದು ಇತರ ವಿಷಯದಂತೆಯೇ ಈ ವಿಷಯದಲ್ಲೂ ಸುಧಾರಣೆಯಾಗುತ್ತಲಿದೆಯೆಂಬುದು ಶುಭ ಚಿಹ್ನೆ. ಕೆಲವು ವರ್ಷಗಳ ಮೊದಲು ನಕೇಶಿಯನ್ನು ಕಂಡರೆ ಸ್ನಾನ ಮಾಡಬೇಕೆಂದು ಹೇಳುತ್ತಿದ್ದವರೇ, ಇಂದು ಅವಳ ಕೈಯ ಅನ್ನವನ್ನು ತಿನ್ನುತ್ತಾರೆ. ಮೊದಲು ಹಲಕೆಲವು ಸುಶಿಕ್ಷಿತೆಯರು ಮಾತ್ರ ತಲೆಯಿಡುವ ಸಾಹಸ ಮಾಡುತ್ತಿದ್ದರು. ಆದರೆ, ಇಂದು ಈ ಪ್ರಶ್ನೆಯು ಹಳ್ಳಿಯಲ್ಲೂ ಅಲ್ಲಲ್ಲಿ ತಲೆದೋರ ತೊಡಗಿದೆ. ಆದರೆ, ಇದನ್ನು ನಾವು ತೃಪ್ತಿಕರವೆಂದು ಹೇಳುವುದಿಲ್ಲ. ಕೇವಲ ಸಾಮಾನ್ಯ ಜನತೆಯಲ್ಲೂ ಆಗುತ್ತಿರುವ ಜಾಗೃತಿಯನ್ನು ತೋರಿಸುತ್ತದೆಂದು ಮಾತ್ರ.

ಶಾರದಾ ಕಾನೂನಿನಿಂದ ಬಾಲ ವಿಧವೆಯರ ಸಂಖ್ಯೆಯು ನಿಲ್ಲಲು ಆಧಾರವಿದೆ. ಆದರೆ, ಅದರ ಉಪಯೋಗವು ಆದಾಗ ಮಾತ್ರ. ಇಂದಿಗೂ ಶಾರದಾ ಆಕಟನ್ನು ಮುರಿದು ವಿವಾಹಗಳಾಗುತ್ತಿವೆ. ಆದರೆ, ಸತ್ಯಾಗ್ರಹಿಗಳಂತೆ ಅವರು ಮುಂದಾಗಿ ಸರಕಾರಕ್ಕೆ ಸೂಚನೆ ಕೊಡುವ ಪದ್ಧತಿಯಿಡುತ್ತಿದ್ದರೆ, ಒಳ್ಳೇದಿತ್ತು. ಆದರೆ, ಈ ರೀತಿಯ ಕಾಯಿದೇ ಭಂಗದ ಉದ್ದೇಶವು ಕ್ಷುದ್ರವಾದುದರಿಂದಲೇ— ಈ ಸಾಹಸವು ಅವರಲ್ಲಿಲ್ಲ. ಮಂದಿರ ಪ್ರವೇಶ ಮಸೂದೆಯಂತೆಯೇ, ಇದಕ್ಕೂ ಒಂದು ಮಸೂದೆ ಬೇಕೆಂದು ಕೆಲವರ ಅಂಬೋಣವಿದೆ. ಆದರೆ, ಕಾನೂನಿನಿಂದ ಜನರ ಮೇಲೆ ಬಲತ್ಕಾರ ಪೂರ್ವಕ ಸುಧಾರಣೆ ಗಳನ್ನು ಹೊರಿಸುವುದರ ಪರಿಣಾಮವು ಇಷ್ಟವಾಗಲಿಕ್ಕಿಲ್ಲ. ನಮ್ಮಲ್ಲಿಯ ಸುಶಿಕ್ಷಿತರು ಕಾನೂನಿಗಾಗಿ ಹೊಡೆದಾಡುವ ಮುಂಚೆ, ಧಾರ್ಮಿಕ ಸುಧಾರಣಾ ಪ್ರಚಾರದಲ್ಲಿ ಸಹಾಯ ಕೊಡಬೇಕು. ಜನರಲ್ಲಿ ಧರ್ಮದ ತಿಳುವಳಿಕೆಯುಂಟಾಗಿ ನಾವಿಂದು ಧರ್ಮಮಾರ್ಗ ದಿಂದ ಎಷ್ಟು ದೂರ, ಎಷ್ಟು ದೊಡ್ಡ ಹೊಂಡದಲ್ಲಿದ್ದೇವೆಂಬ ಅರಿವು ಬರಬೇಕು. ಆಗಲೇ ಕಾನೂನಿನ ಉಪಕಾರ ಮತ್ತು ಅದರ ಸತ್ಪರಿಣಾಮದ ಸುಭಾವನೆ.

---

# ೧೪. ಸರಕಾರದ ಕಾನೂನು

ವಿಧವೆಗೆ ಪುನರ್ವಿವಾಹ ಮಾಡಿಕೊಳ್ಳಲು ಅನುಕೂಲಿಸಿ ಕೊಟ್ಟವರಿಗೆ ಸರಕಾರದಿಂದ ದಂಡನೆಯಾಗುವುದು ಮತ್ತು ಅವಳಿಗೆ ಹುಟ್ಟಿದ ಸಂತಾನವು ಯಾವ ಹಕ್ಕಿಗೂ ಬಾಧ್ಯವಾಗಲಿಕ್ಕಿಲ್ಲ ಮತ್ತು ವಿಧವೆಗೆ ಪುನರ್ವಿವಾಹ ಮಾಡಿಕೊಟ್ಟ ಅಪರಾಧಕ್ಕೆ ಸರಕಾರದಿಂದ 6 ತಿಂಗಳ ದಂಡನೆಯೂ ವಿಧಿಸಲ್ಪಡುವುದು ಎಂಬ ಅಭಿಪ್ರಾಯದಿಂದ ಜನರಲ್ಲಿ ಭಯವನ್ನುಂಟುಮಾಡುವ ಕುಟಿಲತೆಯನ್ನು ಈಗಿನ ಸಂಪ್ರದಾಯವಾದಿಗಳು ಅಲ್ಲಲ್ಲಿ ಆಚರಿಸುತ್ತಿದ್ದಾರೆ. ಇದರಿಂದಾಗಿ ಬಹುಜನರು ಏನೂ ಮಾಡಲಾರದೆ ಕಂಗೆಡುವಂತಹ ಪ್ರಸಂಗವು ಬಂದೊದಗುತ್ತದೆ. ಪರಂತು ವಿಧವಾವಿವಾಹವು ಸರಕಾರದ ಕಾನೂನಿನ ದೃಷ್ಟಿಯಿಂದಲೂ ಹೇಗೆ ನ್ಯಾಯಸಮ್ಮತವಾಗಿರುತ್ತದೆಂಬದನ್ನು ನಮ್ಮ ಸನಾತನಿಬಂಧುಗಳು ತಿಳಿಯಲು ಯತ್ನಿಸುವುದಿಲ್ಲ. ಈ ಕುರಿತು ನಾವು ಕ್ರಿ. ಶ. 1856ನೇ ಜುಲಾಯಿ ತಿಂಗಳ ತಾರೀಕು 25ರಲ್ಲಿ ಮಂಜೂರಾದ ಸರಕಾರದ ಕಾನೂನನ್ನು ವಾಚಕರ ಮುಂದಿಡುತ್ತೇವೆ. ಈ ಕಾನೂನು, ಬಂಗಾಲದ ಪ್ರಸಿದ್ಧ ವಿದ್ವಾಂಸರಾದ ಪಂಡಿತ ಈಶ್ವರಚಂದ್ರ ವಿದ್ಯಾಸಾಗರರ ಅತುಲ ಪರಿಶ್ರಮದಿಂದಾಗಿಯೇ ಬ್ರಿಟಿಷ ಸರಕಾರದಿಂದ ಮಂಜೂರಾತಿಯನ್ನು ಪಡೆಯಿತು. ಈಶ್ವರಚಂದ್ರ ವಿದ್ಯಾಸಾಗರರು ಆರ್ಯಸಮಾಜಕ್ಕೆ ಸೇರಿದವರಲ್ಲ. ಭಾರತೀಯ ಲಲನೆಯರಲ್ಲಿ ಹೆಚ್ಚಿನ ಮಂದಿ ವೈಧವ್ಯದ ನರಕಾಗ್ನಿಯಲ್ಲಿ ಬಿದ್ದುದರಿಂದ ಭಾರತ ವರ್ಷವು ಅಧೋಗತಿಗೆ ಬಿದ್ದಿರುವುದನ್ನು ತಿಳಿದು ಅದನ್ನುದ್ಧರಿಸಲಿಕ್ಕಾಗಿ ಅವರು ಈ ಕಾನೂನನ್ನು ಮಂಜೂರು ಮಾಡಿಸಿದರು. ಈ ಕಾನೂನಿಗೆ "The Hindu Widow's Remarriage Act, 1856" ಅಂದರೆ, ಹಿಂದೂ ವಿಧವೆಯರ ಪುನರ್ವಿವಾಹ ನಿರ್ಣಯದ ಆಕ್ಟ ಎಂದು ಹೆಸರು. ಇದರ ಮೂಲಭಾಷೆಯನ್ನೇ ಇಲ್ಲಿ ವಿವರಿಸುತ್ತೇವೆ.

# The Hindu Widow's Remarriage Act, 1856.

## An Act to Remove all Legal Obstacles to the Marriage of Hindu Widows.

### PREAMBLE.

Whereas it is known that by the law as administered in the Civil Courts established in the territories in the possession and under the Government of the East India Company, Hindu Widows with certain exceptions are held to be, by reason of their having been once married, incapable of contracting a second valid marriage and the offspring of such widows by any second marriage are held to be illegetimate and incapable of inheriting property, and whereas many Hindus believe that this imputed legal incapacity, although it is in accordance with established custom, is not in accordance with a true interpretation of the precepts of their religion, and desire that the Civil Law administered by the courts of Justice shall no longer prevent those Hindus who may be so minded, from adopting different customs, in accordance with the dictates of their own conscience; and whereas it is just to

relieve all such Hindus from this legal incapacity of which they complain, and the removal of all legal obstacles to the marriage of Hindu widows will tend to the promotion of good morals, and to the public welfare. It is enacted as follows:—

## MARRIAGE OF HINDU WIDOWS LEGALIZED.

1. No marriage contracted between Hindus (a) shall be invalid, and the issue (b) of no such marriage shall be illegitimate, by reason of the woman having been previously married or betrothed to another person who was dead at the time of such marriage, any custom and any interpretation of Hindu law to the contrary not withstanding.

## RIGHTS OF WIDOW IN DECEASED HUSBAND'S PROPERTY TO CEASE ON HER REMARRIAGE.

2. (c) All rights and interests which any widow may have in her deceased husband's property by way of maintenance, or by inheritance to her husband or to his lineal successors, or by

*Case Law* (a) Act applies only to Hindu widows' remarriage as such, 19 C. 289, enables widows, unable to remarry previously to remarry, 11 A 330; and does not apply to cases in which remarriage is allowed by custom of caste, 11 B 119.

(b) Of a marriage under the Act can inherit, 4 P.R. 1905;

virtue of any will or testamentary disposition conferring upon her, without express permission to remarry, only a limited interest in such property, with no power of alienating the same, shall upon her remarriage cease and determine as if she has then died; and the next heirs of her deceased husband, or other persons entitled to the property on her death, shall thereupon succeed to the same.

## GUARDIANSHIP OF CHILDREN OF DECEASED HUSBAND ON THE REMARRIAGE OF HIS WIDOW

3. On the remarriage of a Hindu widow, if neither the widow nor any other person has been expressly constituted by the will or testamentary disposition of the deceased husband the guardian of his children, the father or paternal grand-father or the mother or paternal grand-mother of the deceased husband, may petition the highest Court having original jurisdiction in civil cases in the place where the deceased husband was domiciled at the time of his death

---

*61 P. R. 1905* (c) S. 2 divests her of the right only if she marries after succeeding to the estate. 26 B. 388-4 Bom. L. R. 73, 29 B. 91, F. B.—6 Bom. L. R. 779; transfer by a Hindu for legal necessity before her remarriage is valid. 8.C. L. J. 542;

for the appointment of some proper person to be guardian of the said children, and thereupon it shall be lawful for the said Court, if it shall think fit, to appoint such guardian, who then appointed, shall be entitled to have the care and custody of the said children, or of any of them during their minority, in the place of their mother, and in making such appointment the Court shall be guided, so far as may be by the laws and rules in force, touching the guardianship of children (a) who have neither father nor mother.

Provided that when the said children have not property of their own sufficient for their support and proper education whilst minors, no such appointment shall be made otherwise than with the consent of the mother (b) unless the proposed guardian shall have given security for the support and proper education of the children whilst minors.

## NOTHING IN THIS ACT TO RENDER ANY CHILDLESS WIDOW CAPABLE OF INHERITING.

4. Nothing in this Act contained shall be construed to render any widow who, at the time of the death of any person leaving any property

is a childless widow, capable of inheriting the whole or any share of such property, before the passing of this Act, she would have been incapable of inheriting the same by reason of her being a childless widow

## SAVING OF RIGHTS OF WIDOW MARRYING EXCEPT AS PROVIDED IN SECTIONS 2 & 4.

Except as in the three preceding sections is provided, a widow shall not, by reason of her remarriage (a) any property or any right to which she would otherwise be entitled, and every widow who has remarried shall have the same rights of inheritance as she would have had, had such marriage been her first marriage

## CEREMONIES CONSTITUTING VALID MARRIAGE TO HAVE SAME EFFECT ON WIDOW MARRIAGE.

6. Whatever words spoke, ceremonies performed or engagements made on the marriage of

Section applies only to widows who could not have remarried prior to the Act, 11 A. 930, a . of a cast in which remarriage is allowed, e. g , the Kurmi, can remain in possession of her husband's estate till her death, 20 A, 476. see also 29 A. 122 she does not lose her right to maintenance against her husband's estate, 31 A. 161; she forfeits estate inherited, 22 C. 589; from her son, 22 B. 321 (F. B.)

a Hindu female who has not been previously married, are sufficient to constitute a valid marriage, shall have the same effect if spoken, performed or made on the marriage of a Hindu widow, and no marriage shall be declared invalid on the ground that such words, ceremonies or engagements are inapplicable to the case of a widow.

## CONSENT TO REMARRIAGE OF MINOR WIDOWS.

7. If the widow remarrying is a minor whose marriage has not been consummated, she shall not remarry without the consent of her father, or if she has no father, of her paternal grand-father, or if she has no such grand-father, of her mother, or failing also brothers, of her next male relative.

## PUNISHMENT FOR ABETTING MARRIAGE MADE CONTRARY TO THIS SECTION.

8. All persons knowingly abetting a marriage made contrary to the provisions of this section shall be liable to imprisonment for any term not exceeding one year or to fine or to both.

*Case Law* (a) meaning of ..4 A. 195; (b) Who has no right to give her son in adoption, 24 B 89.

## EFFECT OF SUCH MARRIAGE PROVISO.

And all marriage made contrary to the provisions of this section may be declared void by a Court of law; provided that in any question regarding the validity of a marriage made contrary to the provisions of this section, such consent is as aforesaid shall be presumed (a) until the contrary is proved and that no such marriage shall be declared void after it has been consummated.

## CONSENT TO REMARRIAGE OF MAJOR WIDOW.

In the case of a widow who is of full age, or whose marriage has been consummated, her own consent shall be sufficient consent to constitute her remarriage lawful and valid.

---

Remarriage does not prevent such a widow from inheriting her son's property, 2 B. L. R. A. C. 189...ii W. R. 82; a remarriage Marwar.. cannot claim her fist husband's property, I M. 226; right to give in adoption is not a right reserved under the Section, 24 B. 89; Contra: 33 B. 107.. 11 Bom. L. R. 1134.

*Case Law* (a) Section 8 A. 143.

## ಹಿಂದೂ ವಿಧವೆಯರ ಪುನರ್ವಿವಾಹದ ಆಕ್ಟು. ೧೮೫೬.

### ಹಿಂದೂ ವಿಧವೆಯರ ವಿವಾಹದ ಕಾನುನಾತೆಯ ಅಭ್ಯಂತರಗಳನ್ನು ನಿವಾರಿಸುವ ಆಕ್ಟು.

---

### ಪ್ರಸ್ತಾವನೆ :—

ಇಸ್ಟ್ ಇಂಡಿಯಾ ಕಂಪೆನಿಯ ಸರಕಾರದ ಸ್ಥಾಪಿತ ಸಿವಿಲ್ ಕೋರ್ಟುಗಳಲ್ಲಿ ಪ್ರಚಾರವಿರುವ ಕಾನೂನಿನ ಮೇರೆಗೆ ಹಿಂದೂ ವಿಧವೆಯರು ಕೆಲವು ವಿನಾಯತಿಗಳಿಗೆ ಒಳಪಟ್ಟು ಒಮ್ಮೆ ಮದುವೆಯಾಗಿದ್ದವರಾದ್ದರಿಂದ ಮತ್ತೊಮ್ಮೆ ವಿಧಿಯುಕ್ತ ಮಂಜೂರಾಗುವಂಥ ವಿವಾಹವನ್ನು ಮಾಡಿಕೊಳ್ಳುವರೆ ಅಶಕ್ತರೆಂದು ಸಿದ್ಧಾಂತವಾಗಿರುವುದು ತಿಳಿದೇ ಇರುವುದರಿಂದ ಮತ್ತು ಅಂಥ ವಿಧವೆಯರಲ್ಲಿ ಎರಡನೆ ವಿವಾಹದಿಂದ ಹುಟ್ಟಬಹುದಾದ ಮಕ್ಕಳು ನ್ಯಾಯ ಶೀಲರಾಗಿ ಹುಟ್ಟಿದವರಲ್ಲ, ತತ್ಸಂಬಂಧ ಸೊತ್ತನ್ನು ಪಡೆಯುವರೆ ಅನಧಿಕಾರಿಗಳೆಂದೂ ಮತ್ತು ಕಾನೂನು ಮೇರೆಗಿನದ್ದೆಂಬದಾಗಿ ಆರೋಪಿಸಲ್ಪಟ್ಟ ಅಶಕ್ತತೆಯು ರೂಢಿಯಲ್ಲಿರುವ ಆಚಾರಕ್ಕೆ ಸರಿಯಾಗಿ ಇದ್ದರೂ ತಮ್ಮ ಮತದ ತತ್ವಗಳ ಖರೆಯಾದ ಅರ್ಥಕ್ಕೆ ಸರಿಬೀಳುವುದಿಲ್ಲವೆಂದೂ ಅನೇಕ ಹಿಂದುಗಳು ನಂಬುವ ಕಾರಣವೂ ಮತ್ತು ನ್ಯಾಯಸ್ಥಾನಗಳಲ್ಲಿ ಇತ್ಯರ್ಥವಾಗುವ ಸಿವಿಲ್ ಕಾನೂನು ತಮ್ಮ ಮನಃ ಸಾಕ್ಷಿಯ ಬೋಧನೆಗೆ ಸರಿಯಾಗಿ ನಡೆಯಲಿಚ್ಛಿಸುವ ಮತ್ತು ಬೇರೆ ಆಚಾರಗಳನ್ನು ವರ್ತನೆಯಲ್ಲಿ ತರುವ ಮನಸ್ಸಿದ್ದ ಅಂಥ ಹಿಂದುಗಳನ್ನು ತಡೆಪಡಿಸಲಾಗದೆಂದೂ ಮತ್ತು ಅವರು ದೂರಿಕೊಳ್ಳುವ ಈ ಕಾನೂನಿಗೆ ಒಳಪಟ್ಟ ಅಶಕ್ತತೆಯಿಂದ ಬಿಡುಗಡೆ ಪಡಿಸುವುದು ಮತ್ತು ಹಿಂದೂ ವಿಧವೆಯರ ವಿವಾಹಕ್ಕೆ ಇರುವ ನ್ಯಾಯ ಸಮ್ಮತ ಅಭ್ಯಂತರಗಳನ್ನು ತೆಗೆದು ಹಾಕುವುದರಿಂದ ಸದಾಚಾರವನ್ನು ಬಲಪಡಿಸುವುದಕ್ಕೂ ಮಹಾ ಜನರ ಕ್ಷೇಮಕ್ಕೂ ಸಾಧನವಾಗುವುದೆಂದು ನಂಬುವುದರಿಂದ ಈ ಕೆಳಗಣ ರೀತಿ ಕಾನೂನು ಏರ್ಪಡಿಸುವುದಾಗಿದೆ.

೧. ಹಿಂದೂ ವಿಧವೆಯರ ವಿವಾಹವು ಕಾನೂನು ಸಮ್ಮತ ಮಾಡಲ್ಪಟ್ಟುದು:—ಹಿಂದುಗಳೊಳಗೆ ಆಗಿಹೋದ ವಿವಾಹವು (ಎ) ಅಸಿಂಧುವಾಗತಕ್ಕುದಲ್ಲಾ. (ಬಿ) ಆ ಹೆಂಗಸು ಮುಂಚೆ ವಿವಾಹಿತಳಾಗಿದ್ದಳು ಅಥವಾ ಆ ವಿವಾಹದ ಕಾಲದಲ್ಲಿ ಸತ್ತುಹೋದ ಬೇರೆ ಪುರುಷನಿಗೆ ಪರಿಸತಕ್ಕವಳಾಗಿ ಇದ್ದಂಥಾ ಹೆಂಗುಸಿನ ವಿವಾಹವು ನ್ಯಾಯಸಮ್ಮತವಲ್ಲವೆಂದು ಯಾವದೊಂದು ಆಚಾರ ಮತ್ತು ಹಿಂದೂ ಕಾನೂನಿನ ಅರ್ಥವಿವರಣೆ ವಿರೋಧಿಸುವುದಾಗಿ ಇದ್ದರೂ ಅಂಥ ವಿವಾಹದ ಮಕ್ಕಳು ಅವಿವಾಹಿತರ ಮಕ್ಕಳೆಂದು ತಿಳಿಯಕೂಡದು.

೨. ಮೃತ ಗಂಡನ ಸೊತ್ತಿನಲ್ಲಿ ವಿಧವೆಗೆ ಇರುವ ಹಕ್ಕುಗಳು ಸದರಿಯವಳು ಪುನರ್ವಿವಾಹವಾಗುತ್ತಲೇ ಕೊನೆಗಾಣತಕ್ಕದ್ದು. ಮೃತಗಂಡನ ಆಸ್ತಿಯಲ್ಲಿ ಮರಣ ಶಾಸನದ ಮೂಲಕವಾಗಲೀ ಇತರ ನಿರ್ದಿಷ್ಟ ಶಾಸನದ ಮೂಲಕವಾಗಲೀ ಯಾ ವಾರೀಸಿ ಹಕ್ಕಿನಿಂದಾಗಲೀ ವಿಧವೆಗೆ ಇರುವ ಅಶನದ ಹಕ್ಕು ವ ಇತರ ಹಕ್ಕು ಸ್ವಾತಂತ್ರ್ಯಗಳು ಸದರಿ ಶಾಸನಗಳಲ್ಲಿ ಆಕೆಗೆ ಪುನರ್ವಿವಾಹ ಮಾಡಿಕೊಳ್ಳಲು ಸ್ಪಷ್ಟವಾಗಿ ನಿರ್ದೇಶಿಸಲ್ಪಡದೆ ಇದ್ದಾಗ್ಗೆ ಸದರಿ ಸೊತ್ತನ್ನು ಪರಾಧೀನ ವಗೈರೆ ಮಾಡಲು ಸ್ವಾತಂತ್ರ್ಯವಿಲ್ಲದೆ ಆಕೆಗೆ ಇರುವ ಕೆಲವು ಪರಿಮಿತ ಹಕ್ಕುಗಳು ಕೂಡಾ ಸದರಿಯವಳು ಪುನರ್ವಿವಾಹವಾಗುತ್ತಲೇ ಆಕೆಯು ಮರಣ ಹೊಂದಿದರೆ ಆಕೆಯ ಹಕ್ಕುಗಳು ಪೂರ್ಣ ನಾಶವಾಗುವಂತೆ ಸದರಿಯವಳು ತನ್ನ ಯಾವತ್ತೂ ಹಕ್ಕುಗಳನ್ನು ಕಳಕೊಳ್ಳತಕ್ಕದ್ದು ಮತ್ತು ಸದರಿ ಮೃತಗಂಡನ ಇತರ ಉತ್ತರಾಧಿಕಾರಿಗಳು ಅಥವಾ ಸದರಿಯವಳ ಮರಣದ ನಂತರ ಆ ಸೊತ್ತಿಗೆ ಯಾರು ಹಕ್ಕುದಾರರಾಗುತ್ತಾರೋ ಅವರು ಸದರಿ ಸೊತ್ತಿನ ಹಕ್ಕನ್ನು ಪಡಿಯತಕ್ಕದ್ದು.

೩. ವಿಧವೆಯ ಪುನರ್ವಿವಾಹದ ಮೇಲೆ ಅವಳ ಮೃತಗಂಡನ ಮಕ್ಕಳ ರಕ್ಷಕರು:—ಒಬ್ಬ ಹಿಂದೂ ವಿಧವೆಯ ಪುನರ್ವಿವಾಹವಾದ

ಮೇಲೆ ಅವಳ ಮೃತಗಂಡನ ವೀಲು ಮೂಲಕ ಅವಳಾಗಲೀ ಇತರರ್ಯಾರಾಗಲೀ ಅವನ ಮಕ್ಕಳ ರಕ್ಷಕರಾಗಿ ನೇಮಕಪಟ್ಟ ವರಲ್ಲಾದರೆ ಆ ಮೃತಗಂಡನ ತಂದೆ ಅಥವಾ ತಂದೆಯ ತಂದೆ ಅಥವಾ ತಾಯಿ, ಯಾ ತಂದೆಯ ತಾಯಿ ಇವರು ಆ ಮೃತನು ಮೃತಕಾಲದಲ್ಲಿ ವಸ್ತಿಯುಳ್ಳವನಾಗಿ ಇರುವ ಸ್ಥಳದ ಮೇಲೆ ಸಿವಿಲ್ ನಂಬ್ರಗಳಲ್ಲಿ ಮೂಲ ಅಧಿಕಾರದ ಅತ್ಯುನ್ನತ ಕೋರ್ಟಿಗೆ ಆ ಮಕ್ಕಳ ರಕ್ಷಕನಾಗಿ ಒಬ್ಬ ಯೋಗ್ಯ ಮನುಷ್ಯನನ್ನು ನೇಮಿಸುವುದಕ್ಕೆ ಅರ್ಜಿಮಾಡ ಬಹುದು ಆ ಮೇಲೆ ಆ ಕೋರ್ಟು ಯುಕ್ತ ಕಂಡರೆ ಅಂಥ ರಕ್ಷಕನನ್ನು ನೇಮಿಸುವುದು ಕಾನೂನು ಸಮ್ಮತವಾದೀತು. ಅಂಥ ಮನುಷ್ಯನು ಹಾಗೆ ನೇಮಕ ಪಟ್ಟು ಸದ್ರಿ ಮಕ್ಕಳ ಜಾಗ್ರತೆಗೂ ಸ್ವಾಧೀನತೆಗೂ ಬಾಧ್ಯನಾಗತಕ್ಕದು. ಅವನು ಆ ಮಕ್ಕಳಲ್ಲಿ ಮೈನ ರರು ತಾಯಿಯ ವಶ ಇರುವದಾದಲ್ಲಿ ಅವರ ರಕ್ಷಣೆಗೂ ತಾಯಿಯ ಸ್ಥಾನದಲ್ಲಿ ರಕ್ಷಕನಾಗಿರಲಿಕ್ಕೆ ಬಾಧ್ಯನಾಗುವದು. ಅಂಥ ನೇಮಕ ವನ್ನು ಮಾಡುವಲ್ಲಿ ತಂದೆಯಾಗಲಿ ತಾಯಿಯಾಗಲಿ ಇಲ್ಲದ(ಎ) ಮಕ್ಕಳ ರಕ್ಷಕನನ್ನು ನೇಮಿಸಲಿಕ್ಕೆ ಆ ಕಾಲದಲ್ಲಿ ಕಾನೂನು ನಿಬಂಧನೆ ಗಳಿಗೆ ಒಳಪಟ್ಟು ಆ ಕೋರ್ಟು ನಡೆಯತಕ್ಕದ್ದು. (ಬಿ) ಆ ಮಕ್ಕಳು ತಮ್ಮ ಜೀವನಕ್ಕೂ ಮೈನರರಿರುವಾಗ ವಿದ್ಯಾಭ್ಯಾಸಕ್ಕೂ ಸಾಕಷ್ಟು ಸ್ವಂತ ಸೊತ್ತು ಇಲ್ಲದವರಾಗಿದ್ದರೆ ಇಂಥ ನೇಮಕವನ್ನು ತಾಯಿಯ ಕಬೂಲಿ ವಿನಹಾ ಮಾಡಲಾಗದು. ಪರಂತು ಆ ಮಕ್ಕಳು ಮ್ಯಾನ ರಿರುವಾಗ ಅವರ ಜೀವನಕ್ಕೂ ತಕ್ಕ ಜವಾಬ್ದಾರಿ ಆ ರಕ್ಷಕನಾಗಿ ನೇಮಕಪಡುವರೆ ಸೂಚಿಸಲ್ಪಟ್ಟವನು ಕೊಟ್ಟಲ್ಲಿ ತಾಯಿಯ ಸಮ್ಮತಿಯ ಅವಶ್ಯವಿರಲಾರದು.

೪. ಮಕ್ಕಳಿಲ್ಲದ ಯಾವಳೊಬ್ಬ ವಿಧವೆಯು ಸೊತ್ತಿನ ವಾರಿಸ್ ಸ್ದಾರಳಾಗುವುದಕ್ಕೆ ಈ ಆಕ್ಟಿನಲ್ಲಿಲ್ಲ:— ಈ ಆಕ್ಟು ಜ್ಯಾರಿಗೆ ಬರುವ ಮುಂಚೆ ಈ ಆಕ್ಟಿನಲ್ಲಿರುವ ಯಾವದೊಂದು ವಾಚಕವು ಯಾವ ನೊಬ್ಬ ಮನುಷ್ಯನು ತನ್ನ ಮರಣಕಾಲದಲ್ಲಿ ಸೊತ್ತು ಬಿಡುವವನಾ

ದಾಗ ಮಕ್ಕಳಿಲ್ಲದ ವಿಧವೆಯಾಗಿ ಇರೋಣದರಿಂದ ಸೊತ್ತನ್ನು ವಾರಿಸ್ದಾರಳಾಗಿ ಪಡೆಯುವರೆ ಅಶಕ್ತಳಾದವಳು ಸೊತ್ತಿನ ಇಡೀಯಾಗಲಿ ಅಂಶವಾಗಲಿ ಪಡೆಯುವರೆ ಸಮರ್ಥಳೆಂಬಂತೆ ಅರ್ಥವಾಗಬಾರದು.

೫. ೨,೪ ಕಲಮುಗಳಲ್ಲಿ ನಿರ್ದೇಶಿಸಿದಂತೆ ಅಲ್ಲದೆ ಮದುವೆಯಾಗುವ ವಿಧವೆಯ ಹಕ್ಕುಗಳ ನಿರ್ದಿಷ್ಟಪಡಿಸೋಣ:—

ಇದರ ಹಿಂದಿನ ಮೂರು ಸೆಕ್ಷನುಗಳಲ್ಲಿ ನಿಗಾ ಕೊಟ್ಟಂತೆ ವಿನಹಾ ಒಬ್ಬ ವಿಧವೆಯು ತಾನು ಪುನರ್ವಿವಾಹ ಮಾಡಿಕೊಂಡಿದ್ದ ಕಾರಣದಿಂದ (ಎ) ಯಾವದೊಂದು ಸೊತ್ತಿಗಾಗಲಿ ಯಾ ಹಕ್ಕಿಗೆ ಅವಳು ಅನ್ಯಥಾ ಬಾಧ್ಯಳಾಗುವುದಾದರೆ ಬಾಧ್ಯಳಾಗಬಾರದು, ಮತ್ತು ಪುನರ್ವಿವಾಹಮಾಡಿಕೊಂಡ ಪ್ರತಿಯೊಬ್ಬ ವಿಧವೆಯು ಅವಳ ಆ ಮದುವೆಯು ಪ್ರಥಮ ವಿವಾಹವಾಗಿದ್ದ ವಾರಿಸ್ದಾರಳಾಗಿ ಯಾವ ಹಕ್ಕುಗಳಿಗೆ ಅರ್ಹಳಾಗುತ್ತಿದ್ದಳೋ ಹಾಗೇಸೇ ಅರ್ಹಳಾಗಿರತಕ್ಕದ್ದು.

೬. ನ್ಯಾಯಸಮ್ಮತ ವಿವಾಹಕ್ಕೆ ಉಪಯುಕ್ತ ಸಂಸ್ಕಾರಗಳು ವಿಧವಾವಿವಾಹಕ್ಕೂ ಲಗಾವಾಗತಕ್ಕದ್ದು:—ಮುಂಚೆ ವಿವಾಹವಾಗದಿರುವ ಹಿಂದೂ ಸ್ತ್ರೀಯ ಯಾವದೇ ವಚನಗಳು ಆಡಿದ್ದರಿಂದ ಸಂಸ್ಕಾರಗಳು ಮಾಡಿದ್ದರಿಂದ ಒಪ್ಪಿಗೆಗಳು ಮಾಡಿರುವದರಿಂದ ಆ ವಿವಾಹವು ನ್ಯಾಯಸಮ್ಮತ ವಿವಾಹವೆನ್ನಲಿಕ್ಕೆ ಸಾಕಾಗಿರುವದೋ ಅವೇ ಆಡಿದರಿಂದ ಮಾಡಿದರಿಂದ ಮುಂತಾಗಿ ಹಿಂದೂ ವಿಧವೆಯ ಮದುವೆ ಸಮಯ ಉಂಟಾದರೆ ಅಷ್ಟೇ ಫಲಉಳ್ಳವುಗಳಾಗಿ ಇರತಕ್ಕದ್ದು; ಮತ್ತು ಒಬ್ಬ ವಿಧವೆಯ ವಿವಾಹಕ್ಕೆ ಅಂಥ ಮಾತುಗಳು ಸಂಸ್ಕಾರಗಳು ಲಗಾವಾಗುವುದಿಲ್ಲವೆಂಬ ಕಾರಣದಿಂದ ಅಂಥ ವಿವಾಹವು ಅಸಿಂಧುವೆಂತ ಹೇಳಲಾಗದು.

೭. ಮ್ಯಾನರ ವಿಧವೆಯ ಪುನರ್ವಿವಾಹಕ್ಕೆ ಒಪ್ಪಿಗೆ:—

ಪುನರ್ವಿವಾಹಕ್ಕೆ ವಿಧವೆಯು ಮ್ಯಾನರಳಾಗಿ ಅವಳ ವಿವಾಹದ ಶೋಭನವು ಆಗದವಳಾದರೆ ಅವಳು ತನ್ನ ತಂದೆಯ ಸಮ್ಮತಿ ಇಲ್ಲದೆ

ಪುನರ್ವಿವಾಹಮಾಡಿಕೊಳ್ಳ ಕೂಡದು. ತಂದೆಯಿಲ್ಲದವಳಾದರೆ ತಂದೆಯ ತಂದೆ, ಅಂಥವನು ಇಲ್ಲದಿದ್ದರೆ ಅವಳ ತಾಯಿಯ ಅಥವಾ ಸಹೋದರರು, ಇಲ್ಲದಿದ್ದರೆ ಅವಳ ನಂತರದ ಗಂಡು ಸಂಬಂಧಿಕನ ಸಮ್ಮತಿ ಇಲ್ಲದೆ ಆಗಕೂಡದು.

೮. ಈ ಪ್ರಕರಣಕ್ಕೆ ವಿರುದ್ಧವಾಗಿ ವಿವಾಹ ಮುದ್ದತು ಮಾಡುವುದರ ಶೀಕ್ಷೆ:— ಈ ಸೆಕ್ಷನಿನ ಆಧಾರಗಳಿಗೆ ವಿರುದ್ಧವಾಗಿ ಯಾವುದೊಂದು ವಿವಾಹವನ್ನು ಬದ್ಧಾಮುದ್ದತು ಮಾಡುವ ಎಲ್ಲಾ ಮನುಷ್ಯರಿಗೆ ಒಂದು ವರುಷಕ್ಕೆ ಮೀರದ ಕೈದಿಯೂ ಜುರುಮಾನೆಯೂ ಯಾ ಎರಡೂ ಕೂಡಿ ಶಿಕ್ಷಿಸಲ್ಪಡುವವರಾಗಬೇಕು.

ಅಂಥ ವಿವಾಹದ ಆಧಾರದಲಾಗು:— ಈ ಸೆಕ್ಷನಿನ ಆಧಾರಗಳಿಗೆ ವ್ಯತಿರಿಕ್ತವಾಗಿ ನಡೆಯಿಸಲ್ಪಡುವ ಎಲ್ಲಾ ವಿವಾಹಗಳು ಒಂದು ನ್ಯಾಯ ಕೋರ್ಟಿನಲ್ಲಿ ಅಸಿಂಧುವಾಗಿ ನಿರ್ಣಯವಾಗಬಹುದು.

ಪರಂತು ಈ ಸೆಕ್ಷನಿನ ವಿರುದ್ಧವಾಗಿ ಮಾಡಲ್ಪಟ್ಟ ಯಾವದೊಂದು ವಿವಾಹದ ಸಿಂಧುತ್ವದ ಕುರಿತು ಹುಟ್ಟುವ ಪ್ರಶ್ನೆಯಲ್ಲಿ ಹಿಂದೆ ಹೇಳಲ್ಪಟ್ಟ ಸಮ್ಮತಿಯು (ಎ) ಇದರ ವಿರುದ್ಧ ಸಾಧನೆ ರುಜುವಾಗುವ ತನಕ ಅಂಥ ಸಮ್ಮತಿ ಕೊಟ್ಟಿರುವುದಾಗಿ ತಿಳಿಯಲೇಬೇಕು ಮತ್ತು ಅಂಥ ಮದುವೆಯು ಶೋಭನದ ನಂತರ ಅಸಿಂಧುವಾಗಿ ನಿರ್ಣಯವಾಗಲಾರದು.

೯ ಪ್ರಾಯ ಸಮರ್ಥ ವಿಧವೆಯು ತನ್ನ ಪುನರ್ವಿವಾಹಕ್ಕೆ ಸಮ್ಮತಿ:— ಪ್ರಾಯ ಸಮರ್ಥಳಾದ ವಿಧವೆಯ ಸಮ್ಮತಿಯಲ್ಲಿ ಅಥವಾ ಅವಳ ವಿವಾಹದ ಶೋಭನವಾಗಿದ್ದರೆ ಅವಳ ಪುನರ್ವಿವಾಹವು ನ್ಯಾಯ ಸಮ್ಮತ ಸಿಂಧುವಾದ್ದು ಎಂದು ಇತ್ಯರ್ಥಪಡಿಸಲಿಕ್ಕೆ ಸಾಕಷ್ಟು ಸಮ್ಮತಿ ಎಂದು ತಿಳಿಯಬೇಕು.



## ೧೫. ಇತರ ಹಾನಿ.

ವಿಧವಾವಿವಾಹದ ಪ್ರಚಾರವಾಗದಿದ್ದಲ್ಲಿ ಸಮಾಜದಲ್ಲುಂಟಾಗುವ ಇತರ ಹಾನಿಗಳ ಕುರಿತು ಇಲ್ಲಿ ಒಂದಿಷ್ಟು ವಿವರಿಸಿದರೆ ಅನುಚಿತವಾಗಲಾರದು.

1. The number of Hindus has increased since 1901 by 5 percent while that of Mohamedans, Sikhs and Budhists has increased respectively by 7-37 & 13 per cent. As is now well-known, the Hindus are less prolific than the Mohamedans, Budhists and Animists and other communities owing mainly to their Social customs of early marriage and compulsory widowhood. Girls are commonly married long before they reach maturity to men who may be much older than themselves, and a very large proportion of them lose their husbands while they are still of child bearing age or even before they have attained it

ತಾತ್ಪರ್ಯ:— ಹಿಂದೂಗಳ ಜನಸಂಖ್ಯೆಯು ೧೯೦೧ರಿಂದ ಸೇಕಡಾ ೫ರಂತೆ ಹೆಚ್ಚಿತು. ಪರಂತು ಮುಸಲ್ಮಾನರ ಸಂಖ್ಯೆಯು ಏಳರಂತೆ ಹೆಚ್ಚಿತು. ಇದರ ಮುಖ್ಯ ಕಾರಣವು ಹಿಂದೂಗಳಲ್ಲಿರುವ ಬಾಲ್ಯವಿವಾಹ ಮತ್ತು ಬಲಾತ್ಕಾರದ ವೈಧವ್ಯಗಳೆಂಬ ಕುರೀತಿಗಳೇ ಆಗಿರುತ್ತವೆ. ಚಿಕ್ಕ ಪ್ರಾಯದಲ್ಲೇ ಕನ್ಯೆಯರ ವಿವಾಹವು ಆಗಿ ಹೋಗುತ್ತದೆ. ಹೆಚ್ಚಿನವರು ಯವ್ವನಾವಸ್ಥೆಗೆ ಬರುವ ಮೊದಲೇ

ಪತಿಯನ್ನು ಕಳಕೊಳ್ಳುತ್ತಾರೆ. ಕಾರಣವೇನಂದರೆ ಪುರುಷರ ವಯಸ್ಸು ಕನ್ಯೆಯರಿಗಿಂತ ಬಹಳ ಹೆಚ್ಚಾಗಿರುತ್ತದೆ. ಕನ್ಯೆಯರು ಸಂತಾನೋತ್ಪನ್ನಗೊಳಿಸಲು ಯೋಗ್ಯರಾಗುವಷ್ಟರಲ್ಲಿ ಅವರ ಪತಿಯಂದಿರ ದೇಹಾಂತವಾಗುತ್ತದೆ. ಕೆಲವು ಸಂದರ್ಭಗಳಲ್ಲಿ ಈ ಮೊದಲೇ ಪತಿಯನ್ನು ಕಳಕೊಳ್ಳುವುದೂ ಉಂಟು.

2. The Mohamedans and Christians also have a considerably larger proportion of children than the Hindus, whose Social customs are less favourable to rapid growth Hindu girls are as a rule married before puberty, and the difference in age between them and their husbands is often very great. A very large proportion of them become widows while they are still capable of bearing children and these are frequently not allowed to marry again.

ತಾತ್ಪರ್ಯ:—ಮುಹಮ್ಮದೀಯ ಮತ್ತು ಕ್ರೈಸ್ತರಲ್ಲಿ ಮಕ್ಕಳ ಸಂಖ್ಯೆಯು ಹಿಂದೂಗಳಿಗಿಂತ ಬಹಳ ಅಧಿಕವಿರುತ್ತದೆ. ಕಾರಣವೇನೆಂದರೆ ಹಿಂದುಗಳ ಸಾಮಾಜಿಕ ನಿಯಮಗಳು ಜನವೃದ್ಧಿಗೆ ಅನುಕೂಲವಾಗಿಲ್ಲ. ಹಿಂದೂಕನ್ಯೆಯರು ಯವ್ವನಕ್ಕೆ ಬರುವ ಮೊದಲೇ ಮದುವೆಮಾಡಿಕೊಡಲ್ಪಡುತ್ತಾರೆ. ಮತ್ತು ಹಿಂದೂಗಳಲ್ಲಿರುವ ಪತಿಪತ್ನಿಯರ ವಯಸ್ಸಿನಲ್ಲಿಯೂ ವಿಪರೀತವಾದ ಅಂತರವಿರುತ್ತದೆ. ಇಂತಹರಲ್ಲಿ ಹೆಚ್ಚಿನವರು ಸಂತಾನ ಉತ್ಪಾದನೆಯ ಶಕ್ತಿಯು ಬರುವ ಮೊದಲೇ ವಿಧವೆಯರಾಗುತ್ತಾರೆ. ಆ ಮೇಲೆ ಅವರಿಗೆ ಪುನರ್ವಿವಾಹಕ್ಕೆ ಸಮ್ಮತಿಯು ಕೊಡಲ್ಪಡುವುದಿಲ್ಲ.

3. Though there is at present no organized proselytism by the Mullas, here and there individuals are constantly attorning to Mohamedanism..........in the case of widows, the allurement of an offer of marriage. Whenever there is a love affair between a Hindu and a Mohamedan, it can only culminate in an open union if the Hindu goes over to Islam, while the discovery of a secret liaison often has the same sequel.

ತಾತ್ಪರ್ಯ:—ಹಿಂದೂಗಳನ್ನು ಮತಾಂತರಗೊಳಿಸುವ ಬಗ್ಗೆ ಮುಹಮ್ಮದೀಯ ಮೌಲ್ವಿಗಳಲ್ಲಿ ನಿಯಮಬದ್ಧವಾದ ಸಂಸ್ಥೆಗಳಿಲ್ಲ ವಾದರೂ ಸದಾಸಮಯ ಒಬ್ಬಿಬ್ಬ ವ್ಯಕ್ತಿಗಳು ಮುಹಮ್ಮದೀಯರಲ್ಲಿ ಸೇರುತ್ತಲೇ ಇದ್ದಾರೆ. ಇವರಲ್ಲಿ ಹೆಚ್ಚಿನವರು ಪುನರ್ವಿವಾಹಕ್ಕಾಗಿ ಹಾ ತೊರೆಯುತ್ತಿರುವ ವಿಧವೆಯರು! ಎಲ್ಲಿಯಾದರೂ ಹಿಂದೂ ಮುಸಲ್ಮಾನರೊಡನೆ ಪರಸ್ಪರ ಪ್ರೇಮವು ಬೆಳೆದಲ್ಲಿ ಹಿಂದುಗಳೇ ಮುಸಲ್ಮಾನರಾಗುತ್ತಾರೆ; ಬಹಿರಂಗವಾಗಿ ಅವರ ವಿವಾಹವು ಆಗಿಹೋಗುತ್ತದೆ. ಗುಪ್ತಸಮ್ಮಂಧ ಬೆಳೆದರೂ ಕೂಡ ಗುಟ್ಟು ರಟ್ಟಾದಲ್ಲಿ ಹಿಂದುಗಳೇ ಮುಹಮ್ಮದೀಯ ಮತವನ್ನು ಸ್ವೀಕರಿಸುವರು.

೧೯೧೧ರ ಖಾನೇಶುಮಾರಿ ವರದಿ ಪುಟ ೧೨೦, ೧೫೧, ೧೨೧.

## ವೇಶ್ಯೆಯರ ಅಭಿವೃದ್ಧಿ.

ಭಾರತವರ್ಷದ ದೊಡ್ಡದೊಡ್ಡ ಪಟ್ಟಣಗಳಲ್ಲಿ ವಾಸಿಸುತ್ತಿದ್ದು, ಈ ಜಗತ್ತಿನ ವೈಭವವನ್ನೇ ಭೋಗಿಸುತ್ತಿರುವವರ ವಿಷಯವಾಸನಾ ತೃಷೆಯನ್ನು ಪೂರ್ಣಗೊಳಿಸಲು ಬಹುಸಂಖ್ಯೆಯಲ್ಲಿ ಕುಳಿತಿರುವ ವೇಶ್ಯೆಯರ ಉತ್ಪತ್ತಿಯೂ ವಿಧವೆಯರಿಂದಲೇ ಪ್ರಾರಂಭಿಸಲ್ಪಟ್ಟಿರುತ್ತದೆ.

ಪ್ರತಿಯೊಬ್ಬ ವೇಶ್ಯೆಯ ವೈಯಕ್ತಿಕ ಜೀವನವನ್ನು ಪರಿಶೀಲಿಸಿದರೆ ಇದರ ನಿಜಸ್ಥಿತಿಯು ಗೊತ್ತಾಗದಿರದು. ಬಲಾತ್ಕಾರದ ವೈಧವ್ಯ; ಬಂಧುಬಾಂಧವರ ಸಹಾಯಶೂನ್ಯತೆ; ಇವುಗಳೆಲ್ಲವನ್ನೂ ಸಹಿಸಲಾರದ ವಿಧವೆಯು ಎಲ್ಲಾದಕ್ಕಿಂತ ಮೊದಲು ವ್ಯಭಿಚಾರದ ಕ್ಷೇತ್ರಕ್ಕೆನೇ ಕಾಲಿಡುತ್ತಾಳೆ. ಕೆಲವು ಸಮಯದ ನಂತರ ಇವಳ ವೃತ್ತಿಯು ಜನಜನಿತವಾದಲ್ಲಿ, ವರ್ತಮಾನಕಾಲದ ಹಿಂದೂಸಮಾಜದಲ್ಲಿರುವ ಕೆಲವು ನರಪಶುಗಳು ಅವಳಿಂದಲೇ ತಮ್ಮ ಪಾಪದ ವ್ಯವಸಾಯವನ್ನು ಪೂರೈಸಿಕೊಳ್ಳುತ್ತವೆ. ಇಂತಹವರೇ ವೇಶ್ಯಾವೃತ್ತಿಯನ್ನು ತಡೆಗಟ್ಟುವ ಕಾರ್ಯದಲ್ಲಿ ಯಮಪಿಶಾಚಿಗಳಂತೆ ಅಡ್ಡ ನಿಲ್ಲುತ್ತಾರೆ.

## ಗರ್ಭಪಾತ ಮತ್ತು ಶಿಶುಹತ್ಯೆ.

ಬಹಿರಂಗವಾಗಿ ವ್ಯಭಿಚಾರಕ್ಕೆ ಮನಸ್ಸು ಬಾರದ ವಿಧವೆಯರನೇಕರು ತಮ್ಮ ಮಾನಸಿಕವೇಗವನ್ನು ತಡೆಯಲಾರದೆ ರಹಸ್ಯವಾಗಿ ಸಮ್ಮಂಧವನ್ನು ಬೆಳೆಸಿಕೊಂಡು ಗರ್ಭಪಾತ, ಶಿಶುಹತ್ಯೆ, ಮುಂತಾದ ದುಷ್ಕೃತ್ಯಗಳಿಗೆ ಬಲಿಬೀಳುತ್ತಾರೆ. ಉತ್ತಮ ಮನೆತನಕ್ಕೆ ಸೇರಿದವರೆಂದು ಅಭಿಮಾನಪಡುತ್ತಿರುವ ಅನೇಕ ಕುಟುಂಬಗಳಲ್ಲಿ ಇಂತಹ ಅನರ್ಥಗಳು ಪದೇ ಪದೇ ಆಗುತ್ತಿವೆ ಈ ಕುರಿತು ಸವಿಸ್ತಾರವಾದ ವಿಚಾರವನ್ನು ಪುಸ್ತಕದ ಪ್ರಾರಂಭದಲ್ಲಿಯೇ ನಾವು ವಿವರಿಸಿರುವೆವು. ಇನ್ನು ಕೆರೆಬಾವಿಗಳಲ್ಲಿ ಆಗಿಂದಾಗ್ಯೆ ದೊರೆಯುತ್ತಿರುವ ಸ್ತ್ರೀಯರ ಮತ್ತು ಶಿಶುಗಳ ಶವಗಳಂತೂ ಈ ಕುರಿತು ಹೆಚ್ಚಿನ ಪ್ರಮಾಣಗಳಿಗೆ ಯೋಗ್ಯವಾಗಿರುತ್ತವೆ. ಜಾತೀಯ ಗೌರವ; ಸನಾತನ ಧರ್ಮದ ಟೊಳ್ಳು ಮಹತ್ವ; ಇವೆಲ್ಲವನ್ನೂ ಉಳಿಸಿಕೊಳ್ಳಲಿಕ್ಕೆ ಶ್ರೀಮಂತಿಕೆಯ ಬಲದಿಂದ ಮೇಲಿನ ಎಲ್ಲಾ ತರದ ದುಷ್ಕೃತ್ಯಗಳು ಕ್ಷಣಮಾತ್ರದಲ್ಲಿ ಅಲ್ಲಿಂದಲ್ಲಿಗೆ ಅಡಗಿಸಲ್ಪಡುತ್ತವೆ. ಆದರೂ ಪುನರ್ವಿವಾಹಕ್ಕೆ ಸಮ್ಮತಿ ಕೊಟ್ಟು ಸಮಾಜದಲ್ಲಾಗುವ ಅತ್ಯಾಚಾರವನ್ನು ನಿಲ್ಲಿಸಲಿಕ್ಕೆ ಸಮಾ

ಜವು ಸಮ್ಮತಿಯನ್ನೀಯುವುದಿಲ್ಲ. ಈಗಿನ ಕಾಲದ ಸನಾತನ ಧರ್ಮಾವಲಂಭಿಗಳಲ್ಲಿ ತುಂಬಿಕೊಂಡಿರುವ ಸ್ವಾರ್ಥಪರಾಯಣತೆಯೇ ಇವೆಲ್ಲಕ್ಕೂ ಕಾರಣ. ಮಾನವ ಸಮಾಜದ ಉದ್ಧಾರಕ್ಕೆ ಸ್ವಾರ್ಥಕ್ಕಿಂತಲೂ ಜಾತೀಯತೆಯು ಶ್ರೇಷ್ಟವು. ಆದರೆ ಜಾತೀಯತೆಗಿಂತ ಮನುಷ್ಯತ್ವವು ಪರಮ ಶ್ರೇಷ್ಟವು. ಮನುಷ್ಯತ್ವದ ಉನ್ನತಿಯ ಕಾರ್ಯದಲ್ಲಿ ಜಾತೀಯ ಪಕ್ಷಪಾತವು ತಡೆಯಾಗಿ ನಿಂತಲ್ಲಿ ಅಂತಹ ಜಾತಿಯು ಮನುಷ್ಯತ್ವವೆಂಬ ಮಹಾ ಸಮುದ್ರದಲ್ಲಿ ಮುಳುಗಿ ಹೋಗುವುದೇ ಪರಮ ಲೇಸು. ಯಾವ ಸಮಾಜದ ಜನರಲ್ಲಿ ಮನುಷ್ಯತ್ವವಿರುವುದಿಲ್ಲವೋ, ಆ ಸಮಾಜವು ಅನ್ಯರ ಪಾದಾಕ್ರಾಂತವಾಗುವುದರಲ್ಲಿ ಸಂದೇಹವಿಲ್ಲ. ವರ್ತಮಾನಕಾಲದ ಹಿಂದೂ ಸಮಾಜದಲ್ಲಿ ನಿಜವಾದ ಮನುಷ್ಯತ್ವವು ತಲೆದೋರಬೇಕಾದರೆ ವಿಧವೆಯರಿಂದಾಗಿ ದೇಶದ ಹಾಗೂ ಸಮಾಜದ ಮೇಲೆ ಅಂಟಿಕೊಂಡಿರುವ ಭಯಂಕರವಾದ ಎಲ್ಲಾ ಕಲಂಕಗಳನ್ನು ನಿವಾರಿಸಬೇಕು. ಇದಕ್ಕಾಗಿ ವಿಧವೆಯರ ಪುನರ್ವಿವಾಹಕ್ಕೆ ಹಿಂದೂಸಮಾಜವು ಪೂರ್ಣ ಸಮ್ಮತಿಯನೀಯಬೇಕು.



# ಮುಖಂಡರ ಅಭಿಪ್ರಾಯ.

ಕೊನೆಯದಾಗಿ "ವಿಧವಾವಿವಾಹ"ದ ಕುರಿತು ಭಾರತೀಯ ಮುಖಂಡರ ಅಭಿಪ್ರಾಯಗಳು ಹೇಗಿವೆ ಎಂಬುದನ್ನು ಸ್ವಲ್ಪದರಲ್ಲಿಯೇ ಇಲ್ಲಿ ವಿವರಿಸಿ ಈ ಪುಸ್ತಕವನ್ನು ಕೊನೆಗಾಣಿಸುವೆವು.

* ಹಿಂದುಸ್ಥಾನದ ವಿಧವೆಯರ ಸಂಖ್ಯೆಯನ್ನು ಓದಿದ ಯಾವನೊಬ್ಬ ಮನುಷ್ಯನಿಗೂ ದುಃಖವು ಬಾರದಿರದು. ಇವರ ದುಸ್ಥಿತಿಯ ನಿವಾರಣೆಗೆ ಪುನರ್ವಿವಾಹವೇ ತಕ್ಕ ಉಪಾಯವೆಂದು ಸುಧಾರಕ ಪಂಗಡದವರು ಹೇಳಬಹುದು. ಆದರೆ ನಾನಿದನ್ನು ಒಪ್ಪಲಾರೆನು. ನಾನು ಸಹ ಪರಿವಾರದೊಂದಿಗೆ ಇದ್ದವನು. ನನ್ನ ಕುಟುಂಬದಲ್ಲಿಯೂ ವಿಧವೆಯರಿದ್ದಾರೆ. ಪರಂತು ನಾನವರಿಗೆ, ನೀವು ಪುನರ್ವಿವಾಹವನ್ನೇ ಮಾಡಿಕೊಳ್ಳಿರೆಂದು ಹೇಳಲಾರೆನು. ಆ ಕುರಿತಾದ ವಿಚಾರವನ್ನೂ ಅವರ ಮನಸ್ಸಿನಲ್ಲಿ ಉಂಟು ಮಾಡಲಾರೆ. ಆದರೆ, ನಾವು ವಿಧವೆಯರನ್ನು ಪುನರ್ವಿವಾಹವಾಗಗೊಡದಿರುವಂತೆ ಪುರುಷರು ಸಹ ಬಹುವಿವಾಹವಾಗದಂತೆ ಪ್ರತಿಜ್ಞೆಯನ್ನು ಮಾಡಬೇಕೆಂಬುದೇ ನನ್ನಭಿಪ್ರಾಯ. ಇದಲ್ಲದೆ ವಿಧವೆಯರ ಬಗ್ಗೆ ಉತ್ತಮವಾದ ರೀತಿಯಲ್ಲಿ ಕೆಲವು ವ್ಯವಸ್ಥೆಗಳನ್ನು ಮಾಡುವುದು ನಮ್ಮ ಮುಖ್ಯ ಕರ್ತವ್ಯವಾಗಿರುತ್ತದೆ.

೧. ಬಾಲ್ಯವಿವಾಹವನ್ನು ಸಂಪೂರ್ಣವಾಗಿ ತಡೆಗಟ್ಟಬೇಕು.

೨. ಪತಿ ಪತ್ನಿ ಎಂಬುದರ ನಿಜವಾದ ವಿಷಯವನ್ನು ತಿಳಿದುಕೊಳ್ಳುವ ಮೊದಲು ವಿವಾಹ ಮಾಡಿಕೊಡುವ ದುಷ್ಟ ಪದ್ಧತಿಯನ್ನು ನಾಶಮಾಡಬೇಕು.

---

* ಇಲ್ಲಿ ಮಹಾತ್ಮಾಜಿಯವರು ನಮ್ಮ ದೇಶದ ಪ್ರತಿ ಸಂಸ್ಥಾನದಲ್ಲಿರುವ ಹಿಂದೂ ಮತ್ತು ಮಹಮ್ಮದೀಯ ವಿಧವೆಯರ ಪ್ರಾಯ ಮತ್ತು ಸಂಖ್ಯೆಗಳನ್ನು ವಿವರವಾಗಿ ವಿವರಿಸಿರುವರು. ಈ ಕುರಿತು ಸಾಕಷ್ಟು ಸಂಗ್ರಹವನ್ನು ಪ್ರಾರಂಭದಲ್ಲಿಯೇ ನಾವು ವಿವರಿಸಿರುವುದರಿಂದ ಪುನಃ ಇಲ್ಲಿ ವಿವರಿಸಲಿಲ್ಲ. (ಸಂಪಾದಕ)

೩. ವಿವಾಹಿತಸ್ತ್ರೀಯು ತನ್ನ ಪತಿಯ ಸಹವಾಸದಲ್ಲಿರದೆ ವಿಧವೆಯಾಗಿದ್ದರೆ ಅವಳಿಗೆ ಪುನರ್ವಿವಾಹಕ್ಕೆ ಎಡೆಕೊಡಬೇಕು. ಮತ್ತು ಈ ಕುರಿತು ಅವಳನ್ನು ನಿಂದಿಸದೆ ಉತ್ಸಾಹಿತಳನ್ನಾಗಿ ಮಾಡಬೇಕು.

೪. ಹದಿನೈದು ಯಾ ಅದಕ್ಕಿಂತ ಕಡಿಮೆ ಪ್ರಾಯದ ವಿಧವೆಗೆ ಪುನರ್ವಿವಾಹಕ್ಕೆ ಸಮ್ಮತಿಯನ್ನೀಯಬೇಕು.

೫. ವಿಧವೆಯರು ಅಮಂಗಲೆಯರೆಂಬುದಾಗಿ ಜನರು ಭಾವಿಸುತ್ತಾರೆ. ಇದು ದೊಡ್ಡ ಅನ್ಯಾಯ. ಅವರನ್ನು ನಾವೆಲ್ಲರೂ ಒಳ್ಳೆಯ ಸನ್ಮಾನದಿಂದ ನೋಡಬೇಕು. ಯಾವ ವಿಧದಲ್ಲಿಯೂ ಅವರನ್ನು ತುಚ್ಛೀಕರಿಸಬಾರದು.

೬. ವಿಧವೆಯರಿಗೆ ಉತ್ತಮೋತ್ತಮವಾದ ಶಿಕ್ಷಣಗಳಿಗೆ ಪೂರ್ಣ ವ್ಯವಸ್ಥೆಮಾಡಬೇಕು. ಇದರಿಂದಲೇ ಅವರು ಸುಖಿಗಳಾಗಿ ಬದುಕಬಲ್ಲರು. ಹಿಂದೂಸಮಾಜದ ಮೇಲೆ ಬಿದ್ದಿರುವ ಕಲಂಕವು ಮಾಯವಾಗುವುದು.

—ಮಹಾತ್ಮಾ ಗಾಂಧಿ.

---

ದೇಶಬಾಂಧವರೇ!

ತಾವೆಲ್ಲರೂ ಆಲಸ್ಯವೆಂಬ ಅಂಧಕಾರದಲ್ಲಿ ಬಿದ್ದು ಕಂಗೆಡುತ್ತಾ ಇನ್ನೆಷ್ಟು ಕಾಲವನ್ನು ಕಳೆಯುವಿರಿ? ಒಮ್ಮೆ ತಮ್ಮ ದೃಷ್ಟಿಯನ್ನು ವಿಶಾಲವಾದ ಹಿಂದೂ ಜಾತಿಯ ಕಡೆಗೆ ತಿರುಗಿಸಿರಿ. ಸಾವಿರಾರು ಋಷಿಮುನಿಗಳಿಗೆ ಜನ್ಮವಿತ್ತಿರುವ ಭಾರತಮಾತೆಯು ಅದೊಂದು ಕಾಲದಲ್ಲಿ ಆದರ್ಶನೀಯವಾದ ಸಭ್ಯತೆಯ ಶಿಖರವನ್ನಡರಿದ್ದಳು. ನಮ್ಮವರ ನೀತಿ ನಿಯಮಗಳು ಜಗತ್ತಿನ ಸರ್ವ ಕಡೆಗಳಲ್ಲಿ ಏಕಪ್ರಕಾರವಾಗಿ ಆಚ್ಛಾದಿತವಾಗಿದ್ದುವು. ಪರಂತು ಇಂದಿಗೆ ನಮ್ಮ ದೇಶದಲ್ಲೆಲ್ಲಿಯೂ ಸಾಮಾಜಿಕ ಅತ್ಯಾಚಾರಗಳೂ, ವ್ಯಭಿಚಾರಾದಿ ಹೇಯ ವರ್ತನೆಗಳೂ ಗೋಚರಿಸುತ್ತಿವೆ. ಅಂಧರೂಢಿ, ಡೊಂಕು ನ್ಯಾಯದ ಶಾಸ್ತ್ರ ಮುಂತಾದವುಗಳ ಬಲೆಗೆ ಬಿದ್ದು ಅಧಃಪತನವೆಂಬ

ನರಕ ಕೂಪದ ಕಡೆಗೆ ಎಳೆಯಲ್ಪಡುತ್ತಿದ್ದೀರಿ. ನಮ್ಮ ಪ್ರಾಚೀನ ಶಾಸ್ತ್ರಗಳನ್ನು ಚೆನ್ನಾಗಿ ಅಧ್ಯಯನಮಾಡಿರಿ. ಅವುಗಳಲ್ಲಿ ನಿರೂಪಿಸಿ ದಂತೆ ನಡಿಯಿರಿ. ಆಗ ಮಾತ್ರ ತಾವು ದೇಶದ ಮತ್ತು ಸಮಾಜದ ಮೇಲೆ ಬಿದ್ದಿರುವ ಕಲಂಕವನ್ನು ನಿವಾರಿಸಬಲ್ಲಿರಿ. ಬಹುಕಾಲದ ಕುತ್ಸಿತ ನಿಯಮಗಳಿಂದ ಹಿಂದೂ ಜನಾಂಗವನ್ನು ನಾಶಮಾಡ ಬೇಡಿರಿ. ಸಮಾಜದ ಉನ್ನತಿಗೆ ಸುಧಾರಣೆಯ ಕ್ರಾಂತಿಯನ್ನು ಅಲ್ಲಲ್ಲಿ ಪಸರಿಸಿರಿ! ಈಗಿನ ನಮ್ಮ ಪರಿಸ್ಥಿತಿಗಳನ್ನು ಪರಿಶೀಲಿಸುವಾಗ, ಕೆಲವು ಶತಮಾನಗಳ ವರೆಗೂ ನಾವು ನಮ್ಮ ಮನುಷ್ಯತ್ವವನ್ನೂ ನಮ್ಮ ಆದರ್ಶತೆಯನ್ನೂ ಸಂಪಾದಿಸಿಕೊಳ್ಳಲಾರೆವೆಂಬ ಭಯವು ನನ್ನಲ್ಲುಂ ಟಾಗುತ್ತದೆ. ನಾವೆಲ್ಲರೂ ನಮಗೆ ಬೇಕಾದ ಸುಖಭೋಗಗಳಿಗಾಗಿ ಸರ್ವ ತರದ ಅನುಕೂಲತೆಗಳನ್ನು ಎಲ್ಲಾ ವಿಧದಲ್ಲಿ ಮಾಡಿಕೊಳ್ಳು ತ್ತೇವೆ. ಆದರೆ, ನಮ್ಮ ಧರ್ಮದ, ಸಮಾಜದ ಒಂದಂಗದಂತಿರುವ ಮಹಿಳಾಸಮಾಜವನ್ನು ಮಾತ್ರ ನಮ್ಮ ಕಾಲತುಳಿತಕ್ಕೆ ಸಮಾನ ವೆಂದು ಭಾವಿಸುತ್ತೇವೆ. ಅವರನ್ನು ನಿರ್ಬಂಧದಿಂದ ಸಮಾಜದ ಬಂಧನ ಗಳಿಗೆ ಒಪ್ಪಿಸುತ್ತೇವೆ. ಇದರಿಂದಾಗಿ ಇಂದು ದೇಶದಲ್ಲೆಲ್ಲಿಯೂ ಅಸಂಖ್ಯಾತ ತರುಣಿಯರು ವೈಧವ್ಯದ ಘೋರ ದೀಕ್ಷೆಯಿಂದ ಬದ್ಧ ರಾಗಿದ್ದಾರೆ. ವರ್ಷಂಪ್ರತಿ ನಮ್ಮ ಸಮಾಜದಲ್ಲಿ ತುಂಬುವ ಇವರ ಸಂಖ್ಯೆಯನ್ನು ನೋಡಿದರೆ ಯಾವಾತನ ಹೃದಯವು ಕರಗಿ ನೀರಾ ಗದು? ಆದರೆ, ನಿಷ್ಠುರಹೃದಯಿಯಾದ ಹಿಂದೂಸಮಾಜವು ಕಲ್ಲೆದೆ ಯಾಗಿ ನಿಂತಿರುವುದು. ಇಂತಹ ಜಾಡ್ಯವನ್ನು ಸಮೂಲವಾಗಿ ನಾಶಮಾಡಿರಿ.

ವಿಧವೆಯರು ಪ್ರಕೃತಿ ಸಿದ್ಧವಾದ ಕಾಮಶಕ್ತಿಯನ್ನು ತಡೆಯ ಲಾರದೆ ಉದ್ವಿಗ್ನರಾಗಿ ಸಮಾಜದಿಂದ ಹೊರಗೆ ಬಂದು ವ್ಯಭಿಚಾರಕ್ಕೆ ತೊಡಗಿದಾಗ ನೀವೆಲ್ಲರೂ ಕಣ್ಣು ಮುಚ್ಚಿಕೊಳ್ಳುತ್ತೀರಿ. ಅವರಿಗೆ ಯೋಗ್ಯ ವ್ಯವಸ್ಥೆಯನ್ನು ಮಾಡದೆ ತಮ್ಮ ಮಾನಮರ್ಯಾದೆ ಕಳ ಕೊಂಡು ಅವರನ್ನು ಭಯಂಕರವಾದ ಕುಕರ್ಮಕ್ಕೆ ಪ್ರೋತ್ಸಾಹಿಸು

ತ್ತೀರಿ. ಶಾಸ್ತ್ರಗಳ ಆಧಾರದಂತೆ ಅವರಿಗೆ ಪುನರ್ವಿವಾಹ ಮಾಡಿರೆಂದು ಹೇಳಿದರೆ ಸನಾತನ ಧರ್ಮವೇ ನಾಶವಾದೀತೆಂದು ಬೊಬ್ಬೆ ಹೊಡೆಯು ತ್ತೀರಿ. ಇದೆಂತಹ ಆಶ್ಚರ್ಯಕರವಾದ ವಿಷಯ! ಸ್ತ್ರೀಯು ಪತಿಯನ್ನು ಕಳಕೊಂಡ ಮೇಲೆ ಅವಳಲ್ಲಿರುವ ಮನುಷ್ಯತ್ವ ಮತ್ತು ಪ್ರಕೃತಿಯ ಗುಣವಿಶೇಷಣಗಳೆಲ್ಲವೂ ನಾಶವಾಗುತ್ತದೆಂದು ತಾವು ತಿಳಿದು ಕೊಂಡಿರಬಹುದಲ್ಲವೇ? ಆದರೆ ಇದು ಶುದ್ಧ ತಪ್ಪು ತಿಳುವಳಿಕೆ. ಈ ರೀತಿಯಲ್ಲಿ ವಿಧವೆಯರು ಪ್ರಾಕೃತಿಕ ಶಕ್ತಿಯಿಂದ ಬಿಡುಗಡೆ ಹೊಂದುತ್ತಾರಾದರೆ ಅವರು ಯಾವ ವಿಧದಲ್ಲಿಯೂ ಮಾನಸಿಕ ದುಃಖ ಕ್ಕೀಡಾಗಲಾರರು; ಮತ್ತು ವ್ಯಭಿಚಾರಾದಿ ನಿಂದನೀಯವೃತ್ತಿಗಳನ್ನು ಕೈಕೊಳ್ಳುತ್ತಿದ್ದಿಲ್ಲ. ತಾವೆಲ್ಲರೂ ಮಾನವಸಮಾಜವೆಂಬ ಈ ಸುಂದರ ವಾದ ಉದ್ಯಾನದಲ್ಲಿ ಇಂತಹ ವಿಷಬೀಜವನ್ನು ಬಿತ್ತುತ್ತಿದ್ದೀರಿ. ಯಾವ ದೇಶದ ಜನರ ಹೃದಯಾಂಗಣವು ದಯಾಶೂನ್ಯತೆಯಿಂದ ಪರಿ ವೇಷ್ಟಿತವಾಗಿರುವುದೋ, ಯಾರಿಗೆ ತಮ್ಮ ಒಳ್ಳೆಯದು ಕೆಟ್ಟುದರ ಅರಿ ವನ್ನು ತಂದುಕೊಳ್ಳುವ ಶಕ್ತಿಯು ಕೂಡಾ ಇರುವುದಿಲ್ಲವೋ ಅಂತಹ ಜನರ ಮಧ್ಯದಲ್ಲಿ ಮಹಿಳೆಯರು ಎಂದಿಗೂ ಉದ್ಧರಿಸಲ್ಪಡಲಾರರು.

—ಪಂಡಿತ ಈಶ್ವರಚಂದ್ರ ವಿದ್ಯಾಸಾಗರ.

---

ವಿಧವಾವಿವಾಹವನ್ನು ನಾನು ಬಲವಾಗಿ ಸಮರ್ಥಿಸುತ್ತೇನೆ. ಈ ಕಾರ್ಯವನ್ನು ವಿರೋಧಿಸುವವನು ಮನುಷ್ಯತ್ವವಿಹೀನನೆಂದೇ ನಾನು ಭಾವಿಸುವೆನು. ನಮ್ಮ ಸಮಾಜದಲ್ಲಿ ತುಂಬಿಹೋಗಿರುವ ಬಾಲವಿಧವೆಯರಿಗೆ ಪುನರ್ವಿವಾಹವಾಗುವುದು ಅತ್ಯವಶ್ಯವಾಗಿರು ತ್ತದೆ. ಇತರ ವಿಧವೆಯರಿಗೂ ಅವರವರ ಇಚ್ಛೆಯಂತೆ ಪುನರ್ವಿವಾ ಹಕ್ಕೆ ಸಮ್ಮತಿಯನ್ನೀಯಬೇಕು. ಒಬ್ಬ ವಿಧವೆಯು ಪುನರ್ವಿವಾಹ ಮಾಡಿಕೊಳ್ಳಲಿಚ್ಛಿಸಿದರೆ ಆವಳಿಗೆ ಯಾವ ವಿಧದ ಪ್ರತಿಬಂಧವನ್ನೂ ತಂದೊಡ್ಡಬಾರದು. ಸಮಾಜದಲ್ಲಿಯೂ ಅವಳ ಕುರಿತು ತಿರಸ್ಕೃತ ಭಾವನೆಗಳನ್ನುಂಟುಮಾಡಬಾರದು. ಒಂದುವೇಳೆ ಮಕ್ಕಳನ್ನು ಪಡೆ

ದಿದ್ದ ವಿಧವೆಯು ಸಹ ಪತಿಯನ್ನು ಇಚ್ಛಿಸಿದರೆ ಆಕೆಗೂ ವಿವಾಹಕ್ಕೆ ಸಮ್ಮತಿಯನ್ನೀಯಬೇಕು. ಈ ರೀತಿಯಲ್ಲಿ ವಿಧವೆಯರ ಪುನರ್ವಿವಾಹಕ್ಕೆ ಅನುಕೂಲತೆಗಳನ್ನೊದಗಿಸಿ ಕೊಟ್ಟರೆ ಭಾರತವರ್ಷದಲ್ಲಿ ಎಲ್ಲೆಲ್ಲಿಯೂ ಹರಡಿಕೊಂಡಿರುವ ವಿಧವೆಯರ ಸಂಖ್ಯೆಯು ಕಡಿಮೆಯಾಗುವುದಲ್ಲದೆ ಅವರೆಲ್ಲರೂ ಸುಖಿಜೀವಿಗಳಾಗಿ ಬದುಕಬಲ್ಲರು. ಇದುಹೊರತು ಪುನರ್ವಿವಾಹ ಮಾಡಿಕೊಳ್ಳಲು ಇಚ್ಛೆ ಇರದ ಮತ್ತು ಜೀವನ ಪರ್ಯಂತರ ಬ್ರಹ್ಮಚರ್ಯದಲ್ಲಿರಲು ಮನಸ್ಸುಳ್ಳ ವಿಧವೆಯರ ಬಗ್ಗೆ ಅಲ್ಲಲ್ಲಿ ಆಶ್ರಮಗಳು ಸ್ಥಾಪಿಸಲ್ಪಡಬೇಕು. ಅಲ್ಲಿ ಎಲ್ಲಾ ತರದ ಉತ್ತಮ ಶಿಕ್ಷಣಗಳು ಕೊಡಲ್ಪಡಬೇಕು. ಅಲ್ಲಿಯ ವ್ಯವಸ್ಥಾಪಕರು ಉತ್ತಮ ಜ್ಞಾನಶೀಲರೂ, ದಯಾವಂತರೂ ಮತ್ತು ಕರ್ತವ್ಯನಿಷ್ಠರೂ ಆಗಿರಬೇಕು. ಸಮಸ್ತ ಭಾರತೀಯರು ಅಂಧಃಪರಂಪರೆಗಳೆಂಬ ಮಡುವಿನಿಂದೆದ್ದು ಸಮಾಜಸುಧಾರಣೆಯ ವಿಶಾಲವಾದ ಕ್ಷೇತ್ರಕ್ಕೆ ಬಂದು ಸಾವಿರಾರು ಮಂದಿ ವಿಧವೆಯರ ದುಃಖನಿವಾರಣೆಗೆ ಪೂರ್ಣ ಪ್ರಯತ್ನವನ್ನು ಕೈಕೊಳ್ಳಬೇಕು.

ಡಾ। ಸರ್ ತೇಜಬಹದ್ದೂರ್ ಸಪ್ರೂ,
ಎಮ್. ಎ., ಎಲ್. ಎಲ್. ಡಿ., ಕೆ. ಸಿ. ಐ. ಇ.

---

ವಿವಾಹೇಚ್ಛುಗಳಾದ ವಿಧವೆಯರನ್ನು ಯಾವ ವಿಧದಲ್ಲಿಯೂ ತಡೆಗಟ್ಟಬಾರದು. ಇದುಹೊರತು ಬಾಲವಿಧವೆಯರ ಪ್ರಾಯ ಮತ್ತು ಅವರ ಪರಿಸ್ಥಿತಿಗಳನ್ನು ಚೆನ್ನಾಗಿ ಪರಿಶೀಲಿಸಿ, ಅವರ ಭವಿಷ್ಯದ ಜೀವನವ್ಯವಸ್ಥೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವರಿಗೆ ಪುನರ್ವಿವಾಹ ಮಾಡಿಕೊಳ್ಳಿರೆಂದು ಸಲಹೆಯನ್ನಿತ್ತರೆ ಅದು ಅನುಚಿತವಾಗಲಾರದು. ಹಿಂದೂ ಸಮಾಜದ ಉದಾಸೀನತೆಯನ್ನು ಸಹಿಸಲಾರದೆ ಮಹಮ್ಮದೀಯ, ಕ್ರೈಸ್ತ ಇತ್ಯಾದಿ ಅನ್ಯ ಧರ್ಮವನ್ನು ಸೇರಿದ ವಿಧವೆಯರು ಪಶ್ಚಾತ್ತಾಪಗೊಂಡು ಪುನರಪಿ ನಮ್ಮಲ್ಲಿಗೆ ಬರಲಿಚ್ಛಿಸಿದರೆ ಕೂಡಲೇ ಅವರನ್ನು ಶುದ್ಧೀಕರಿಸಿ ಹಿಂದೂಸಮಾಜಕ್ಕೆ ತೆಗೆದುಕೊಳ್ಳುವುದಲ್ಲದೆ

ಯೋಗ್ಯತೆಗೆ ತಕ್ಕಂತೆ ಅವರಿಗೆ ಪುನರ್ವಿವಾಹ ಮಾಡಿಕೊಡಬೇಕು. ಈ ಕಾರ್ಯದಲ್ಲಿ ಹಿಂದೂ ಸಮಾಜದವರು ತಮ್ಮಲ್ಲಿನ ವಿಚಾರ ಸಂಕೀರ್ಣತೆಯನ್ನು ಪೂರ್ಣವಾಗಿ ಕಿತ್ತೊಗೆಯಬೇಕು. ವಿಧವೆಯರು ದುಷ್ಟರ ಬಲೆಗೆ ಬಿದ್ದು ತಮ್ಮ ಜೀವನವನ್ನು ಕೆಡಿಸಿಕೊಳ್ಳದಂತೆ ಅವರಿಗೆ ಬೇಕಾದ ಉತ್ತಮ ಶಿಕ್ಷಣಗಳಿಗೆ ಆಶ್ರಮ ಇತ್ಯಾದಿಗಳ ವ್ಯವಸ್ಥೆಗಳನ್ನು ಅಲ್ಲಲ್ಲಿ ಏರ್ಪಡಿಸಬೇಕು. ವಿಧವಾವಿವಾಹವನ್ನು ದೇಶದಲ್ಲೆಲ್ಲಿಯೂ ಪ್ರಚುರಗೊಳಿಸಲು ಭಾಷಣ, ಲೇಖನ, ಕರಪತ್ರ, ಪುಸ್ತಕ ಇತ್ಯಾದಿಗಳ ಮುಖಾಂತರ ತೀವ್ರವಾದ ಚಳವಳವನ್ನು ಹೂಡಬೇಕು.

ಪಂಡಿತ ಕೃಷ್ಣಕಾಂತ ಮಾಲವೀಯ,

ಸಂಪಾದಕ, "ಅಭ್ಯುದಯ".

---

ಕಳೆದ ಹತ್ತಿಪ್ಪತ್ತು ವರ್ಷಗಳಿಂದ ಸಾವಿರಾರು ಸಭೆಗಳೂ ಲೆಖ್ಖವಿಲ್ಲದ ಭಾಷಣಗಳೂ ಜರಗುತ್ತಿವೆ. ಲಕ್ಷಗಟ್ಟಲೆ ರೂಪಾಯಿಗಳೂ ವೆಚ್ಚವಾಗುತ್ತಿವೆ. ಪ್ರತಿಯೊಬ್ಬ ಮುಖಂಡರೂ ತನ್ನ ನೇತೃತ್ವಕ್ಕಾಗಿ ಹಾತೊರೆಯುತ್ತಿದ್ದಾರೆ. ಯಾವುದಾದರೊಂದು ಸಾಧಾರಣ ಕಾರ್ಯವನ್ನು ಮಾಡಿ ತೀರಿಸಿದ ಮಾತ್ರಕ್ಕೆ ಜಗತ್ತನ್ನೇ ಜಯಿಸಿದಂತೆ ಹಿಗ್ಗಿಕೊಳ್ಳುತ್ತಾರೆ. ಆದರೆ ವಿಧವಾವಿವಾಹದ ಹೆಸರು ಕೇಳುತ್ತಲೇ ಇವರೆಲ್ಲರೂ ಸ್ಮೃತಿತಪ್ಪಿ ಬೀಳುತ್ತಾರೆ. ನಮ್ಮ ಜಾತಿಗೃಹಸ್ಥರು ನಮ್ಮನ್ನು ಬಹಿಷ್ಕರಿಸಿ ಬಿಡುವರು! ನಮ್ಮ ನೇತೃತ್ವವು ಕೈತಪ್ಪಿ ಹೋದೀತು! ಆದುದರಿಂದ ವಿಧವಾವಿವಾಹದ ಗೊಡವೆ ಮಾತ್ರ ನಮಗೆ ಬೇಡವೆನ್ನುವವರು ಹೆಚ್ಚು ಮಂದಿ ನಮ್ಮ ದೇಶದ ಸಂಸ್ಥೆಗಳಲ್ಲಿದ್ದಾರೆ. ಮೇಲಿಂದ ಮೇಲೆ ವಿಧವಾವಿವಾಹವನ್ನು ಸಮರ್ಥಿಸುತ್ತಾರಾದರೂ ಮಾನಸಿಕ ಸಂಕೀರ್ಣತೆ ಮತ್ತು ಮುಖಂಡತನದ ಅಭಿ

ಆಸೆಗೆ ಬಿದ್ದು ಈ ಕುರಿತು ಕ್ರಿಯಾತ್ಮಕವಾಗಿ ಮುಂದೆ ಬರಲು ಹಿಂಜರಿಯುತ್ತಿದ್ದಾರೆ. ಇಂತಹ ನೇತೃತ್ವದಿಂದ ಸಮಾಜಕ್ಕೆ ಯಾವ ಪ್ರಯೋಜನವೂ ದೊರೆಯದು. ವಿಧವೆಯರ ಉದ್ಧಾರಕ್ಕೆ ಸಂಪೂರ್ಣವಾದ ಸ್ವಾರ್ಥತ್ಯಾಗವು ಬೇಕು. ಪಾನಿಪತ ಎಂಬಲ್ಲಿನ ಗೌಡ ಬ್ರಾಹ್ಮಣಜಾತಿಯ ಕೆಲವು ಮಂದಿ ವಿಧವೆಯರು ಮುಸಲ್ಮಾನರಿಂದ ಅಪಹರಿಸಲ್ಪಡುತ್ತಿದ್ದ ಕಾರಣ ಇವರಿಂದವರನ್ನು ತಪ್ಪಿಸಲಿಕ್ಕೂ ಮತ್ತು ಇತರರು ಹೋಗದಂತೆ ಮಾಡಲಿಕ್ಕೆ ಅಲ್ಲಿಯ ವಿಧವೆಯರಿಗೆ ಪುನರ್ವಿವಾಹಕ್ಕೆ ಸಮ್ಮತಿಯನ್ನೀಯಬೇಕೆಂದು ಅಲ್ಲಿಯವರು ಗೌಡ ಬ್ರಾಹ್ಮಣ ಸಭೆಯೊಡನೆ ಅನುಮತಿ ಕೇಳಿದರು. ಆದರೆ ಸಭೆಯು ಈ ವಿನಂತಿಯನ್ನು ಕಣ್ಣುಮುಚ್ಚಿ ತಿರಸ್ಕರಿಸಿತು. ಡಿಲ್ಲಿಯ ಕಾಯಸ್ಥ ಬ್ರಾಹ್ಮಣರ ವಿಧವೆಯರೂ ಇದೇ ರೀತಿ ಪುನರ್ವಿವಾಹಕ್ಕೆ ಅನುಮತಿ ಬೇಡಲು ಅಲ್ಲಿಯೂ ಉತ್ತರ "ನಾಸ್ತಿ" ಎಂದು ದೊರೆಯಿತು. ಇಂತಹ ಮನೋವೃತ್ತಿಯನ್ನು ತ್ಯಜಿಸಬೇಕು. ವಿಧವೆಯರ ಪುನರ್ವಿವಾಹಕ್ಕೆ ಸಮ್ಮತಿಯನ್ನೀಯಬೇಕು. ಆದರೆ ಮಾತ್ರ ಹಿಂದೂ ಸಮಾಜದ ಗೌರವವು ಸ್ಥಿರವಾಗಿ ನಿಲ್ಲುವುದು.

—ಸ್ವಾಮಿ ರಾಧಾಚರಣ ಗೋಸ್ವಾಮಿ.

---

## ಮೈಸೂರು ಮಹಿಳಾ ಸಮ್ಮೇಳನದ ನಿರ್ಣಯ.

ಪತಿಯೊಡನಿದ್ದು ಕೆಲವು ಕಾಲ ಜೀವನ ನಿರ್ವಹಿಸಿದ ನಂತರ ವಿಧವೆಯಾದರೆ, ಆಕೆಗೆ ಪುನರ್ವಿವಾಹವು ಅಗತ್ಯವಿಲ್ಲ. ಪತಿಯ ಸಹವಾಸ ಮಾಡದ ಬಾಲವಿಧವೆಗೆ ಪುನರ್ವಿವಾಹ ಮಾಡಲು ಯಾವ ಅಡ್ಡಿಯೂ ಇರಬಾರದು.

—ಶ್ರೀಮತಿ ತ್ಯಾಗರಾಜಯ್ಯ.

ವಿಧವೆಯರ ಪುನರ್ವಿವಾಹವಾಗಲು ಶಾಸನ ವಿಧಿಸಿರೆಂದು ಸರಕಾರದವರನ್ನು ಬೇಡಬೇಕಾದ ಆವಶ್ಯಕತೆ ಏನು? ವಿಧವೆಯರಿಗೆ ಶಿಕ್ಷಣವನ್ನು ಕೊಡಿ; ಆ ಮೇಲೆ ಅವರು ತಮಗೆ ಉಚಿತ ಕಂಡಂತೆ ವರ್ತಿಸಲಿ.

—ಶ್ರೀಮತಿ ವಿಜಯರಾಘವಾಚಾರ್ಯ.

ಬಾಲವಿಧವಾವಿವಾಹವು ನ್ಯಾಯಸಮ್ಮತವಾಗಿರಬೇಕಾದರೆ ಶಾಸನವನ್ನೇರ್ಪಡಿಸಲೇ ಬೇಕು. ಇಲ್ಲವಾದರೆ ವಿವಾಹಿತ ವಿಧವೆಗಾಗಲೀ ಆಕೆಯ ಮಕ್ಕಳಿಗಾಗಲೀ ಪತಿಯ ಆಸ್ತಿಯಲ್ಲಿ ಸರಿಯಾದ ಹಕ್ಕು ಸಿಕ್ಕುವುದಿಲ್ಲ.

—ಶ್ರೀಮತಿ ಇಂದಿರಮ್ಮ ವಾಸುದೇವ ಮೂರ್ತಿ.



ಮಂಗಳೂರು ಭಾಷಖಾನೆ, ರಥಬೀದಿ, ಮಂಗಳೂರು.